ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಡಾ|| ಕೆ. ನಾಗಪ್ಪ ಆಳ್ವ

ರಘು ಶೆಟ್ಟಿಗಾರ್

ಪ್ರಕಟಣೆ

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ

ವಿಧಾನಸೌಧ, ಬೆಂಗಳೂರು

Dr. K. NAGAPPA ALVA

Eminent Parlimentarian Series

Written by **RAGHU SHETTIGAR**, Recording Officer (Rtd)

Karnataka Legislative Assembly Secretariat,

Vidhana Soudha, Bangalore.

**Published** by

Karnataka Legislature Library Committee

Vidhana Soudha, Bangalore-560001.

Page: 244 + xi Price: Rs. 20-00



First Edition: 2008 Copies: 2000

**Printed & Designed by**

Government Press, Bangalore.

**ಡಾ|| ಕೆ. ನಾಗಪ್ಪ ಆಳ್ವ**

ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

**ಲೇಖಕರು: ರಘು ಶೆಟ್ಟಿಗಾರ್**, ಅಭಿಲೇಖನಾಧಿಕಾರಿ (ನಿವೃತ್ತ)

ಕರ್ನಾಟಕ ವಿಧಾನಸಭಾ ಸಚಿವಾಲಯ ವಿಧಾನಸೌಧ ಬೆಂಗಳೂರು.

**ಪ್ರಕಾಶನ**

ಗ್ರಂಥಾಲಯ ಸಮಿತಿ

ಕರ್ನಾಟಕ ವಿಧಾನ ಮಂಡಲ

ವಿಧಾನಸೌಧ, ಬೆಂಗಳೂರು-560 001.

ಪುಟ: 244 + xi ಬೆಲೆ: ರೂ.20-00



ಮೊದಲ ಮುದ್ರಣ: 2008 ಪ್ರತಿಗಳು: 2,000

**ಮುದ್ರಣ ಮತ್ತು ವಿನ್ಯಾಸ**

ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2008–2009

ಅಧ್ಯಕ್ಷರು

**ಶ್ರೀ ವೀರಣ್ಣ ಮತ್ತಿಕಟ್ಟಿ**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಜಗದೀಶ ಶೆಟ್ಟರ್**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಎಂ. ನಾರಾಯಣಸ್ವಾಮಿ**

ವಿಧಾನಸಭಾ ಸದಸ್ಯರು ಹಾಗೂ ಉಪ ಸಮಿತಿಯ ಅಧ್ಯಕ್ಷರು

**ಶ್ರೀ ಕೆ. ಲಕ್ಷ್ಮೀನಾರಾಯಣ**

ವಿಧಾನಸಭಾ ಸದಸ್ಯರು

**ಶ್ರೀ ಎಸ್.ವಿ. ರಾಮಚಂದ್ರ**

ವಿಧಾನಸಭಾ ಸದಸ್ಯರು

**ಶ್ರೀ ಎನ್.ಎ. ಹ್ಯಾರೀಸ್**

ವಿಧಾನಸಭಾ ಸದಸ್ಯರು

**ಶ್ರೀ ಹೆಚ್.ಎಸ್. ಪ್ರಕಾಶ್**

ವಿಧಾನಸಭಾ ಸದಸ್ಯರು

**ಡಾ|| ಚಂದ್ರಶೇಖರ ಬಿ.ಕಂಬಾರ**

ವಿಧಾನ ಪರಿಷತ್ ಸದಸ್ಯರು

**ಶ್ರೀ ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ ಸದಸ್ಯರು

**ಡಾ|| ಶ್ರೀನಾಥ್**

ವಿಧಾನ ಪರಿಷತ್ ಸದಸ್ಯರು

## ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

### ಅಧಿಕಾರಿ – ಸಂಪಾದಕ ವರ್ಗ

---

### ಕರ್ನಾಟಕ ವಿಧಾನ ಮಂಡಲ

ಡಿ'ಸೋಜ ರಾಬಿನ್‌ಸನ್ ಪ್ರಧಾನ ಕಾರ್ಯದರ್ಶಿ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಅಪರ ಕಾರ್ಯದರ್ಶಿ (ಪ್ರ) |
| ಎಂ. ಗುರುರಾಜ | ಉಪ ಕಾರ್ಯದರ್ಶಿ |
| ಮುನೀರುನ್ನಿಸಾ | ಅಧೀನ ಕಾರ್ಯದರ್ಶಿ (ಪ್ರ) |
| ಅನಸೂಯ ಎನ್.ದೇವಗಿರಿ | ಸಹಾಯಕ ಗ್ರಂಥಪಾಲಕಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಕೃಷ್ಣೇಗೌಡ | ಅಪರ ಕಾರ್ಯದರ್ಶಿ |

# ಮುನ್ನುಡಿ

5 ಡಿಸೆಂಬರ್ 2008

ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ|| ರಾಮಮನೋಹರ ಲೋಹಿಯಾ, ಡಾ|| ಬಿ.ಆರ್. ಅಂಬೇಡ್ಕರ್, ಡಾ|| ಶಾಂಪ್ರಸಾದ್ ಮುಖರ್ಜಿ, ಡಾ|| ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಯು ಈಗಾಗಲೇ ಪ್ರಕಟಿಸುತ್ತಿದೆ. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ. ನಮ್ಮ ನಾಡಿನ ಪ್ರಗತಿಪರ ಚಿಂತಕರು, ರಾಜಕೀಯ ಮುತ್ಸದ್ದಿಗಳ ಆಶಯಗಳನ್ನು ದಾಖಲಿಸಿ ಈ ಮೂಲಕ ಅವರ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತರುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ಡಿ. ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ॥ ಲಂಕಾ ಸುಂದರಂ, ಸರದಾರ ಶರಣಗೌಡ ಇನಾಂದಾರ್, ಕೆ.ಹೆಚ್. ರಂಗನಾಥ್ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ರಘುಶೆಟ್ಟಿಗಾರ್** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ **ಡಾ॥ ಕೆ. ನಾಗಪ್ಪ ಆಳ್ವ** ಅವರ ಬಗೆಗಿನ ಈ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಇವರ ಸದನದ ಭಾಷಣಗಳು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ನಾಡಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಶಯಗಳನ್ನು ಬಿಂಬಿಸುತ್ತವೆ.

ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ವೀರಣ್ಣ ಮತ್ತಿಕಟ್ಟಿ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಜಗದೀಶ್ ಶೆಟ್ಟರ್**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

"ಪ್ರತಿಭಾವಂತ ಸಂಸದೀಯ ಪಟುಗಳ ಪುಸ್ತಕ ಮಾಲಿಕೆ" ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಉಪ-ಸಮಿತಿಯ ಕೊಡುಗೆ. ಸದುದ್ದೇಶ ಹಾಗೂ ದೂರದೃಷ್ಟಿಯಿಂದ ಹಮ್ಮಿಕೊಂಡ ಪ್ರಶಂಸಾರ್ಹ ಕಾರ್ಯ. ತನ್ಮೂಲಕ ರಾಷ್ಟ್ರ ಮತ್ತು ರಾಜ್ಯದ ರಾಜಕೀಯ ಕ್ಷೇತ್ರದಲ್ಲಿ ತಮ್ಮ ಪ್ರತಿಭೆ, ರಾಜಕೀಯ ವೈಶಿಷ್ಟ್ಯ, ತತ್ವಾದರ್ಶ, ಸಿದ್ಧಾಂತ, ಸ್ವಾತಂತ್ರ್ಯ ಹೋರಾಟದ ಹಿನ್ನೆಲೆ, ಮುಂತಾದವುಗಳ ಮೂಲಕ ಮೇರು ವ್ಯಕ್ತಿತ್ವವನ್ನು ಹೊಂದಿ ಪ್ರಜಾಸೇವೆ ಸಲ್ಲಿಸಿದ ಮಹನೀಯರುಗಳ ಬದುಕಿನ ಅನುಕರಣೀಯ ಮಜಲುಗಳನ್ನು ನೋಡಲು ಸಾಧ್ಯವಾಗಿದೆ. ಅವುಗಳನ್ನು ಪ್ರಜೆಗಳ ಅವಗಾಹನೆಗಾಗಿ ಸದಾಕಾಲವೂ ಉಳಿಸಿ-ಬೆಳೆಸುವ ತುಂಬು ಹಂಬಲವನ್ನು ಸಮಿತಿಯವರು ಹೊತ್ತಿದ್ದಾರೆ. ನಮ್ಮ ನಾಡಿನ ರಾಜಕೀಯ ಜ್ಞಾನ ಸಂಪತ್ತು ಅಕ್ಷಯವಾಗಿದ್ದು ಬಗೆದಷ್ಟೂ ಮುಗಿಯದ ತವನಿಧಿಯಾಗಿದೆ. ಆ ದಿಶೆಯಲ್ಲಿ ದೇಶ ಸೇವೆ ಸಲ್ಲಿಸಿದ ಮುತ್ಸದ್ಧಿ ರಾಜಕೀಯ ನಾಯಕರುಗಳ ಜೀವನಾದರ್ಶಗಳ ಕುರಿತು ಬರಹಗಳ ಮೂಲಕ ಬೆಳಕು ಚೆಲ್ಲುವುದು ಪ್ರಜಾಪ್ರಭುತ್ವದ ಆದ್ಯತೆಗಳಲ್ಲಿ ಒಂದಾಗಿದೆ. ಇಂಥ ಪ್ರಕಟಣೆಗಳ ಮೂಲಕ ಸಾಹಿತ್ಯ ಮತ್ತು ಸಾಂಸ್ಕೃತಿಕ ಮೌಲ್ಯವೂ ಪ್ರಾಪ್ತವಾಗುತ್ತದೆ ಎಂಬ ನಂಬುಗೆ ನಮ್ಮೆಲ್ಲರದ್ದಾಗಿದೆ. ಪಾರಂಪರಿಕ ಮತ್ತು ಆಧುನಿಕ ರಾಜಕೀಯ ಜ್ಞಾನಗಳೆರಡರ ಬೇರುಗಳನ್ನು ಕಸಿ ಹಾಕುವ, ಅದರ ಶ್ರೇಷ್ಠ ಫಲಗಳನ್ನು ಮುಂದಿನ ಪೀಳಿಗೆಗೆ ಒದಗಿಸಿ ಇಡುವ ಸ್ತುತ್ಯ ಕಾರ್ಯವನ್ನು ಸಮಿತಿಯು ತನ್ನದಾಗಿಸಿಕೊಂಡಿದೆ.

ಈ ಎಲ್ಲ ಹಿನ್ನೆಲೆಯಲ್ಲಿ ಹಿರಿಯ ಗಾಂಧೀವಾದಿ, ಹಳೆಯ ಕಾಂಗ್ರೆಸಿಗ, ಮಾಜಿ ಸಚಿವ, ಡಾ॥ ಕೆ.ನಾಗಪ್ಪ ಆಳ್ವರ ಬದುಕು-ಬರಹ ಪುಸ್ತಕ ರಚನೆಯ ದೊಡ್ಡ ಹೊಣೆಯನ್ನೂ, ಸದವಕಾಶವನ್ನೂ ಪಡೆದಿರುವುದು ನನಗೆ ತುಂಬ ಸಂತೋಷವನ್ನು ಉಂಟು ಮಾಡಿದೆ. ಈ ಕಾರ್ಯದಲ್ಲಿ ನಾನು ತೊಡಗಿಸಿಕೊಂಡಾಗಲೇ ವಿಷಯ ವ್ಯಾಪ್ತಿ, ವಿಶಾಲತೆ ಏನೆಂಬುದು ಅರಿವಾಯಿತು. ಶೋಧನೆ ಸಂಗ್ರಹಗಳ ಅವಧಿಯಲ್ಲಿ ಹಿರಿಯ ರಾಜಕಾರಣಿಗಳ, ಸಮಾಜ ಸೇವಕರ ಸಂದರ್ಶನ ಭಾಗ್ಯವೂ ನನಗೆ ಒದಗಿ ಬಂತು.

ಗಾಂಧಿ ಯುಗ ಮೌಲ್ಯದ ಆದರ್ಶ ದೇಶ ಭಕ್ತ, ಸಾಮಾಜಿಕ ಸ್ವಾಸ್ಥ್ಯ ಚಿಂತನೆ ಮಾಡುತ್ತಿದ್ದ ರಾಷ್ಟ್ರಪ್ರೇಮಿ, ವಿದ್ಯಾರ್ಥಿ ಮುಖಂಡ, ಪ್ರಸಿದ್ಧ ವೈದ್ಯ, ರಾಜಕಾರಣಿ, ಕಾರ್ಮಿಕ ಮುಖಂಡ, ಮುಂತಾಗಿ ಸಾರ್ವಜನಿಕ ಸೇವೆಯಲ್ಲಿ ತೊಡಗಿಸಿಕೊಂಡ ಬಹುಮುಖ ಪ್ರತಿಭೆಯೊಂದಿಗೆ ಡಾ॥ ಕೆ.ನಾಗಪ್ಪ ಆಳ್ವರು ಜನಾನುರಾಗಿಯಾಗಿ ಹೆಸರು ಗಳಿಸಿದವರು. ಅವರ ಕುರಿತು ಪುಸ್ತಕ ರಚನೆಯ ಗೌರವ ದೊರಕಿರುವುದು ನನಗೆ ಸಂತಸ ಮತ್ತು ಅಭಿಮಾನದ ವಿಚಾರವಾಗಿದೆ.

ಈ ಪುಸ್ತಕವು ಗ್ರಂಥಾಲಯ ಉಪ-ಸಮಿತಿಯವರ ಕೊಡುಗೆಯಾಗಿದ್ದು ಶ್ರೇಯಸ್ಸೆಲ್ಲವೂ ಸಮಿತಿಗೇ ಸಲ್ಲಬೇಕು. ಏನಾದರೂ ಕೊರತೆಗಳಿದ್ದರೆ ಅದು ಲೇಖಕನ ಮಿತಿಗಳ ಕಾರಣದಿಂದಾಗಿ ಎಂದು ಪರಿಗಣಿಸಬೇಕಾಗಿ ವಿಜ್ಞಾಪಿಸಿಕೊಳ್ಳುತ್ತೇನೆ.

ಕೊನೆಯದಾಗಿ ನಾನು ಈ ಕೃತಿಯನ್ನು ರಚಿಸುವಾಗ ಅವಕಾಶವನ್ನಿತ್ತು ಪ್ರೋತ್ಸಾಹಿಸಿ ಪ್ರಕಟಣೆಗೆ ಕಾರಣರಾದ ಗ್ರಂಥಾಲಯ ಉಪ ಸಮಿತಿಯ ಸನ್ಮಾನ್ಯ ಅಧ್ಯಕ್ಷರನ್ನು ಮತ್ತು ಎಲ್ಲ ಆದರಣೀಯ ಮಾನ್ಯ ಸದಸ್ಯರುಗಳನ್ನು ಅವರ ಹೃದಯ ವೈಶಾಲ್ಯಕ್ಕಾಗಿ ಅಭಿನಂದಿಸುತ್ತೇನೆ. ಸಮಿತಿಗೆ ಉಪಕಾರ ಸ್ಮರಣೆ ಹೇಳಬೇಕಾದುದು ನನ್ನ ಆದ್ಯ ಕರ್ತವ್ಯವಾಗಿದೆ. ಈ ಕೃತಿ ರಚನೆಯಲ್ಲಿ ಕೆಲವು ಆಧಾರ ಪುಸ್ತಕಗಳನ್ನು ಅವಲೋಕಿಸಿದ್ದೇನೆ. ಅವುಗಳ ಲೇಖಕರುಗಳಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಕೆಲಸಕಾರ್ಯಗಳಲ್ಲಿ ನನಗೆ ಮಾರ್ಗದರ್ಶನ ನೀಡಿ ಸಹಕರಿಸಿ ಪ್ರೋತ್ಸಾಹಿಸಿದ ವಿಧಾನಸಭಾ ಸಚಿವಾಲಯದ ಮಾನ್ಯ ಕಾರ್ಯದರ್ಶಿಯವರಿಗೆ, ಗ್ರಂಥಾಲಯ ಉಪ-ಸಮಿತಿಯ ಅಪರ ಕಾರ್ಯದರ್ಶಿಯವರಿಗೆ, ಜಂಟಿ ಕಾರ್ಯದರ್ಶಿಯವರಿಗೆ, ಸಂಪಾದಕರಾದ ಎಲ್.ಎನ್. ಮುಕುಂದರಾಜುರವರಿಗೆ, ಅಧೀನ ಕಾರ್ಯದರ್ಶಿಯವರಿಗೆ ಹಾಗೂ ಸಂಶೋಧನಾ ಶಾಖೆಯ ಸಿಬ್ಬಂದಿ ವರ್ಗದವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳು ಸಲ್ಲುತ್ತವೆ.

**ರಘು ಶೆಟ್ಟಿಗಾರ್**

153, ಶ್ರೀಗೌರಿ ನಿಲಯ,
3ನೇ ಅಡ್ಡರಸ್ತೆ, ಸರಸ್ವತಿ ನಗರ,
ವಿಜಯನಗರ,
ಬೆಂಗಳೂರು – 560 040.
ಮೊಬೈಲ್:– 9448168973

# ಪರಿವಿಡಿ

## ಭಾಗ – ೩

## ಸಂತಾಪ ಸೂಚನೆ



## ಗಣ್ಯರ ದೃಷ್ಟಿಯಲ್ಲಿ



## ಭಾಗ – ೪

"ಪ್ರಜಾಪ್ರಭುತ್ವದಲ್ಲಿ ನಾಯಕರಿಗೆ ಇರಬೇಕಾದ ಮುಖ್ಯ ಗುಣಗಳು –
ಪ್ರಜಾನಿಷ್ಠೆ, ರಾಷ್ಟ್ರಪ್ರೇಮ, ಸಾಮಾಜಿಕ–ಸಾಂಸ್ಕೃತಿಕ ಸಮನ್ವಯ,
ಕೆಲಸ ಮಾಡುವುದರ ಬಗ್ಗೆ ಪ್ರೀತಿ"

– ಪ್ಲೇಟೋ

## ಡಾ॥ ಕೊಡ್ಮಾಣ್ ನಾಗಪ್ಪ ಆಳ್ವ

ಕರ್ನಾಟಕ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯು ತನ್ನದೇ ಆದ ವೈಶಿಷ್ಟ್ಯಗಳುಳ್ಳ ಪ್ರದೇಶ. ಜಿಲ್ಲೆಯ ನದಿ–ತೊರೆಗಳು, ಬೆಟ್ಟ-ಬಯಲುಗಳು, ಭೌಗೋಳಿಕ ಸೌಂದರ್ಯ, ಜನರ ನಡೆ–ನುಡಿ, ಜೀವನ ವೃತ್ತಿ ಮುಂತಾದವುಗಳೊಂದಿಗೆ ಅನನ್ಯ ಪ್ರಕೃತಿಯ ಸೊಬಗನ್ನು ನೀಡುವ ತವರೂರಾಗಿದೆ. ನಿಸರ್ಗವೇ ಈ ಪ್ರದೇಶವನ್ನು ದೇಶದ ಉಳಿದ ಭೂ–ಭಾಗಗಳಿಂದ ಬೇರ್ಪಡಿಸಿದೆ. ಇದರಿಂದ ಇಲ್ಲಿನ ಜನರ ಸಂಸ್ಕೃತಿಯಲ್ಲಿ ತನ್ನದೇ ಆದ ವೈಶಿಷ್ಟ್ಯ ಎದ್ದು ಕಾಣುವಂತಾಗಿದೆ. ಈ ಜನರು ಆಚಾರ–ವಿಚಾರ, ಉಣಿಸು–ತಿನಿಸು, ಉಡುಗೆ–ತೊಡುಗೆ, ನಂಬಿಕೆ–ನಡವಳಿಕೆಗಳಲ್ಲಿ ಇಂದೂ ಕೂಡ ಅನೂಚಾನವಾಗಿ ತಮ್ಮತನವನ್ನು ಉಳಿಸಿಕೊಂಡು ಬಂದಿದ್ದಾರೆ. ಹಾಗೆಯೇ ದಕ್ಷಿಣ ಕನ್ನಡಿಗತನವೆಂಬುದು ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ವಿಶಿಷ್ಟತೆಗೆ, ಗಣನೀಯ ಉನ್ನತ ಸಾಧನೆಗೆ, ಮುಂತಾಗಿ ಹಲವಾರು ಸಂಗತಿಗಳಿಗೆ ಹೆಗ್ಗುರುತಾಗಿ ಗುರುತಿಸಲ್ಪಡುತ್ತಿದೆ.

ಭಾರತ ದೇಶದ ಸಾಮೂಹಿಕ ಧಾರ್ಮಿಕ, ಸಾಮಾಜಿಕ ಸಮಾನತೆಯ ಒಂದು ಉತ್ತಮ ನಿದರ್ಶನವಾಗಿ ದಕ್ಷಿಣ ಕನ್ನಡ ಜಿಲ್ಲೆಯು ಶೋಭಾಯಮಾನವಾಗಿದೆ. ಈ ಮಾದರಿ ಜಿಲ್ಲೆಯ ಬಂಟ್ವಾಳ ತಾಲ್ಲೂಕು ಹಲವಾರು ಹೆಗ್ಗುರುತುಗಳಿಂದಾಗಿ ಪ್ರಖ್ಯಾತಿ ಪಡೆದಿರುತ್ತದೆ. 1852ರಲ್ಲಿ ಬಂಟ್ವಾಳವು ಮಂಗಳೂರು ತಾಲ್ಲೂಕಿನೊಂದಿಗೆ ವಿಲೀನಗೊಂಡಿತು. ತದನಂತರ, 1954ರಲ್ಲಿ ಬಂಟ್ವಾಳ ತಾಲ್ಲೂಕನ್ನು ರದ್ದುಪಡಿಸಿ ಬೆಳ್ತಂಗಡಿ ತಾಲ್ಲೂಕಿನೊಂದಿಗೆ ಸೇರಿಸಲಾಯಿತು. ಪುನಃ 1959ರಲ್ಲಿ ಬಂಟ್ವಾಳವನ್ನು ತಾಲ್ಲೂಕು ಎಂದು ಘೋಷಿಸಲಾಯಿತು. ಕನ್ನಡ ಸಾರಸ್ವತ ಲೋಕದಲ್ಲಿಯೂ ಕೂಡ ಬಂಟ್ವಾಳದವರ ಸಾಹಿತ್ಯಿಕ ಹಿರಿಮೆ ನೆನಪಿಡುವಂತಹದ್ದು. ಮೂರು ಜನ ಸಾಹಿತ್ಯ ದಿಗ್ಗಜರುಗಳಾದ ಪಂಜೆ ಮಂಗೇಶರಾಯರು, ಮುಳಿಯ ತಿಮ್ಮಪ್ಪಯ್ಯರವರು, ಹಾಗೂ ಕಡೆಂಗೊಡ್ಲು ಶಂಕರಭಟ್ಟರು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದುದು ತಾಲ್ಲೂಕಿನ ನಾಡು–ನುಡಿಯ ಅಭಿಮಾನಕ್ಕೆ ಸಾಕ್ಷಿಯಾಗಿದೆ. ಇಂಥ ಮಲೆನಾಡು–ಕರಾವಳಿಗಳ ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಂಡ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕು ಕೊಡ್ಮಾಣ್ ಡಾ॥ ಕೆ.ನಾಗಪ್ಪ ಆಳ್ವರವರ ಹುಟ್ಟೂರು.

ಕುದುರೆಮುಖದಲ್ಲಿ ಹುಟ್ಟಿ, ಬಂಗಾಡಿ ಕಣಿವೆಯಲ್ಲಿ ಹರಿದು, ಕುಮಾರಧಾರಾ ನದಿಯನ್ನು ಉಪ್ಪಿನಂಗಡಿಯಲ್ಲಿ ಸಂಧಿಸಿ, ಬಂಟ್ವಾಳ ಪ್ರದೇಶದಲ್ಲಿ ಹರಿದು ಗುಡ್ಡ–ಬೆಟ್ಟಗಳನ್ನು ನಿರ್ಮಿಸಿ ಅಲ್ಲಿಯೇ ನಡುವೆ ಹರಿದು, ಹಲವು ಕುದುರು(ನಡುಗಡ್ಡೆ)ಗಳನ್ನು

ನಿರ್ಮಿಸಿ, ಮಂಗಳೂರಿನಲ್ಲಿ ಗುರುಪುರ ನದಿಯನ್ನು ಸೇರುವ ಪರಮ ಪಾವನೆ **ನೇತ್ರಾವತಿಯು** ಬಂಟ್ವಾಳಿಗರಿಗೆ ಜೀವನದಿ. **"ಪಲ್ಗುಣಿ"** ಕೂಡ ಇಲ್ಲಿನ ಪವಿತ್ರ ನದಿ. ನಾಡಿನ ಪುಣ್ಯಕ್ಷೇತ್ರಗಳಲ್ಲೊಂದಾದ, ***'ಪೊಳಲಿ ರಾಜರಾಜೇಶ್ವರಿ'*** ಇಲ್ಲಿನ ಅಧಿದೇವತೆ. ಹತ್ತಾರು ವೈಶಿಷ್ಟ್ಯತೆಗಳೊಂದಿಗೆ ದೇಶ-ವಿದೇಶಗಳ ಭಕ್ತ ಜನರ ಹೃನ್ಮನ ಸೆಳೆದ ಈ ದೇವಾಲಯವು ಕೊಡ್ಮಾಣ್ ಗುತ್ತುವಿನ ಆಳ್ವ ಕುಟುಂಬದವರಿಗೆ ಪರಂಪರೆಯಿಂದಲೂ ಆಧರಣೀಯವೂ, ಪೂಜ್ಯ ಪವಿತ್ರ ಅನುಗ್ರಹ ಸನ್ನಿಧಿಯೂ ಹೌದು. ತಾಯಿ ರಾಜರಾಜೇಶ್ವರಿಯ ಕೃಪೆಯಿಂದ ಮುದ್ದು ಕಂದ ನಾಗಪ್ಪ ಜನಿಸಿದ ಎಂದು ಅವರ ತಂದೆ ಅತ್ತಾವರ ದೇವು ಆಳ್ವ, ತಾಯಿ ವಿಠ್ಠಮ್ಮ ಆಳ್ವರವರು ಕೊಂಡಾಡುತ್ತಾರೆ. ಸದಾ ಹಸನ್ಮುಖಿಯಾಗಿ ಆಕರ್ಷಣೀಯವಾಗಿದ್ದ ನಾಗಪ್ಪರವರು ಕೊಡ್ಮಾಣ್ ಗುತ್ತಿನ ಮುದ್ದುಮಗುವಾಗಿ ಬೆಳೆದರು.

## ಮನು ಮತ ಮೀರಿದ ಅಳಿಯಕಟ್ಟು ಕುಟುಂಬ

ಜಿಲ್ಲೆಯ ಬಂಟ ಜನಾಂಗದವರ ***"ಗುತ್ತು"*** ಕೌಟುಂಬಿಕ ವ್ಯವಸ್ಥೆಯು ಹಿಂದೆ ಒಂದು ರೀತಿಯಲ್ಲಿ ಗ್ರಾಮಾಡಳಿತ ಕೇಂದ್ರಗಳಾಗಿದ್ದವು. ಬಂಟ ಸಮಾಜದ ಇಂಥ ***"ಗುತ್ತು"*** ಗಳಲ್ಲಿ ಕೊಡ್ಮಾಣ್ ಗುತ್ತು ಕೂಡ ಒಂದು. ಅದೇ ರೀತಿಯಲ್ಲಿ ಜಿಲ್ಲೆಯ ಮಾತೃ ಮೂಲ ಕೌಟುಂಬಿಕ ಪದ್ಧತಿಗೆ ***"ಅಳಿಯಕಟ್ಟು"*** ಎನ್ನುತ್ತಾರೆ. ಈ ಜಿಲ್ಲೆಯ ಎಪ್ಪತ್ತೈದಕ್ಕಿಂತ ಹೆಚ್ಚು ಜನರು ಅಳಿಯ ಕಟ್ಟನ್ನು ಹೊಂದಿ ಬಾಳಿದವರು. ಪರಂಪರಾನುಗತವಾಗಿ ನಡೆದು ಬಂದ ಅಳಿಯಕಟ್ಟಿಗೆ ಸಾಮಾಜಿಕ ಒಪ್ಪಿಗೆಯ ಜೊತೆಗೆ ಬಹಳ ಹಿಂದಿನಿಂದ ಕಾನೂನಿನ ಶ್ರೀರಕ್ಷೆಯೂ ಇತ್ತು. ನಾಗಪ್ಪ ಆಳ್ವರವರು ***"ಅಳಿಯಕಟ್ಟು"*** ಕೌಟುಂಬಿಕ ಪರಿಸರದಿಂದ ಬಂದವರು. ಪಿತೃಮೂಲ ಪದ್ಧತಿಯವರಿಗೆ ಅಪರಿಚಿತವೂ ಕೌತುಕಕಾರಿಯೂ ಆಗಿರುವ ***"ಅಳಿಯಕಟ್ಟು"*** ಸ್ತ್ರೀ ಪ್ರಾಧಾನ್ಯ ಪಡೆದ ಒಂದು ಸಾಮಾಜಿಕ ವ್ಯವಸ್ಥೆ. ಇಲ್ಲಿ ಹೆಣ್ಣಿಗೆ ಹೆಚ್ಚಿನ ಗೌರವಾದರಗಳು ಮಾತ್ರವಲ್ಲ, ಹಕ್ಕು ಬಾದ್ಯತೆಗಳು ಕೂಡ ಇವೆ. ಹೆಣ್ಣು ಅಳಿಯಕಟ್ಟಿನ ಮೂಲ ಕೇಂದ್ರ. ***"ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾ:"*** ಎನ್ನುವ ಮನುವಿನ ಮತವನ್ನು ಮೀರಿ ಅಳಿಯಕಟ್ಟು ಬೆಳೆದಿದೆ. ***"ಗುತ್ತು ಮತ್ತು ಅಳಿಯಕಟ್ಟಿ"***ನ ಗುಣ ವಿಶೇಷತೆಗಳನ್ನು ತನ್ನದಾಗಿಸಿಕೊಂಡು ಮೂಡಿ ಬಂದ ಆಳ್ವರವರು ಪಾರಂಪರಿಕ ಹಾಗೂ ಆಧುನಕತೆಯ ಆರಂಭ ಕಾಲದ ಫಲವನ್ನು ಪಡೆದುಕೊಳ್ಳಲು ಅನುಕೂಲವಾಯಿತು. ತುಳುನಾಡು ಪ್ರದೇಶವೆಂದು ಕರೆಯಲ್ಪಡುವ ಈ ಭಾಗದ ಜನರ ಆಡು ಭಾಷೆ ತುಳು. ತುಳು ಭಾಷೆಯು ದಕ್ಷಿಣ ಭಾರತದ ಪ್ರಾಚೀನ ಭಾಷೆಗಳಲ್ಲಿ ಒಂದಾಗಿದ್ದು, ದ್ರಾವಿಡ ಭಾಷಾ ವರ್ಗಗಳಲ್ಲಿ ಪ್ರಮುಖ ಸ್ಥಾನ ಪಡೆದುಕೊಂಡಿದೆ. ತುಳು ಭಾಷೆಯು

ಕನ್ನಡವಲ್ಲವೆಂದು ಮೇಲ್ನೋಟಕ್ಕೆ ಕಂಡರೂ ತುಳು ಮತ್ತು ಕನ್ನಡ ಒಂದೇ ಆಗಿದೆ. 1840ಕ್ಕಿಂತಲೂ ಹಿಂದೆ ತುಳು ಭಾಷೆಯನ್ನು ಕನ್ನಡ ಲಿಪಿಯಲ್ಲಿ ಬರೆಯುತ್ತಿದ್ದರೆಂದು ತಿಳಿದು ಬರುತ್ತದೆ. ಸಾವಿರದ ಒಂಬೈನೂರ ಎಂಟನೆಯ ಇಸವಿಯ ಅಕ್ಟೋಬರ್ ತಿಂಗಳ ಹದಿನೆಂಟರಂದು ಆಳ್ವರ ಜನನ. ತಂದೆ ಅತ್ತಾವರ ಗುತ್ತು ದೇವು ಆಳ್ವ, ತಾಯಿ ಕೊಡ್ಮಾಣ್ ವಿಠಮ್ಮ ಆಳ್ವ. ನಾಲ್ಕು ಜನ ಮಕ್ಕಳಲ್ಲಿ ನಾಗಪ್ಪ ಆಳ್ವರವರು ಕಿರಿಯವರು. ಶುದ್ಧ ಮನಸ್ಸಿನ ಮುಗ್ಧ ಗ್ರಾಮೀಣ ಜನತೆಯ ನಡುವೆ ತನ್ನ ಬಾಲ್ಯವನ್ನು ಕಳೆದ ನಾಗಪ್ಪ ಆಳ್ವರವರು ಪರಿಸರ ಮತ್ತು ಗ್ರಾಮೀಣ ಬದುಕಿನಿಂದ ಬಹಳಷ್ಟು ಪ್ರಭಾವಿತರಾದರು.

## ರಾಷ್ಟ್ರಭಿಮಾನಿ ಕುಟುಂಬ

ಡಾ॥ ಕೆ.ನಾಗಪ್ಪ ಆಳ್ವರವರ ಸಹಧರ್ಮಿಣಿ ಪಾವೂರು ಗುತ್ತು ತ್ಯಾಂಪ ಪೂಂಜರವರ ಮಗಳಾದ ಕಲ್ಯಾಣಿ. ಸುಗುಣೆ, ಗುಣಸಂಪನ್ನೆ, ಶ್ರೀಮತಿ ಕಲ್ಯಾಣಿಯವರು ವೈವಾಹಿಕ ಜೀವನದುದ್ದಕ್ಕೂ ಸಂತೃಪ್ತಿಯ ಬಾಳು ಬಾಳಿದವರು. ನಾಗಪ್ಪ ಆಳ್ವ ದಂಪತಿಗಳಿಗೆ ಮೂರು ಗಂಡು ಹಾಗೂ ಒಬ್ಬ ಹೆಣ್ಣು ಮಗಳು. ಹಿರಿಯ ಪುತ್ರ ಶ್ರೀ ಮೋಹನದೇವ ಆಳ್ವರವರು ಉದ್ಯಮಿಯಾಗಿದ್ದು, ಬೆಂಗಳೂರು ಮಹಾನಗರ ಪಾಲಿಕೆಯ ಕಾರ್ಪೋರೇಟರ್ ಆಗಿದ್ದವರು. ಅವರು ಸಮಾಜ ಸೇವಕರೆಂದು ಗುರುತಿಸಲ್ಪಟ್ಟವರು. ಹಲವಾರು ಸಮಾಜ ಸೇವಾ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ, ಹಾಗೂ ಅವುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸೇವಾಕಾರ್ಯಗಳಲ್ಲಿ ನಿರತರಾದವರು. ದ್ವಿತೀಯ ಪುತ್ರ ಡಾ॥ ಜೈಪ್ರಕಾಶ ಆಳ್ವರವರು ಬೆಂಗಳೂರಿನಲ್ಲಿ ವೈದ್ಯಕೀಯ ಕ್ಷೇತ್ರದಲ್ಲಿ ಹೆಸರು ಮಾಡಿದವರು. ತಮ್ಮ ವೃತ್ತಿಯೊಂದಿಗೆ ಸೇವಾ ಮನೋಭಾವನೆಯನ್ನೂ ಮೈಗೂಡಿಸಿಕೊಂಡ ಇವರು ಅನೇಕ ಸಂಘ-ಸಂಸ್ಥೆಗಳ ಸೇವಾ ಚಟುವಟಿಕೆಗಳಲ್ಲಿ ಕಾರ್ಯನಿರತರಾಗಿದ್ದಾರೆ. ತೃತೀಯ ಪುತ್ರ ಡಾ॥ಜೀವರಾಜ್ ಆಳ್ವರವರು ಎಲ್ಲರಿಗೂ ಚಿರಪರಿಚಿತ ರಾಜಕಾರಣಿಯಾಗಿ ಬಾಳಿದವರು. ತಮ್ಮ ಬಹುಮುಖ ರಾಜಕೀಯ ವ್ಯಕ್ತಿತ್ವದಿಂದಾಗಿ ಜನಮನ ಗೆದ್ದವರು. ಸಂಘಟನಾ ಚತುರ, ಉತ್ತಮ ವಾಗ್ಮಿ, ರಾಜಕೀಯ ಮುತ್ಸದ್ದಿಯಾಗಿದ್ದು ಅಪಾರ ಜನಪ್ರಿಯತೆಯನ್ನು ಗಳಿಸಿದವರಾಗಿದ್ದರು. ಜನತಾ ದಳ ಸರಕಾರದಲ್ಲಿ ಸಚಿವರಾಗಿ ತಮ್ಮ ಅನುಭವದ ಆಡಳಿತ ನೀಡಿದ್ದವರು. ಏಕೈಕ ಪುತ್ರಿ ಡಾ॥ ಸರೋಜಿನಿಯವರು ತಂದೆ-ತಾಯಿಗಳ ಮಾರ್ಗದರ್ಶನದಲ್ಲಿ ಗೃಹ ವಿಜ್ಞಾನವಲ್ಲಿ ಉನ್ನತ ಶಿಕ್ಷಣ ಪಡೆದು ವಿವಾಹಿತರಾಗಿ ಈಗ ವಿದೇಶದಲ್ಲಿ ನೆಲೆಸಿದ್ದಾರೆ. ತಮ್ಮ ಮಕ್ಕಳಿಗೆ ರಾಷ್ಟ್ರೀಯ ನಾಯಕರುಗಳ ಹೆಸರನ್ನಿಟ್ಟು ಕರೆಯುವ ಮೂಲಕ ಹಾಗೂ ರಾಷ್ಟ್ರೀಯ ಹಬ್ಬ-ದಿನಾಚರಣೆಗಳನ್ನು

ಮನೆಯಲ್ಲಿ ತಪ್ಪದೆ ಆಚರಿಸುವ ಮೂಲಕ ಮಹಾನ್ ನಾಯಕರುಗಳ ಹೆಸರುಗಳನ್ನು ತಮ್ಮ ಕುಟುಂಬದಲ್ಲಿ ಅಚ್ಚಳಿಯದೆ ಉಳಿಯುವಂತೆ ಮಾಡಿದ ಆಳ್ವ ದಂಪತಿಗಳು, ಮಕ್ಕಳಲ್ಲಿ ಸನ್ನಡತೆ ಮತ್ತು ವಾತ್ಸಲ್ಯಮಯ ಗುಣ, ನಡತೆ, ಪರೋಪಕಾರಿ ಮನೋಭಾವನೆ ತುಂಬಿ, ಪಾಲಿಸಿ, ಮಾರ್ಗದರ್ಶನ ನೀಡುವಲ್ಲಿ ಯಶಸ್ವಿಯಾಗಿದ್ದಾರೆ.

## ಬಾಲ್ಯ ಜೀವನ ಮೌಲ್ಯಗಳ ಪಾಠ

ಬಾಲ್ಯವು ಜೀವನದ ಅಸ್ತಿಭಾರ ಶಿಲೆ. ಈ ಅವಧಿಯಲ್ಲಿಯೇ ಜೀವನದ ಕಟ್ಟಡವು ನಿಲ್ಲುತ್ತದೆಂಬ ನುಡಿಗಟ್ಟು ಹೇಳುವ ಮಾತುಗಳು ನಿತ್ಯ ಸತ್ಯ. ನಾಗಪ್ಪ ಆಳ್ವರ ಬಾಲ್ಯದ ಬೆಳವಣಿಗೆ ಪ್ರಕ್ರಿಯೆಯಲ್ಲಿ ಪರಿಸರದಿಂದ ಕಲಿಯುವುದರ ಜೊತೆಗೆ ಪ್ರೀತಿ ತುಂಬಿದ ಕೌಟುಂಬಿಕ ಮಾರ್ಗದರ್ಶನದೊಂದಿಗೆ ಯೋಗ್ಯ ಸಲಹೆ–ಸೂಚನೆಗಳು ಅವರಿಗೆ ಯಥೇಚ್ಛವಾಗಿ ದೊರಕಿದವು. ಯೌವನಪೂರ್ವದ ಮಾನಸಿಕ ನಿಲುವುಗಳನ್ನು ರೂಪಿಸುವ ಆ ಮಹತ್ವಪೂರ್ಣ ವಯಸ್ಸಿನಲ್ಲಿ ಹಾದುಹೋಗಲು ತಂದೆ–ತಾಯಿಗಳು ಅಗತ್ಯ ಗಮನ ನೀಡಿ ನೆರವಾದರು. ಅಂದಿನ ಕಾಲದಲ್ಲಿ ಬಂಟ ಸಮಾಜದಲ್ಲಿ ಶೈಕ್ಷಣಿಕ ಅರ್ಹತೆಗೆ ವಿಶೇಷ ಸ್ಥಾನಮಾನವಿತ್ತು.

ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕ ಕಡಲ ತಡಿಯ ಈ ಭೂಭಾಗಕ್ಕೆ ಮೊದಲು ಬಂತೆಂಬುದು ಐತಿಹಾಸಿಕ ಸತ್ಯ. ಅದರಲ್ಲಿನ ಸ್ವೀಕಾರಾರ್ಹ ಅಂಶಗಳಲ್ಲಿನ ಶೈಕ್ಷಣಿಕ ಒಳಿತನ್ನು ತನ್ನದಾಗಿಸಿಕೊಂಡು ತಮ್ಮತನವನ್ನು ಕಾಯ್ದುಕೊಂಡು ಬಂದವರು ಬಂಟ ಸಮಾಜದವರು. ಶಿಕ್ಷಣ ಕ್ಷೇತ್ರದಲ್ಲಿ ಮುನ್ನಡೆ ಸಾಧಿಸುವ ಪರಿಪಾಠವನ್ನು ಬಂಟ ಸಮಾಜದವರು ಹೊಂದಿದ್ದು ಇಂದಿಗೂ ಮೇಲ್ಮೆಯ ಸ್ಥಾನ ಕಾಪಾಡಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಕೊಡ್ಮಾಣ್ ಗುತ್ತುವಿನ ಮಕ್ಕಳಿಗೆ ಹೆಚ್ಚಿನ ಶಿಕ್ಷಣ ಕೊಡುವಲ್ಲಿ ಕುಟುಂಬದವರು ಅತೀವ ಆಸಕ್ತಿ ಮತ್ತು ಮುತುವರ್ಜಿ ಹೊಂದಿದ್ದರು. ಹಾಗಾಗಿ, ಶೈಕ್ಷಣಿಕ ಅಭಿರುಚಿಯನ್ನು ಹೆಚ್ಚಾಗಿ ಹೊಂದಿದ್ದ ನಾಗಪ್ಪರವರು ಸಹಜವಾಗಿಯೇ ಪ್ರಾಥಮಿಕ ಮತ್ತು ಪ್ರೌಢ ವಿದ್ಯಾಭ್ಯಾಸವನ್ನು ಮಂಗಳೂರಿನ ಸರಕಾರಿ ಕಲಾ ಮತ್ತು ವಿಜ್ಞಾನ ಕಾಲೇಜಿನಲ್ಲಿ ಪಡೆದು, ವೈದ್ಯಕೀಯ ಶಿಕ್ಷಣಕ್ಕಾಗಿ ಮದ್ರಾಸ್‌ನ ಮೆಡಿಕಲ್ ಕಾಲೇಜು ಸೇರಿಕೊಂಡರು.

## ದೇಶಾಭಿಮಾನದ ಆರಂಭಿಕ ಹೆಜ್ಜೆಗಳು

ನಾಗಪ್ಪ ಆಳ್ವರವರಿಗೆ ಪ್ರಾಥಮಿಕ ಶಿಕ್ಷಣದ ಹಂತದಲ್ಲಿಯೇ ಮಹಾತ್ಮಾ ಗಾಂಧೀಜಿಯವರ ಜೀವನದ ಪ್ರಭಾವವು ಗಾಢವಾಗಿ ಪರಿಣಾಮ ಬೀರಿತ್ತು. ಅವರು ಚಿಕ್ಕವರಾಗಿದ್ದಾಗಲೇ ರಾಷ್ಟ್ರೀಯ ಚಳವಳಿಯು ಸಾಮೂಹಿಕ ಚಳವಳಿಯಾಗಿ ಮಾರ್ಪಾಟು ಹೊಂದಲು ಪ್ರಾರಂಭಿಸಿತ್ತು. ಓದಿನ ಜೊತೆಗೆ ರಾಜಕೀಯ ಆಸಕ್ತಿಯೂ ಹೆಚ್ಚಾಗಿ ಮೂಡಲಾರಂಭಿಸಿತು. ರಾಷ್ಟ್ರೀಯ ಚಳವಳಿಯ ಮಹಾ ಪ್ರವಾಹದಲ್ಲಿ ಗಾಂಧೀವಾದದ ಪ್ರಭಾವವೇ ಅತ್ಯಂತ ಪ್ರಧಾನವಾಗಿತ್ತು. ಹಾಗಾಗಿ, ನಾಗಪ್ಪ ಆಳ್ವರವರೂ ಸೇರಿದಂತೆ ಬಹುಪಾಲು ವಿದ್ಯಾರ್ಥಿಗಳ ಒಲವು ಕಾಂಗ್ರೆಸ್ ಪ್ರತಿನಿಧಿಸುತ್ತಿದ್ದ ರಾಷ್ಟ್ರೀಯ ಚಳವಳಿಯ ಕಡೆಗಿತ್ತು.

ಆಳ್ವರಲ್ಲಿ ರಾಷ್ಟ್ರಾಭಿಮಾನವು ಹಳ್ಳಿಯ ಶಾಲೆಯಲ್ಲಿ ಆರಂಭಗೊಂಡು ದಿಲ್ಲಿಯ ರಾಜ್ಯ ಸಭೆವರೆಗೂ ವಿವಿಧ ಅಧಿಕಾರ ಮತ್ತು ಅಧಿಕಾರೇತರ ಸ್ಥಾನಗಳಲ್ಲಿ ಹಾಗೂ ಅವರ ವೈಯಕ್ತಿಕ ಜೀವನದಲ್ಲಿಯೂ ಏಕಪ್ರಕಾರವಾಗಿ ಕೊನೆಯ ತನಕವೂ ಉಳಿದುಕೊಂಡು ಬಂದಿರುವುದು ಅವರ ದೇಶಾಭಿಮಾನದ ಅಚಲ ಸಂದೇಶವಾಗಿದೆ.

## ರಾಷ್ಟ್ರ ಸೇವಕರ ಆದರ್ಶ

ಮುಂದೆ 1925ರಲ್ಲಿ ಮಂಗಳೂರು ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ದೇಶಭಕ್ತ ಕಾರ್ನಾಡು ಸದಾಶಿವರಾಯರ ದರ್ಶನದಿಂದ ಆಳ್ವರಲ್ಲಿ ಅಂಕುರಿಸಿದ್ದ ರಾಷ್ಟ್ರೀಯ ಮನೋವೃತ್ತಿಯು ಬೆಳೆಯುತ್ತ ಮುನ್ನಡೆಯಿತು. ಕಾರ್ನಾಡು ಸದಾಶಿವರಾಯರು ದೇಶದ ಜನತೆಗೆ ಮಾಡಿದ ಸೇವೆ, ತ್ಯಾಗಗಳು ಆಳ್ವರ ಮೇಲೆ ತೀಕ್ಷ್ಣವಾದ ಪ್ರಭಾವವನ್ನುಂಟು ಮಾಡಿತ್ತು. ದ.ಕ. ಜಿಲ್ಲೆಯಲ್ಲಿ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಮಹಾತ್ಮರ ಮುಂದಾಳತ್ವದಲ್ಲಿ ಕಾಂಗ್ರೆಸ್ ಸಂಸ್ಥೆಯನ್ನು ಸ್ಥಾಪಿಸಿದವರು ಕಾರ್ನಾಡು ಸದಾಶಿವರಾಯರು. ಅವರು ಜಿಲ್ಲೆಯ ಅತ್ಯಂತ ಶ್ರೀಮಂತ ತಂದೆಯ ಏಕಮಾತ್ರ ಪುತ್ರರಾಗಿ, ಸ್ವತಃ ಶ್ರೇಷ್ಠ ವಕೀಲರಾಗಿಯೂ ಇದ್ದವರು. ಅವರು ಒಮ್ಮೆಲೇ ಮಾತೃಭೂಮಿಯ ಬಿಡುಗಡೆಗಾಗಿ ಗಾಂಧೀಜಿಯವರ ಕರೆಯಂತೆ ಅಸಹಕಾರ ಆಂದೋಳನಕ್ಕೆ ಧುಮುಕಿ ಹೋರಾಡಿ, ಹೋರಾಟಗಾರರಿಗೆ ಸರ್ವ ವಿಧದ ನೆರವು ನೀಡಿಯೂ ಕೊನೆಗೆ ಸರ್ವಸ್ವವನ್ನೂ ಕಳೆದುಕೊಂಡವರು. ಹೀಗಿದ್ದರೂ ಅವರು ಶಾಂತರೂ, ಪ್ರಸನ್ನರೂ, ನಿಗರ್ವಿಗಳೂ, ಯಾವುದೇ ಸಹಾಯ–ಸಹಕಾರಗಳನ್ನು

ಅಪೇಕ್ಷೆ ಪಡದವರೂ ಆಗಿದ್ದರು. ಒಮ್ಮೆ ಫೈಜಪುರ ಕಾಂಗ್ರೆಸ್ ಸಮ್ಮೇಳನಕ್ಕೆ ಹೋದವರು ನಡುಗುವ ಚಳಿಗೆ ಉಡಲು ಸಾಕಷ್ಟು ಬಟ್ಟೆಗಳಿಲ್ಲದೆ ಶೀತಜ್ವರ ಬಾಧಿತರಾಗಿ ಸ್ವರ್ಗಸ್ಥರಾದರು. ಕಾರ್ನಾಡು ಸದಾಶಿವರಾಯರ ತತ್ವಾದರ್ಶಗಳು, ತ್ಯಾಗ–ಸೇವಾ ಮನೋಭಾವನೆಗಳು, ಯುವಕ ನಾಗಪ್ಪ ಆಳ್ವರವರ ರಾಷ್ಟ್ರಾಭಿಮಾನವನ್ನು ಸೂರ್ಮಡಿಗೊಳಿಸಿತು.

ಕಾಲೇಜಿನಲ್ಲಿ ವಿದ್ಯಾರ್ಥಿ ದೆಸೆಯಿಂದಲೇ ಆಳ್ವರವರ ನಾಯಕತ್ವದ ಗುಣ ವಿಶೇಷತೆಗಳು ಹೊರಹೊಮ್ಮಲಾರಂಭಿಸಿ, ಅವರು ವಿದ್ಯಾರ್ಥಿ ಮುಖಂಡರಾಗಿ ರೂಪುಗೊಳ್ಳತೊಡಗಿದರು. ತನ್ನ ಸಹಪಾಠಿಗಳೊಂದಿಗೆ ಒಲುಮೆಯಿಂದ ಸಮರಸವಾಗಿ ಬಾಳುವಂತಹ ಕಲೆಯೊಂದಿಗೆ ಬೆರೆತು, ಬಾಳಿ, ಉಳಿದವರನ್ನು ಪ್ರಿಯವಾಗಿ ತಮ್ಮೊಂದಿಗೆ ಸೆಳೆದುಕೊಳ್ಳುವ ವಾತ್ಸಲ್ಯಮಯ ಗುಣದಿಂದಾಗಿ ನಾಯಕತ್ವದ ಬದುಕಿಗೆ ಶ್ರೀಕಾರ ಹಾಕಿ ಯಶಸ್ವಿಯಾದರು. ಈ ಅವಧಿಯಲ್ಲಿಯೇ ಒಬ್ಬ ಚತುರ ಸಂಘಟನಾಕಾರರಾಗಿ ಬೆಳೆದು ನಿಂತರು. "ತ್ಯಾಗ, ಪ್ರೀತಿ, ಕರುಣೆ, ವಿನಯ, ಪ್ರಾಮಾಣಿಕತೆಗಳೇ ನಿಜವಾದ ಶಿಕ್ಷಣ" ಎಂದ ಸ್ವಾಮಿ ವಿವೇಕಾನಂದರ ಅಮೃತವಾಣಿಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ನಾಗಪ್ಪ ಆಳ್ವರವರು ಸಂಕಲ್ಪ ಮಾಡಿದರು.

## ಗಾಂಧಿ ತತ್ವ ಪಾಲನೆಯೊಂದಿಗೆ ವೈದ್ಯಕೀಯ ಶಿಕ್ಷಣ

ನಾಗಪ್ಪ ಆಳ್ವರಲ್ಲಿ ಅಡಗಿದ್ದ ದೇಶ ಪ್ರೇಮ ಹೊರಹೊಮ್ಮಲು ಆ ಸಮಯದಲ್ಲಿ ನಡೆಯುತ್ತಿದ್ದ ಚಳವಳಿಗಳು ಪ್ರೇರಣೆಯಾದವು. ಅಹಿಂಸಾ ಚಳವಳಿಯಿಂದ ಕ್ರಾಂತಿಯನ್ನು ಹುಟ್ಟು ಹಾಕುವ ಪರಿಕಲ್ಪನೆಯು ಮನುಕುಲಕ್ಕೆ ಗಾಂಧೀಜಿಯವರು ಕೊಟ್ಟ ಬಳುವಳಿ. 'ನನ್ನ ದೇಶಪ್ರೇಮ ನನ್ನ ಧರ್ಮಕ್ಕೆ ಪೂರಕವಾದುದು' ಎಂದು ಸಾರಿದ ಗಾಂಧೀಜಿಯ ಧರ್ಮನಿಷ್ಠೆ, ಒಂದು ನೆಲ, ವರ್ಗ, ಜಾತಿ, ಕುಟುಂಬ, ವ್ಯಕ್ತಿ, ಅಥವಾ ಒಂದು ಧರ್ಮಕ್ಕೆ ಸೀಮಿತವಾಗಿರಲಿಲ್ಲ ಹಾಗೂ "ರಾಷ್ಟ್ರಭಕ್ತಿ ಎಂಬುದೇ ಒಂದು ಧರ್ಮ. ಅದು ರಾಷ್ಟ್ರಧರ್ಮ" ಎಂಬ ಅಂಶವು ನಾಗಪ್ಪರವರನ್ನು ತೀವ್ರವಾಗಿ ಆಕರ್ಷಿಸಿತು. ಏಕೆಂದರೆ, ಮಾನವೀಯತೆಯೇ ಬಾಪೂರವರ ಧರ್ಮವಾಗಿತ್ತು. ಎರಡು ತುಂಡು ಬಟ್ಟೆಯ ಶಾಂತಿಯ ಹರಿಕಾರನನ್ನು, ಮನುಕುಲದ ಅಂತಃಪ್ರಜ್ಞೆಯ ಪ್ರತಿನಿಧಿಯನ್ನು, ವಿಶ್ವಮಾನ್ಯ ವ್ಯಕ್ತಿಯನ್ನು ಪೂಜ್ಯರೆಂದು ಪರಿಗಣಿಸಿ ಅವರ ಕಟ್ಟಾ ಅನುಯಾಯಿಯಾಗಿ ನಾಗಪ್ಪರವರು ಬೆಳೆಯತೊಡಗಿದರು.

ಗಾಂಧೀಜಿಯವರ ಅಸಹಕಾರ ಚಳುವಳಿಯ ಪ್ರಾರಂಭದಲ್ಲಿ ಅನೇಕ ವಿದ್ಯಾರ್ಥಿಗಳು ಸರಕಾರಿ ಶಾಲಾ ಕಾಲೇಜುಗಳನ್ನು ತೊರೆದರು. "ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು. ನಾನು ಅದನ್ನು ಪಡೆದೇ ತೀರುತ್ತೇನೆ" ಎಂದು ಘೋಷಿಸಿದ ರಾಷ್ಟ್ರೀಯ ಚಳವಳಿಯ ನಾಯಕ ಮಾನ್ಯ ಬಾಲಗಂಗಾಧರ ತಿಲಕರು 1920ರಲ್ಲಿ ಹುತಾತ್ಮನೆ ತೀರಿಕೊಂಡರು. ಆಗ ರಾಷ್ಟ್ರೀಯ ಸ್ವಾತಂತ್ರ್ಯ ಚಳವಳಿಯ ನಾಯಕತ್ವ ವಹಿಸಲು ಪ್ರಭಾವಿ ವ್ಯಕ್ತಿಗಳಾರೂ ಇರಲಿಲ್ಲ. ಆದರೆ, ಭಾರತದ ಅದೃಷ್ಟದಿಂದ ಆ ಜಾಗಕ್ಕೆ ತಿಲಕರಷ್ಟೆ ಪ್ರಭಾವಿತರಾದ ಮಹಾತ್ಮಾ ಗಾಂಧೀಜಿಯವರು ಆಗಮಿಸಿದರು. ಸತ್ಯ, ಅಹಿಂಸೆ ಮತ್ತು ಅಸಹಕಾರ ತತ್ವಗಳಿಂದ ಕೂಡಿದ ಚಳವಳಿಯಲ್ಲಿ ಯಶಸ್ವಿಯಾಗಿ ಭಾರತದ ರಾಷ್ಟ್ರೀಯ ನಾಯಕತ್ವವನ್ನು ಗಾಂಧೀಜಿ ವಹಿಸಿಕೊಂಡರು. 1920ರ ನಂತರ ಹರಡಿಕೊಂಡ ಗಾಂಧೀ ಛಾಯೆ ಹೆಚ್ಚು ದಟ್ಟವೂ, ಸಾಂದ್ರವೂ ಆಗಿರುವುದಲ್ಲದೆ, ವೈಚಾರಿಕ ದೃಷ್ಟಿಕೋನವನ್ನೂ ಬೆಳೆಸಿರುವುದು ವಿದ್ಯಾರ್ಥಿಯಾಗಿದ್ದ ಆಳ್ವರ ಗಮನವನ್ನು ಗಂಭೀರವಾಗಿ ಸೆಳೆಯಿತು. ಅಂತೆಯೇ ಜಾಗೃತಗೊಂಡ ಸುಶಿಕ್ಷಿತ ಸಮಾಜ ಸಹ ಸಮರಕ್ಕೆ ಕೈಗೂಡಿಸಿ ಹೊಸ–ಹೊಸ ವಿಚಾರವಾದವನ್ನು ಜನತೆಯ ಮುಂದೆ ಮಂಡಿಸುತ್ತಿದ್ದುದನ್ನು ನಾಗಪ್ಪ ಆಳ್ವರವರು ಗಮನಿಸಿ, ಅನುಸರಿಸುತ್ತ ಬಂದರು. ಹೀಗೆ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿಯ ಮೇಲೆ ಗಾಂಧಿ ಪ್ರಭಾವದ ಗಾಢತೆಯು ಅಚ್ಚೊತ್ತಿತು. ಮುಂದೆ ಸಾಗಿದ ಸ್ವಾತಂತ್ರ್ಯ ಹೋರಾಟದೊಂದಿಗೆ ಗಾಂಧೀಜಿಯವರು ಶಾಂತಿದೂತರಾದರು, ಪ್ರವಾದಿಯಾದರು, ಕೊನೆಗೆ ಮಹಾತ್ಮರೆನಿಸಿದರು, ನಾಗಪ್ಪ ಆಳ್ವರವರಲ್ಲಿ ಗಾಂಧೀಜಿಯವರ ಕುರಿತಾದ ನಿಷ್ಠೆ–ಗೌರವಗಳು ಅನನ್ಯವಾದುದು. ಅವರು ಮಹಾತ್ಮರನ್ನು ದೇವರಂತೆ ಭಕ್ತಿ–ಶ್ರದ್ಧೆಗಳಿಂದ ಅನುಸರಿಸಿದರು. ಗಾಂಧೀ ಮತ್ತು ಗಾಂಧಿವಾದ ಆಳ್ವರವರಿಗೆ ಜೀವಾಳವಾಗಿತ್ತು.

## ಸ್ವಾತಂತ್ರ್ಯ ಹೋರಾಟಗಾರ

1942ರ ಹೊತ್ತಿಗೆ ಭಾರತದ ಸ್ವಾತಂತ್ರ್ಯ ಹೋರಾಟವು ಒಂದು ಹಂತ ಮುಟ್ಟಿತ್ತು. ಆಗ ಕರ್ನಾಟಕ ಕಂಡ ಜನಜಾಗೃತಿಯು ಅದ್ವಿತೀಯವಾಗಿತ್ತು. ಗಾಂಧೀಜಿಯುವರು "ಬ್ರಿಟಿಷರೇ ಭಾರತ ಬಿಟ್ಟು ತೊಲಗಿ" ಚಳವಳಿಯನ್ನು ಆರಂಭಿಸಿದರು. ದೇಶವು ಸ್ವಾತಂತ್ರ್ಯ ಪಡೆಯುವವರೆಗೂ ತನ್ನ ಇತಿಮಿತಿಯ ಹೋರಾಟದಲ್ಲಿ ಆಳ್ವರವರು ಭಾಗವಹಿಸಿದ ರೀತಿ, ನಿರ್ವಹಿಸಿದ ಕರ್ತವ್ಯಗಳು ಅನುಕರಣೀಯ. ವಿದ್ಯಾರ್ಥಿಯಾಗಿ, ಮುಖಂಡರಾಗಿ, ಗಾಂಧೀಜಿಯವರ ಕಟ್ಟಾ ಅನುಯಾಯಿಯಾಗಿ, ಅವರ ತತ್ವಾದರ್ಶಗಳನ್ನು ಜನಮನದಲ್ಲಿ ಬಿತ್ತಿ ಬೆಳೆಸುವಲ್ಲಿ ಅವರ ಸೇವೆಯು ಅಭಿನಂದನೀಯ. ಇದರಿಂದಾಗಿ ತನ್ನ ವಿದ್ಯಾಭ್ಯಾಸಕ್ಕೆ

ಉಂಟಾದಂತಹ ವಿವಿಧ ಬಾಧೆಗಳನ್ನು ಕೂಡ ಅವರು ಅಲಕ್ಷಿಸಿದರು. ಹಿರಿಯ ಹೋರಾಟಗಾರರ ಮಾರ್ಗದರ್ಶನ ಮತ್ತು ಸಹಕಾರದಲ್ಲಿ ಆಳ್ವರವರ ರಾಷ್ಟ್ರ ಸೇವಾ ಹೋರಾಟವು ಮುಂದುವರಿಯುತ್ತಾ ಸಾಗಿತು.

ಸ್ವಾತಂತ್ರ್ಯ ಹೋರಾಟದಲ್ಲಿ ದ.ಕ. ಜಿಲ್ಲೆಯಲ್ಲಿ ಗಾಂಧೀಜಿ ನೇತೃತ್ವದಲ್ಲಿ 1920–21ರಲ್ಲಿ ಉಪ್ಪಿನ ಸತ್ಯಾಗ್ರಹ ಜರುಗಿದಾಗ ಕರಾವಳಿಯುದ್ದಕ್ಕೂ ಜನರು ಅದರಲ್ಲಿ ಭಾಗವಹಿಸಿದರು. ಅಲ್ಲದೆ, ಗಾಂಧೀಜಿಯವರು ಜಿಲ್ಲೆಗೆ 1927 ಮತ್ತು 1934ನೇ ಇಸವಿಯಲ್ಲಿ ಕೂಡ ಭೇಟಿ ನೀಡಿದ್ದರು. ಇದರಿಂದ ಜನಜಾಗೃತಿಯು ಮತ್ತಷ್ಟು ಹೆಚ್ಚಾಗಿ ರಾಷ್ಟ್ರೀಯತೆಯು ತೀವ್ರವಾಯಿತು. ಹಿರಿಯ ಸತ್ಯಾಗ್ರಹಿಗಳ ರಾಷ್ಟ್ರಪ್ರೇಮದ ಹೋರಾಟವು ಆಳ್ವರವರ ಮನ ಕಲಕಿ ತಮ್ಮನ್ನು ಮತ್ತಷ್ಟು ದೇಶಸೇವೆಯಲ್ಲಿ ತೊಡಗಿಸಿಕೊಳ್ಳಲು ಮುಂದಾದರು. ಮೆಡಿಕಲ್ ಕಾಲೇಜಿನಲ್ಲಿಯೂ ತಮ್ಮ ದೇಶನಿಷ್ಠೆಯನ್ನು ಶಿಸ್ತು, ಬದ್ಧತೆಗಳೊಂದಿಗೆ ಆಚರಿಸಿಕೊಂಡು ಬಂದರು.

## ಖಾದಿ ಉಡುಪಿನ ವಿದ್ಯಾರ್ಥಿ ನಾಯಕ

ನಾಗಪ್ಪ ಆಳ್ವರವರ ಬಹುಮುಖ ವ್ಯಕ್ತಿತ್ವಗಳಲ್ಲಿ ಮನಸೆಳೆಯುವ ಖಾದಿ ಉಡುಪು ಧರಿಸುವುದೂ ಒಂದಾಗಿತ್ತು. ಅವರ ವ್ಯಕ್ತಿತ್ವಕ್ಕೆ ಅದು ವಿಶೇಷ ಮೆರುಗು ತಂದುಕೊಟ್ಟಿತ್ತು. ಮಹಾತ್ಮ ಗಾಂಧೀಜಿಯವರು 1908ರಲ್ಲಿ ಇನ್ನೂ ದಕ್ಷಿಣ ಆಫ್ರಿಕಾದಲ್ಲಿದ್ದಾಗಲೇ ಕೈನಿಂದ ನೂಲುವ, ಬಟ್ಟೆ ನೇಯುವ ಅಗತ್ಯವನ್ನು ಪ್ರತಿಪಾದಿಸಿದ್ದರು. 1916ರ ಹೊತ್ತಿಗೆ ಅಂದರೆ, ಸಾಬರಮತಿ ಆಶ್ರಮ ಸ್ಥಾಪಿಸಿದ ನಂತರ ಗಾಂಧೀಜಿಯವರ ಅನುಯಾಯಿಗಳ ಒಂದು ಗುಂಪು ಅವರ ವಿಚಾರಗಳ ಕಾರ್ಯಾನುಷ್ಠಾನದಲ್ಲಿ ತೊಡಗಿತು. ಮರುವರ್ಷ ಗಂಗಾಬೇನ್ ಮುಜುಂದಾರ್ ಎಂಬ ಗಾಂಧೀಜಿ ಶಿಷ್ಯರಿಗೆ ಬರೋಡದಲ್ಲಿ ಕೆಲವು ಹಳೆಯ ಚರಕಗಳು ಲಭ್ಯವಾದಾಗ, ಅವರು ಆ ಚರಕಗಳಿಂದ ಸ್ಥಳೀಯ ನೇಕಾರರ ಕೈಯಲ್ಲಿ ಆಶ್ರಮಕ್ಕಾಗಿ ನೇಯಿಸಿದ ಬಟ್ಟೆಯೇ ಖಾದಿ. ಮುಂದೆ ಖಾದಿ ಭಾರತೀಯರ ರಾಷ್ಟ್ರೀಯ ಕಾಂಗ್ರೆಸ್‌ನ ಸಮವಸ್ತ್ರವೂ ಆಯಿತು. 1920–21ರ ಅಸಹಕಾರ ಚಳವಳಿಯ ಹೊತ್ತಿಗೆ ಖಾದಿ ಬಟ್ಟೆ ತೊಡುವುದು ಮತ್ತು ಗಾಂಧೀ ಟೋಪಿ ಹಾಕಿಕೊಳ್ಳುವುದು ಹೆಚ್ಚು–ಕಡಿಮೆ ವಾಡಿಕೆಯಾಗಿಬಿಟ್ಟಿತ್ತು. ಇಂಥ ಸಂಪ್ರದಾಯವು ಕ್ರಮೇಣ ಬ್ರಿಟಿಷರ ಆಳ್ವಿಕೆಯನ್ನು ವಿರೋಧಿಸುವ ಒಂದು ಸಂಕೇತವಾಯಿತು. ಇದು ಭಾರತೀಯರಿಗೆ ಸ್ವರಾಜ್ಯ ಕಲ್ಪನೆಯ, ಹೊಸ ಆತ್ಮ ವಿಶ್ವಾಸದ ಪ್ರತೀಕವಾಗಿತ್ತು. ಇದರಿಂದ ಪ್ರಭಾವಿತರಾದ ನಾಗಪ್ಪ ಆಳ್ವರವರು ಖಾದಿ ಬಟ್ಟೆಯನ್ನು ತೊಡುವ ತಮ್ಮ ಅಚಲ ನಿರ್ಧಾರವನ್ನು ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಕಾರ್ಯರೂಪಕ್ಕೆ ತಂದು ಕೊನೆಯುಸಿರಿನ ತನಕವೂ ಪಾಲಿಸಿಕೊಂಡು ಬಂದರು.

ತಮ್ಮ ಇತರ ಚಟುವಟಿಕೆಗಳೊಂದಿಗೆ ವಿದ್ಯಾರ್ಥಿ ಜೀವನವನ್ನು ಹಿರಿಮೆ-ಗರಿಮೆಗಳೊಂದಿಗೆ ಮುನ್ನಡೆಸಿಕೊಂಡು ಬಂದ ಆಳ್ವರು 1928ರಲ್ಲಿ ತಮ್ಮ ವಿದ್ಯಾರ್ಥಿ ಜೀವನದ ಸನ್ನಡತೆಗಾಗಿ ಪ್ರಶಸ್ತಿ ಗಳಿಸಿಕೊಂಡರು. ಅವರು ಮದ್ರಾಸ್ ವಿಶ್ವವಿದ್ಯಾಲಯದ ಕ್ರೀಡಾ ಕಾರ್ಯದರ್ಶಿಯಾಗಿ ಕ್ರಿಯಾಶೀಲ ಪಾತ್ರವಹಿಸಿದ್ದರು. ಶಿಕ್ಷಣದೊಂದಿಗೆ ಕ್ರೀಡೆಗಳೂ ಮಹತ್ತರ ಪಾತ್ರವಹಿಸುತ್ತವೆಂದು ಆ ಕ್ಷೇತ್ರದಲ್ಲಿ ಶ್ರಮಿಸಿದರು. ತನ್ಮೂಲಕ ಅವರ ಕಾರ್ಯ ಚಟುವಟಿಕೆಗಳು ರಾಜ್ಯದ ಗಮನ ಸೆಳೆಯುವಲ್ಲಿ ಯಶಸ್ವಿಯಾಯಿತು. ಮೆಡಿಕಲ್ ಕಾಲೇಜಿನ ಹಾಸ್ಟೆಲ್‌ನಲ್ಲಿ 1933ರಿಂದ 1938ರವರೆಗೆ ಸ್ಟೂಡೆಂಟ್ ವಾರ್ಡನ್ ಆಗಿ ಕೆಲಸ ನಿರ್ವಹಿಸಿ ವಿದ್ಯಾರ್ಥಿಗಳ ಮನಗೆದ್ದರು. ವಿದ್ಯಾರ್ಥಿಗಳ ವಸತಿ ವ್ಯವಸ್ಥೆಯನ್ನು ಸುಧಾರಿಸಿ, ಇನ್ನಷ್ಟು ಸುವ್ಯವಸ್ಥಿತಗೊಳಿಸಲು ಆಳ್ವರು ತುಂಬಾ ಶ್ರಮಿಸಿದರು. ಎರಡು ಅವಧಿಗಳಿಗೆ ಮೆಡಿಕಲ್ ಕಾಲೇಜಿನ ಜನರಲ್ ಸೆಕ್ರೆಟರಿಯಾಗಿ ಕಾರ್ಯ ನಿರ್ವಹಿಸಿದ್ದರು. ಮೆಡಿಕಲ್ ಕಾಲೇಜಿನ ಸರ್ವಾಂಗೀಣ ಪ್ರಗತಿಗಾಗಿ ಮತ್ತು ವಿದ್ಯಾರ್ಥಿಗಳ ಹಿತರಕ್ಷಣೆಗಾಗಿ ಆ ಅವಧಿಯಲ್ಲಿ ದುಡಿದರಲ್ಲದೆ ಸಹಪಾಠಿಗಳೊಂದಿಗಿನ ತಮ್ಮ ನಿಷ್ಠೆಯನ್ನು ಸದಾಕಾಲವೂ ದೇಶಪ್ರೇಮ ಹಾಗೂ ರಾಷ್ಟ್ರೀಯತೆಯತ್ತ ಕೊಂಡೊಯ್ಯುವಲ್ಲಿ ಕೇಂದ್ರೀಕೃತರಾದರು. ಮದ್ರಾಸ್ ಸ್ಟೂಡೆಂಟ್ ಅಸೋಸಿಯೇಶನ್‌ನ ಸಂಘಟನಾ ಕಾರ್ಯದರ್ಶಿಯಾಗಿ 1937ರಿಂದ 1939ರವರೆಗೆ ಕಾರ್ಯ ನಿರ್ವಹಿಸಿದರು. ಹಾಗೆಯೇ ಮದ್ರಾಸ್ ರಾಜ್ಯ ಆಸ್ಪತ್ರೆಗಳಲ್ಲಿನ ಹೌಸ್ ಸರ್ಜನ್‌ಗಳ ಸಂಘಟನೆಯ ಕಾರ್ಯದರ್ಶಿಯಾಗಿಯೂ ಕೆಲಸ ಮಾಡಿದರು. ವಿದ್ಯಾರ್ಥಿ ಜೀವನದಿಂದಲೂ ಕಾಂಗ್ರೆಸ್ ಕಾರ್ಯಕರ್ತರಾಗಿ ಸಕ್ರಿಯರಾಗಿದ್ದವರಲ್ಲಿ ನಾಗಪ್ಪ ಆಳ್ವರ ಹೆಸರು ಪ್ರಮುಖವಾಗಿ ಗುರುತಿಸಲ್ಪಡುತ್ತದೆ.

## ಸಕ್ರಿಯ ರಾಜಕಾರಣಿ

ಮದ್ರಾಸ್‌ನಲ್ಲಿ ಶೈಕ್ಷಣಿಕ ಚಟುವಟಿಕೆಗಳನ್ನು ಪೂರೈಸಿ ವೈದ್ಯಕೀಯ ಪದವಿ ಪಡೆದುಕೊಂಡು ತಮ್ಮ ಊರಿಗೆ ವಾಪಸ್ಸಾದ ಆಳ್ವರವರು ಅಲ್ಲಿಯೇ ಪವಿತ್ರ ವೃತ್ತಿಯಂತೆ ಭಾವಿಸಿದ್ದ ವೈದ್ಯಕೀಯ ಸೇವಾಕಾರ್ಯದತ್ತ ಗಮನಹರಿಸಿದರು. ಮಂಗಳೂರಿನ ಹಂಪನಕಟ್ಟೆ ರಸ್ತೆ ಸೇರುವ ಮಾರುಕಟ್ಟೆ ಪ್ರದೇಶದಲ್ಲಿ ಕ್ಲಿನಿಕ್ಕೊಂದನ್ನು ಪ್ರಾರಂಭಿಸಿ ಜನಸೇವೆಯಲ್ಲಿ ತೊಡಗಿದರು. 1943ರಿಂದ 1949ರವರೆಗೆ ಮಂಗಳೂರು ಸರ್ಕಲ್ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾಗಿದ್ದರು. 1949ರಿಂದ 1952ರವರೆಗೆ ದ.ಕ. ಜಿಲ್ಲಾ ಕಾಂಗ್ರೆಸ್ ಕಮಿಟಿಯಲ್ಲಿ ಕಾರ್ಯ ನಿರ್ವಹಿಸಿದರು. ಅವರು ಕೆಪಿಸಿಸಿ ಸದಸ್ಯರಾಗಿ ಕಾಂಗ್ರೆಸ್ ಕಮಿಟಿ 1942ರಿಂದಲೂ ಸಕ್ರಿಯವಾಗಿ ಕೆಲಸ ಮಾಡಿಕೊಂಡು ಬಂದವರಾಗಿದ್ದರು. 1946ರಿಂದ 1950ರವರೆಗೆ ಕಾಂಗ್ರೆಸ್ ಕಮಿಟಿ ಡಿಸ್ಟ್ರಿಕ್ಟ್ ಬೋರ್ಡ್

ಕಾಂಗ್ರೆಸ್ ಪಾರ್ಟಿಯ ಲೀಡರ್ ಸಹಾ ಆಗಿದ್ದರು. 1946ರಿಂದ 1950ರವರೆಗೆ ಡಿಸ್ಟ್ರಿಕ್ಟ್ ಬೋರ್ಡ್ ಪಬ್ಲಿಕ್ ಹೆಲ್ತ್ ಕಮಿಟಿಯ ಛೇರ್ಮನ್ ಆಗಿದ್ದರು.

ಡಿಸ್ಟ್ರಿಕ್ಟ್ ಬೋರ್ಡ್‌ನ ಸದಸ್ಯರಾಗಿ ಹನ್ನೆರಡು ವರ್ಷಗಳ ದೀರ್ಘಾವಧಿವರೆಗೆ ಇದ್ದರಲ್ಲದೆ, ಹನ್ನೆರಡು ವರ್ಷಗಳ ಅವಧಿಗೆ ಮಂಗಳೂರು ಮುನ್ಸಿಪಾಲಿಟಿಯ ಸದಸ್ಯರಾಗಿಯೂ ಹಲವಾರು ಉಲ್ಲೇಖಾರ್ಹ ಕೆಲಸ–ಕಾರ್ಯಗಳನ್ನು ಕೈಗೊಂಡು ಪೂರೈಸಿದ್ದರು. ಮಂಗಳೂರು ಪ್ರದೇಶವಲ್ಲಿನ ಒಳಚರಂಡಿ ವ್ಯವಸ್ಥೆಯ ಕುರಿತಾದ ಚಿಂತನೆ ಮತ್ತು ಕುಡಿಯುವ ನೀರಿನ ವ್ಯವಸ್ಥೆಯ ಕುರಿತಾದ ಮುಂದಾಲೋಚನೆಯನ್ನು ಅವರು ಆಗಲೇ ಪ್ರಸ್ತಾಪಿಸಿದ್ದರು. 1953ರಿಂದ 1956ರವರೆಗೆ ಮಂಗಳೂರು ಪೋರ್ಟ್ ಮತ್ತು ಡಾಕ್ ವರ್ಕರ್ಸ್ ಯೂನಿಯನ್‌ಗೆ ಅಧ್ಯಕ್ಷರಾದಾಗ ಕಾರ್ಮಿಕರ ಕಷ್ಟ–ಸಂಕಷ್ಟಗಳತ್ತ ತಮ್ಮ ಗಮನ ಹರಿಸಿ ಅವರಿಗೆ ಅನೇಕ ರೀತಿಯ ಸೌಲಭ್ಯಗಳನ್ನು ಒದಗಿಸಿಕೊಡುವಲ್ಲಿ ಆಳ್ವರವರು ಶ್ರಮಿಸಿದ್ದರು. ತಮ್ಮ ಅಧ್ಯಕ್ಷತೆಯ ಅವಧಿಯಲ್ಲಿ ಯೂನಿಯನ್‌ಗೆ ಹೆಚ್ಚಿನ ಬಲ ಮತ್ತು ಸಾಮರ್ಥ್ಯ ತಂದುಕೊಟ್ಟರು. ಆಳ್ವರವರು ಮಂಗಳೂರು ಪೋರ್ಟ್ ಟ್ರಸ್ಟ್ ಬೋರ್ಡ್‌ನಲ್ಲಿ ಸದಸ್ಯರಾಗಿ, ಕಾರ್ಮಿಕರ ಪ್ರತಿನಿಧಿಯಾಗಿ ಎರಡು ವರ್ಷಗಳ ಕಾಲ ಕೆಲಸ ಮಾಡಿದ್ದಾರೆ. ಹಾಗೆಯೇ ವೈದ್ಯಕೀಯ ಕ್ಷೇತ್ರದಲ್ಲೂ ತಮ್ಮ ಪ್ರಭಾವಲಯವನ್ನು ಸೃಷ್ಟಿಸಿದ್ದ ಆಳ್ವರು ಸೌಥ್ ಕೆನರಾ ಬ್ರಾಂಚ್ ಆಫ್ ಮೆಡಿಕಲ್ ಅಸೋಸಿಯೇಶನ್‌ಗೆ ಎರಡು ಅವಧಿಗೆ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು.

1958ರಿಂದ ಎಐಸಿಸಿ ಮೆಂಬರ್ ಆಗಿ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ವೈಸ್ ಪ್ರೆಸಿಡೆಂಟ್ ಆಗಿ, ಆಗಸ್ಟ್ 1958ರಿಂದ ಕಾರ್ಯ ನಿರ್ವಹಿಸಿದರು. 1959ರಿಂದ 1961ರವರೆಗೆ ಆಳ್ವರವರು ಬೆಂಗಳೂರಿನ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಗಳಲ್ಲಿ ಹಾನರರಿ ಫಿಜಿಷಿಯನ್ ಆಗಿ ಸಲ್ಲಿಸಿದ ಸೇವೆಯು ಪ್ರಶಂಸನೀಯ. ಪ್ರಥಮ ಬಾರಿಗೆ ಆಳ್ವರವರು ದ.ಕ. ಜಿಲ್ಲೆಯ ಪಾಣೆ ಮಂಗಳೂರು ಕ್ಷೇತ್ರದಿಂದ ಎರಡನೇ ಮೈಸೂರು ವಿಧಾನಸಭೆಗೆ 1957ರಲ್ಲಿ ಆಯ್ಕೆಯಾದರು. ಹಾಗೂ ಮೂರನೆಯ ವಿಧಾನಸಭೆಗೆ ಅದೇ ಕ್ಷೇತ್ರದಿಂದ ಪುನರ್ ಆಯ್ಕೆಯಾಗಿ ಸಚಿವ ಸಂಪುಟದಲ್ಲಿ ಆರೋಗ್ಯ ಸಚಿವರಾಗಿ ಕಾರ್ಯ ನಿರ್ವಹಿಸಿ ಜನಪ್ರಿಯರಾದರು. 1970ರಿಂದ 1976ರವರೆಗೆ ಅವರು ಮೈಸೂರು ವಿಧಾನಸಭೆಯಿಂದ ರಾಜ್ಯಸಭೆಗೆ ಆಯ್ಕೆಯಾದರು. ಈ ಅವಧಿಯಲ್ಲಿ ಅವರು ರಾಷ್ಟ್ರಕ್ಕೆ ಸಲ್ಲಿಸಿದ ಸೇವೆಯು ಅಪಾರ ಹಾಗೂ ಉಲ್ಲೇಖಾರ್ಹವಾದುದು. ದೇಶ–ವಿದೇಶಗಳಿಗೆ ವಿವಿಧ ಕಾರ್ಯೋದ್ದೇಶಗಳ ನಿಮಿತ್ತ ಭೇಟಿ ನೀಡಿದ ಆಳ್ವರವರು, ತನ್ನ ದೇಶದ ಸಮೃದ್ಧ ಸಂಸ್ಕೃತಿಯನ್ನು ಪರಿಚಯಿಸಿದರು. ಜೆ.ಪಿ.ಯವರ ನೇತೃತ್ವದ ಚಳವಳಿಯ ಮಂಚೂಣಿಯಲ್ಲಿದ್ದ ಆಳ್ವರು ಜೈಲು ವಾಸವನ್ನು

ದೀರ್ಘಕಾಲಕ್ಕೆ ಅನುಭವಿಸಬೇಕಾಯಿತು. ತಮ್ಮ ಜೀವಿತಾವಧಿಯಲ್ಲಿ ರಾಷ್ಟ್ರದ ಗಮನ ಸೆಳೆದ ಸ್ವಾತಂತ್ರ್ಯ ಮತ್ತು ಜೆ.ಪಿ. ಚಳವಳಿಯಲ್ಲಿ ಭಾಗವಹಿಸಿ ಜೈಲು ಶಿಕ್ಷೆಯನ್ನು ಅನುಭವಿಸಿದ ಹಿರಿಯ ರಾಜಕಾರಣಿ, ಪ್ರಬುದ್ಧ ರಾಜಕಾರಣಿಯೆಂದು ಪ್ರಖ್ಯಾತರಾಗಿದ್ದರೂ ಕೂಡ 1979ರಲ್ಲಿ ರಾಜಕೀಯದಿಂದ ನಿವೃತ್ತಿಯಾದರು. ನಂತರ, ವಿವಿದ ಸೇವಾ ಸಂಸ್ಥೆಗಳಲ್ಲಿ, ಧಾರ್ಮಿಕ ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ತಮ್ಮ ಬಾಳಸಂಜೆಯ ದಿನಗಳನ್ನು ಶಾಂತಚಿತ್ತತೆಯಿಂದ ಕಳೆದರು. ತಮ್ಮ ನೆಚ್ಚಿನ ಬಾಳಸಂಗಾತಿ ಕಲ್ಯಾಣಿ ಆಳ್ವರನ್ನು 1992ರಲ್ಲಿ ಕಳೆದುಕೊಂಡ ಆಳ್ವರವರು 1996 ಅಕ್ಟೋಬರ್ 3ರಂದು ಸ್ವರ್ಗಸ್ಥರಾದರು.

## ಆದರ್ಶ ಜನಾನುರಾಗಿ ವೈದ್ಯ

ವೈದ್ಯಕೀಯ ಶಿಕ್ಷಣವನ್ನು ರಾಷ್ಟ್ರೀಯ ಚಳವಳಿಯೊಂದಿಗೆ ಮುಗಿಸಿದ ಡಾ॥ ಆಳ್ವರವರು 1942ರಲ್ಲಿ ಮಂಗಳೂರಿಗೆ ಹಿಂದಿರುಗಿ ರಾಷ್ಟ್ರಸೇವೆಯ ಜೊತೆಗೆ ಜನರಿಗೆ ಆರೋಗ್ಯ ಸೇವೆಯನ್ನು ನೀಡಲು ಸಂಕಲ್ಪಿಸಿದರು. ಡಾ॥ ಆಳ್ವರವರ ಚಿಕಿತ್ಸಾಲಯವು ಮಾರುಕಟ್ಟೆ ರಸ್ತೆಯ ಹಂಪನಕಟ್ಟೆ ಸೇರುವ ಸ್ಥಳದಲ್ಲಿತ್ತು. ಅಲ್ಲಿ 1958ರವರೆಗೆ ತಮ್ಮ ಪ್ರಾಮಾಣಿಕ ಪ್ರಜಾ ಆರೋಗ್ಯ ಸೇವೆಯಲ್ಲಿ ಮಗ್ನರಾಗಿ ಆ ಮೂಲಕ ಅತ್ಯಂತ ಜನಾನುರಾಗಿಯಾದರು. ವಿಶೇಷತಃ ಬಡವರು, ದೀನ–ದಲಿತರು, ಅಲ್ಲಿ ಉಚಿತ ಚಿಕಿತ್ಸೆ ಪಡೆದು ಗುಣಮುಖರಾಗುತ್ತಿದ್ದರು. ಎಷ್ಟೋ ಅಸಹಾಯಕರಿಗೆ ಔಷಧೋಪಚಾರ ಮಾಡಿದ ಬಳಿಕ ಅವರು ಹಿಂತಿರುಗಿ ಕ್ಷೇಮವಾಗಿ ಮನೆ ಸೇರಲು ಅನುಕೂಲವಾಗುವಂತೆ ಹಣಕಾಸಿನ ಸಹಾಯ ನೀಡಿ ಉಪಕರಿಸುತ್ತಿದ್ದುದನ್ನು ಈಗಲೂ ಜನರು ಸ್ಮರಿಸಿಕೊಳ್ಳುತ್ತಾರೆ. ವೈದ್ಯ ವೃತ್ತಿ ಧರ್ಮವನ್ನು ಅವರೆಂದೂ ಬಿಟ್ಟುಕೊಟ್ಟವರಲ್ಲ. ಸ್ವಾತಂತ್ರ್ಯಪೂರ್ವದಲ್ಲಿ ನಡೆದ ವಿವಿಧ ಚಳವಳಿಯ ಸಂದರ್ಭಗಳಲ್ಲಿ ಪಕ್ಷಭೇದ ಮರೆತು ಅದೆಷ್ಟೋ ಅಜ್ಞಾತವಾಸಸ್ಥ ಚಳವಳಿಗಾರರಿಗೆ ಔಷಧೋಪಚಾರಗಳ ಶುಶ್ರೂಷೆ ಮಾಡಿ ಸಂತೈಸಿದ ಉದಾಹರಣೆಗಳನ್ನು ದಾಖಲಿಸಲಾಗಿದೆ.

ಒಮ್ಮೆ ಕಮ್ಯುನಿಸ್ಟ್ ಧುರೀಣರಾದ ಶ್ರೀ ಬಿ.ವಿ.ಕಕ್ಕಿಲ್ಲಾಯರವರು ಅಮಿಬಿಕ್ ಡಿಸೆಂಟ್ರಿ ಖಾಯಿಲೆಯಿಂದ ಬಳಲುವಂತಾಗಿದ್ದರು. ಆಧುನಿಕ ಶೌಚಾಲಯಗಳಿಲ್ಲದ ಚಿಕ್ಕ ಗುಡಿಸಲುಗಳಲ್ಲಿ ವಾಸ ಮಾಡುತ್ತಿದ್ದ ಸಂದರ್ಭದಲ್ಲಿ ತುಂಬಾ ತೊಂದರೆಗೊಳಗಾದರು. ಖಾಯಿಲೆಯು ಗಂಭೀರ ಸ್ಥಿತಿಗೆ ತಲುಪಿದಾಗ ಚಿಕಿತ್ಸೆಗಾಗಿ ಅವರು ಸ್ವತಃ ಡಾಕ್ಟರ್ ಹತ್ತಿರ ಹೋಗುವಂತಿರಲಿಲ್ಲ. ಆಗ ಅವರು ವಾಸವಾಗಿದ್ದ

ಮನೆಯವರೊಬ್ಬರನ್ನು ಡಾ। ನಾಗಪ್ಪ ಆಳ್ವರ ಹತ್ತಿರ ಗುರುತಿನ ಚೀಟಿ ಬರೆದು ಕಳುಹಿಸಿ. ಅದರಲ್ಲಿ ಖಾಯಿಲೆಯ ವಿಷಯವನ್ನು ಮಾತ್ರ ಬರೆಯಲಾಗಿ ಹೆಸರನ್ನು ಬರೆದಿರಲಿಲ್ಲ. ಚೀಟಿಯನ್ನು ಕೊಟ್ಟ ವ್ಯಕ್ತಿ ಆಳ್ವರಲ್ಲಿ ಮೆಲ್ಲಗೆ ಶ್ರೀ ಬಿ.ವಿ.ಕಕ್ಕಿಲ್ಲಾಯರ ಹೆಸರನ್ನು ಹೇಳಿದಾಗ ಆಳ್ವರು ಒಮ್ಮೆ ತಲೆ ಎತ್ತಿ ನೋಡಿ ಮುಗುಳ್ನಕ್ಕು ಮರು ಮಾತನಾಡದೆ ಔಷಧಿ ಕೊಟ್ಟು ಮೂರು ದಿನ ಬಿಟ್ಟು ಬರಲು ಸೂಚಿಸಿದರಂತೆ. ಕಕ್ಕಿಲ್ಲಾಯರ ಖಾಯಿಲೆ ಶಮನವಾಗಿ ಮತ್ತೆ ಇನ್ನೊಬ್ಬರನ್ನು ಕಳುಹಿಸಿದಾಗ 15 ಇಂಜೆಕ್ಷನ್‌ಗಳನ್ನು ತೆಗೆದುಕೊಳ್ಳುವಂತೆ ಸೂಚಿಸಿ ಔಷಧಿ ನೀಡಿ ಗುಣಮುಖರಾಗುವಂತೆ ಮಾಡಿದ ವೈದ್ಯ ನಾಗಪ್ಪ ಆಳ್ವರ ಸೇವಾ ಮನೋಭಾವನೆಯನ್ನು ಮಾನ್ಯ ಬಿ.ವಿ.ಕಕ್ಕಿಲ್ಲಾಯರು ಇಂದಿಗೂ ನೆನಪಿಟ್ಟುಕೊಂಡಿದ್ದಾರೆ.

## ಸಂದೇಹಿಸದ ಸಭ್ಯ ಹಸು

ಐವತ್ತರ ದಶಕದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾ ಮಂಡಳಿಯ ಅಧ್ಯಕ್ಷ ಪದಕ್ಕೆ ಬಹಳಷ್ಟು ಜಿದ್ದಾಜಿದ್ದಿನ ಸ್ಪರ್ಧೆ ಏರ್ಪಟ್ಟಿದ್ದಿತು. ಕಾಂಗ್ರೆಸ್ ಹಾಗೂ ಕಾಂಗ್ರೆಸ್ಸೇತರ ಗುಂಪುಗಳು ಸಮಬಲವಾಗಿದ್ದವು. ಕಾಂಗ್ರೆಸ್ಸನ್ನು ಗೆಲ್ಲಿಸಲೇಬೇಕೆನ್ನುವ ಹಠ ಅಲ್ಲಿನ ಮುಂದಾಳುಗಳಲ್ಲಿತ್ತು. ಕಾಂಗ್ರೆಸ್ ಗೆಲ್ಲಬೇಕಾದರೆ, ವಿರೋಧ ಪಕ್ಷದಲ್ಲಿ ಯಾರಾದರೊಬ್ಬರನ್ನು ತಮ್ಮೆಡೆಗೆ ಸೆಳೆದುಕೊಳ್ಳಬೇಕು. ಇಲ್ಲವೆ. ವಿರೋಧ ಪಕ್ಷದ ಯಾರಾದರೊಬ್ಬರು ಮಂಡಳಿಯ ಸಭೆಗೆ ಬಾರದಂತೆ ಉಪಾಯ ಮಾಡಬೇಕೆಂದು ತೀರ್ಮಾನಿಸಲಾಯಿತು. ಈ ವಿಚಾರವನ್ನು ಮುಖಂಡರೊಬ್ಬರು ವಹಿಸಿಕೊಂಡರು. ಅಸಾಧ್ಯವನ್ನು ಸಾಧ್ಯವಾಗಿಸುವ ಚಾಣಾಕ್ಷತನ ಅವರಲ್ಲಿದ್ದಿತು. ಅವರ ಸಾಮರ್ಥ್ಯವನ್ನು ಯಾರೂ ಅಲ್ಲಗಳೆಯುವಂತಿರಲಿ. ಅನುಮಾನವೂ ಪಡುವಂತಿರಲಿಲ್ಲ.

ಆ ಪ್ರಕಾರವಾಗಿ ಅವರು ಉಪಾಯದಿಂದ ಕಾರ್ಯ ಯೋಜನೆ ರೂಪಿಸಿದರು. ಸಂದೇಹಿಸದ ಸಭ್ಯ ಹಸುವನ್ನು ಹಿಡಿದಲ್ಲಿ ತಮ್ಮ ಕಾರ್ಯ ಕೈಗೂಡುವುದೆಂದು ಅವರು ಮನವರಿಕೆ ಮಾಡಿಕೊಂಡರು. ತಮ್ಮ ತಂತ್ರವನ್ನು ಸಂದೇಹಿಸದ ವ್ಯಕ್ತಿಯ ಶೋಧವಲ್ಲಿದ್ದ ಅವರಿಗ ಎದುರು ಬಣದಲ್ಲಿದ್ದ ಮುಗ್ಧ ಮನಸ್ಸಿನ ಡಾ॥ ನಾಗಪ್ಪ ಆಳ್ವ ಕಂಡರು. ರೋಗಿಯ ಸೇವೆಯೇ ದೇವರ ಸೇವೆ ಎಂದು ಅವರು ಬಗೆದವರು. ಅವರು ಜಿಲ್ಲಾ ಮಂಡಲಿಯ ಸಭೆಗೆ ಹೊರಟು ನಿಂತಾಗ ಅವರ ಬಳಿಗೆ ಒಬ್ಬ ಮನುಷ್ಯನನ್ನು ಕಳುಹಿಸಲಾಯಿತು. "ನನ್ನ ಸೊಸೆಗೆ ಹೆರಿಗೆ ನೋವು, ಅವಳನ್ನು ಬದುಕಿಸಿರಿ. ನಮ್ಮ ಪಾಲಿಗೆ ನೀವು ದೇವರಂತೆ ಸಿಕ್ಕಿದ್ದೀರಿ" ಎಂದು ಬಂದವರು ಆಳ್ವರ ಎದುರು ಅತ್ತುಕೊಂಡರಂತೆ. ಆಗ

ಡಾ॥ ಆಳ್ವರವರೊಳಗಿನ ಮಾನವೀಯತೆ ಅನಾಪ್ತ, ಹೆರಿಗೆಯ ನೋವಿನಿಂದ ಬಳಲುತ್ತಿದ್ದ ಆ ಮುದುಕನ ಸೊಸೆಯ ಕಡೆಗೆ ಕರಗಿತು. ಅವರು ವೈದ್ಯ ವೃತ್ತಿಧರ್ಮಕ್ಕೆ ಚ್ಯುತಿ ಬಾರದಂತೆ ಅತ್ತ ಧಾವಿಸಿದಾಗ ಇತ್ತ ಅಧ್ಯಕ್ಷ ಚುನಾವಣೆ ನಡೆಯಿತು. ಕಾಂಗ್ರೆಸ್ ಅಭ್ಯರ್ಥಿ ಒಂದು ಮತದ ಬಹುಮತದಿಂದ ಗೆದ್ದಿದ್ದರು. ಡಾ॥ ಆಳ್ವರವರಿಗೆ ಅನಂತರ ತಿಳಿಯಿತು. ಅವರನ್ನು ಸಭೆಗೆ ಹೋಗದಂತೆ ತಪ್ಪಿಸುವುದಕ್ಕೋಸ್ಕರವೇ ಹೆರಿಗೆಯ ನೋವಿನಿಂದ ಬಳಲುವ ಸ್ತ್ರೀಯೊಬ್ಬಳನ್ನು ಸೃಷ್ಟಿಸಲಾಗಿತ್ತೆಂಬುದು. ಈ ಮಾತುಗಳನ್ನು ಡಾ॥ ಆಳ್ವರವರ ಬಗ್ಗೆ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು, ಖ್ಯಾತ ಪತ್ರಕರ್ತರೂ, ಹಿರಿಯ ರಾಜಕಾರಣಿಯೂ ಆಗಿರುವ ಪಾಟೀಲ ಪುಟ್ಟಪ್ಪರವರು ತಮ್ಮ ಸಂಪಾದಕೀಯದಲ್ಲಿ ನಮೂದಿಸಿರುವುದನ್ನು ಗಮನಿಸಬಹುದಾಗಿದೆ.

## ಪರಿಪೂರ್ಣ ವೈದ್ಯ ಜೀವನ ಶೈಲಿ

ಡಾ॥ ನಾಗಪ್ಪ ಆಳ್ವರವರು ಪಕ್ಷ ರಾಜಕಾರಣ, ಹುದ್ದೆ, ಇತ್ಯಾದಿಗಳನ್ನು ಮರೆತು ತಾವು ಬಹುವಾಗಿ ಪ್ರೀತಿಸುತ್ತಿದ್ದ ಪವಿತ್ರ ವೈದ್ಯ ವೃತ್ತಿಗೆ ಯಾವುದೇ ಕಳಂಕ ಬಾರದ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದರು. ಮಾನವೀಯತೆಗೆ ಅವರು ಕೊಡುತ್ತಿದ್ದ ಗೌರವವು ಪ್ರಖ್ಯಾತವಾಗಿತ್ತು. ಔಷಧೋಪಚಾರಕ್ಕಾಗಿ ರಾಜಕೀಯ ವಿರೋಧಿಗಳಾದವರು ತಮ್ಮ ಬಳಿ ಬಂದರೂ ನಗುಮೊಗದಿಂದ ಬರಮಾಡಿಕೊಂಡು ಶಾಂತಚಿತ್ತರಾಗಿ ಅವರ ರೋಗ ಲಕ್ಷಣಗಳನ್ನು ಆಲಿಸಿ ಔಷಧೋಪಚಾರಗಳನ್ನು ನೀಡಿ ಕಳುಹಿಸುತ್ತಿದ್ದ ಅಪರೂಪದ ವೈದ್ಯರು ಅವರಾಗಿದ್ದರು. ವೈದ್ಯಕೀಯ ಕ್ಷೇತ್ರದಲ್ಲಿ ಅವರು ತಮ್ಮ ಬಹುಮುಖಿ ಸೇವೆಯ ಮೂಲಕ ಆದರ್ಶ ಜನಾನುರಾಗಿಯಾಗಿದ್ದರು.

1957ರಲ್ಲಿ ಅವರು ಪಾಣೆ ಮಂಗಳೂರು ಕ್ಷೇತ್ರದಿಂದ ಶಾಸಕ ಸ್ಥಾನಕ್ಕೆ ಸ್ಪರ್ಧಿಸಿ ಜಯ ಸಾಧಿಸಿದ ನಂತರ, 1958ರಲ್ಲಿ ತಮ್ಮ ವೈದ್ಯ ಸೇವಾ ಕ್ಷೇತ್ರವನ್ನು ಬೆಂಗಳೂರಿಗೆ ವರ್ಗಾಯಿಸಿಕೊಂಡರು. ಈ ಅವಧಿಯಲ್ಲಿ ಶಾಸಕರಾಗಿದ್ದ ಕಾರಣ, ಅವರು ವೈದ್ಯಕೀಯ ಸೇವಾ ಕ್ಷೇತ್ರವನ್ನು ಅಲಕ್ಷಿಸಲಿಲ್ಲ. ಅಲ್ಲಿಯೂ ಅಪಾರ ಸೇವೆಗೆ ತಮ್ಮ ಸಮಯವನ್ನೆಲ್ಲಾ ಮುಡಿಪಾಗಿಟ್ಟಿದ್ದರು. ಡಾ॥ ಆಳ್ವರವರಿಗೆ ದೊರೆತ ಶಿಕ್ಷಣವು ಅವರಲ್ಲಿ ಅದಮ್ಯ ಆತ್ಮವಿಶ್ವಾಸ ತುಂಬಿ ತನ್ಮೂಲಕ ಆತ್ಮಗೌರವ ಬೆಳೆಸಿತ್ತು. ತಾವು ಪಡೆದ ಶಿಕ್ಷಣವನ್ನು ಅತ್ಯಂತ ಪವಿತ್ರವೆಂದು ಭಾವಿಸಿದ್ದರು. ಅದನ್ನವರು ಕೇವಲ ಒಂದು ವೃತ್ತಿ, ವ್ಯಾಪಾರ, ಹೊಟ್ಟೆ ಹೊರೆಯುಕೊಳ್ಳುವ ಮಾರ್ಗವೆಂದು ಖಂಡಿತಾ ಭಾವಿಸಿರಲಿಲ್ಲ. ಅವರ ಸರಳತೆ, ಸಹೃದಯತೆ, ವಿನಯ, ಸೌಜನ್ಯ ಹಾಗೂ ವಿಶಾಲ

ಹೃದಯ ಶ್ರೀಮಂತಿಕೆ ಜನರ ಮನಸೆಳೆಯಿತು. ಇದಕ್ಕಾಗಿ ಆಳ್ವರವರು ಅಹೋರಾತ್ರಿ ದುಡಿದು ಹಾಗೂ ತಮ್ಮ ಕೈಲಾದುದೆಲ್ಲವನ್ನೂ ಸಮರ್ಪಿಸಿದರು. ಶ್ರದ್ಧೆ ಹಾಗೂ ಸ್ವಸಂತೋಷದಿಂದ ದೇಶ ಸೇವೆ ಮಾಡಿದ ವಿರಳ ವ್ಯಕ್ತಿಗಳಲ್ಲಿ ಒಬ್ಬರಾಗಿ ಡಾ॥ ನಾಗಪ್ಪ ಆಳ್ವರವರು ಪರಿಗಣಿಸಲ್ಪಡುತ್ತಾರೆ. ವೈದ್ಯಕೀಯ ಕ್ಷೇತ್ರದಲ್ಲಿಯೂ ತಮ್ಮ ಪ್ರತಿಭೆ ಮತ್ತು ಸೇವಾ ದಕ್ಷತೆಯನ್ನು ಸಾಬೀತಿಸಿದ ಡಾ॥ ಆಳ್ವರವರು ಸೌತ್ ಕೆನರಾ ಬ್ರಾಂಚ್ ಆಫ್ ಮೆಡಿಕಲ್ ಅಸೋಸಿಯೇಷನ್‌ನ ಎರಡು ಅವಧಿಗೆ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. 1962ರಿಂದ 1967ರವರೆಗೆ ಡಾ॥ ನಾಗಪ್ಪ ಆಳ್ವರವರು ರಾಜ್ಯದ ಆರೋಗ್ಯ ಸಚಿವರಾಗಿ ಗಣನೀಯ ಸೇವೆ ಸಲ್ಲಿಸಿದರು. ತಾವು ವಹಿಸಿಕೊಂಡ ಸಚಿವ ಖಾತೆಯಲ್ಲಿ ಸಾಕಷ್ಟು ಸುಧಾರಣೆ ತರುವಲ್ಲಿ ಅವಿರತ ಶ್ರಮವಹಿಸಿದರು. ಮುಂದೆ ಅವರು ರಾಜ್ಯಸಭೆಗೂ ಸದಸ್ಯರಾಗಿ ಸಲ್ಲಿಸಿದ ಸೇವಾವಧಿಯಲ್ಲೂ ವೈದ್ಯಕೀಯ ಕ್ಷೇತ್ರಕ್ಕೆ ನೀಡಿದ ಕೊಡುಗೆ ಪ್ರಶಂಸನೀಯವಾದುದು. ಬೆಂಗಳೂರಿನ ನಿಮ್ಹಾನ್ಸ್ ಆರೋಗ್ಯ ಸಂಸ್ಥೆ ಹಾಗೂ ಕಿದ್ವಾಯಿ ಸ್ಮಾರಕ ಆಸ್ಪತ್ರೆಯನ್ನು ಹುಟ್ಟುಹಾಕುವಲ್ಲಿ ಹಾಗೂ ಅದರ ಬೆಳವಣಿಗೆಯಲ್ಲಿ ಡಾ॥ ಆಳ್ವರವರ ಪ್ರಯತ್ನ ಮತ್ತು ಪಾಲ್ಗೊಳ್ಳುವಿಕೆಯು ಅತ್ಯಧಿಕವಾಗಿತ್ತು. ರಾಜಕೀಯದ ಎಲ್ಲಾ ಸಂದರ್ಭಗಳಲ್ಲಾಗಲಿ ಹಾಗೂ ವೈದ್ಯರಾಗಿದ್ದಾಗ ಅವರು ಅನೇಕ ದೇಶ-ವಿದೇಶಗಳಲ್ಲಿ ಜರುಗಿದ ವಿಚಾರ ಸಂಕಿರಣಗಳಲ್ಲಿ ಹಾಗೂ ಸಮ್ಮೇಳನಗಳಲ್ಲಿ ಭಾರತದ ಪ್ರತಿನಿಧಿಯಾಗಿ ಪಾಲ್ಗೊಂಡಿದ್ದರು. ಅಲ್ಲಿನ ತಮ್ಮ ಸ್ವೀಕಾರಾರ್ಹ ಅನುಭವಗಳನ್ನು ಈ ದೇಶದ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಅಳವಡಿಸಿಕೊಳ್ಳಲು ಸೂಕ್ತ ಸಲಹೆ-ಸೂಚನೆಗಳನ್ನು ನೀಡಿದರು.

## ಗೋವಾ ವಿಮೋಚನಾ ಚಳವಳಿಯ ನಾಯಕತ್ವ

1954ರ ಸಂದರ್ಭದಲ್ಲಿ ಗೋವಾ ವಿಮೋಚನೆಗಾಗಿ ಅಖಿಲ ಭಾರತ ಚಳವಳಿಯೊಂದು ತೀವ್ರ ಸ್ವರೂಪ ಪಡೆಯಿತು. ದೇಶಾದ್ಯಂತ ಗೋವಾ ವಿಮೋಚನೆಯ ಸಲುವಾಗಿ ಹಲವಾರು ಸಂಘಗಳು ಹುಟ್ಟಿಕೊಂಡವು. ಮಂಗಳೂರು ಮತ್ತು ಉಡುಪಿಯಲ್ಲಿಯೂ ಗೋವಾ ವಿಮೋಚನಾ ಸಮಿತಿಗಳು ರೂಪು ತಳೆದವು. ಮಂಗಳೂರಿನಲ್ಲಿ ಡಾ॥ನಾಗಪ್ಪ ಆಳ್ವರವರು, ಕೆ.ಕೆ.ಶೆಟ್ಟಿಯವರು, ಕೆ.ಎಸ್.ಎನ್.ಅಡಿಗರವರು ನಾಯಕರಾಗಿ ಗೋವಾ ವಿಮೋಚನಾ ಸಂಗ್ರಾಮ ಸಮಿತಿಯು ರಚಿಸಲ್ಪಟ್ಟಿತು. ಈ ಚಳವಳಿಯಲ್ಲಿ ಡಾ॥ ನಾಗಪ್ಪ ಆಳ್ವರವರು ಪ್ರಧಾನ ಪಾತ್ರ ವಹಿಸಿದ್ದರು. 1955ರ ಗೋವಾ ಸತ್ಯಾಗ್ರಹದಲ್ಲಿ ಶ್ರೀಯುತರುಗಳಾದ ಯು.ಎಸ್.ನಾಯಕ್, ದಾಸ ಶೇರಿಗಾರ, ಅಮ್ಮೆಂಬಳ ಬಾಳಪ್ಪ, ಜಯಾನಂದ ದೇವಾಡಿಗರು ಪ್ರಮುಖವಾಗಿ ಆಳ್ವ ಅವರೊಂದಿಗೆ ಸಹಕರಿಸಿದ್ದರು. 1957ರಲ್ಲಿ

ಸಾರ್ವತ್ರಿಕ ಚುನಾವಣೆಗಳು ನಡೆಯುತ್ತಿದ್ದಾಗ, ಗೋವಾ ವಿಮೋಚನೆ ವಿಷಯವು ಮತ್ತೊಮ್ಮೆ ತುರ್ತು ಪ್ರಶ್ನೆಯಾಗಿ ಉದ್ಭವಿಸಿತು. ಭಾರತದ ಸ್ವಾತಂತ್ರ್ಯ ಭದ್ರತೆಗೆ ಗೋವಾ ವಿಮೋಚನೆಯು ಜರೂರಾದ ಅಗತ್ಯವೆನಿಸಿದಾಗ ಭಾರತೀಯ ಸೇನೆಯು ಒಳನುಗ್ಗಿ ಅಲ್ಲಿನ ಸ್ಥಳೀಯರ ಸಹಾಯ ಪಡೆದು ಗೋವೆಯನ್ನು ಪೋರ್ಚುಗೀಸರಿಂದ ವಿಮೋಚನೆಗೊಳಿಸಿತು. ಡಾ॥ ನಾಗಪ್ಪ ಆಳ್ವರು ತಮ್ಮನ್ನು ನೇರವಾಗಿ ತೊಡಗಿಸಿಕೊಂಡ ಈ ಚಳುವಳಿಯು ಸ್ವತಂತ್ರ ಭಾರತದ ಇತಿಹಾಸದಲ್ಲಿ ಒಂದು ಮಹತ್ವಪೂರ್ಣ ಘಟನೆಯಾಗಿತ್ತು.

## ಆದರ್ಶ ಶಾಸಕ

1957ರಲ್ಲಿ ದೇಶದಲ್ಲಿ ಮಹಾ ಚುನಾವಣೆಗಳು ಜರುಗಿದವು. ಡಾ॥ ಕೆ.ನಾಗಪ್ಪ ಆಳ್ವರವರು ಪಾಣೆ-ಮಂಗಳೂರು ವಿಧಾನಸಭಾ ಕ್ಷೇತ್ರದಿಂದ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿ [illegible] ಎರಡನೆಯ ವಿಧಾನಸಭೆಗೆ ಶಾಸಕರಾಗಿ ಆಯ್ಕೆಯಾದರು. ಇದು ಅವರ ಪ್ರಥಮ ಸಕ್ರಿಯ ರಾಜಕೀಯ ಪ್ರವೇಶದ ಘಟ್ಟವಾಗಿತ್ತು. ಈ ಅವಧಿಯಲ್ಲಿ ಮಾನ್ಯ ಶ್ರೀ ಎಸ್.ಆರ್.ಕಂಠಿಯವರು ಸನ್ಮಾನ್ಯ ವಿಧಾನಸಭಾಧ್ಯಕ್ಷರಾಗಿ ಹಾಗೂ ಮಾನ್ಯ ಶ್ರೀ ಎಸ್. ನಿಜಲಿಂಗಪ್ಪ ಮತ್ತು ಬಿ.ಡಿ. ಜತ್ತಿಯವರು ಮುಖ್ಯಮಂತ್ರಿಗಳಾಗಿ ಅಧಿಕಾರದಲ್ಲಿದ್ದರು. ಪ್ರಥಮ ಬಾರಿಗೆ ಶಾಸನ ಸಭೆಯನ್ನು ಪ್ರವೇಶಿಸಿದ ಡಾ॥ ಆಳ್ವರವರು ಒಬ್ಬ ಅಧ್ಯಯನಶೀಲ ಶಾಸಕರಾಗಿ ರೂಪುಗೊಳ್ಳತೊಡಗಿದರು. ತಮ್ಮನ್ನು ಚುನಾಯಿಸಿದವರಿಗಿಂತ ತಾನು ಮೇಲ್ಪಟ್ಟವನೆಂದು ಭಾವಿಸದೆ ಕರ್ತವ್ಯ ನಿರ್ವಹಿಸಲು ಪ್ರಾರಂಭಿಸಿದರು. ಅವಸರದ ಸಂದರ್ಭಗಳಲ್ಲಿಯೂ ತಮ್ಮ ಶಾಸಕತ್ವದ ವಿಶೇಷ ಜವಾಬ್ದಾರಿಯನ್ನು ಮರೆಯುತ್ತಿರಲಿಲ್ಲ. ಶಾಸಕರಾಗಿ ಗೌರವಾರ್ಹ ರೀತಿಯಲ್ಲಿ ನಡೆಯಲು ತಮ್ಮಲ್ಲಿ ವಿವೇಕ ಮತ್ತು ಆತ್ಮ ಸಂಯಮ ಅಗತ್ಯವೆಂಬುದು ಅವರಿಗೆ ಮನದಟ್ಟಾಗಿತ್ತು. ಯಾವುದೇ ವಿಚಾರವನ್ನು ಸದನದಲ್ಲಿ ಪ್ರಸ್ತಾಪಿಸಬೇಕಾದಾಗ ಅದರ ಹಿನ್ನೆಲೆ, ಉದ್ದೇಶ, ಪರಿಣಾಮ ಮತ್ತು ಅಂಕಿ-ಅಂಶಗಳನ್ನು ಪ್ರಮುಖವಾಗಿ ಅಭ್ಯಸಿಸಿದ ನಂತರವೇ ವಿಷಯ ಮಂಡಿಸಿ ಮಾತನಾಡುತ್ತಿದ್ದರು. ಸದನದಲ್ಲಿನ ಹಿರಿಯ ಶಾಸಕರುಗಳ ಪ್ರತಿಭೆ ವೀಕ್ಷಿಸಿ, ತಾವೂ ತಮ್ಮ ವ್ಯಾಪ್ತಿಯಲ್ಲಿ ಪ್ರಾಮಾಣಿಕ ಕರ್ತವ್ಯ ನಿರ್ವಹಣೆಯಲ್ಲಿ ತೊಡಗಿದರು. ಪ್ರತಿ ವರ್ಷವೂ ಆಯವ್ಯಯ ಅಂದಾಜು ಮಂಡನೆ ಕುರಿತಾದ ಚರ್ಚೆಯಲ್ಲಿ ಭಾಗವಹಿಸಿ ತಮ್ಮ ಅನುಭವ ಮತ್ತು ಅಧ್ಯಯನದ ವಿಚಾರಗಳನ್ನು ಅಚ್ಚುಕಟ್ಟಾಗಿ ಸದನದಲ್ಲಿ ಮಂಡಿಸುತ್ತಿದ್ದರು. ತಮ್ಮ ಕ್ಷೇತ್ರ ಹಾಗೂ ಜಿಲ್ಲೆಯ ಅತ್ಯಂತ ಗಂಭೀರ ಸಮಸ್ಯೆಗಳನ್ನು ಸಂದರ್ಭೋಚಿತವಾಗಿ ಮಂಡಿಸಿ ಪರಿಹಾರವನ್ನು ಸರಕಾರದಿಂದ ಕಂಡುಕೊಳ್ಳುವ

ಆವಶ್ಯಕತೆಗನುಗುಣವಾಗಿ ಸುವ್ಯವಸ್ಥೆಗೊಳಿಸುವ ಅವರ ಸುಧಾರಿತ ಕ್ರಮಗಳು ಜನತೆಗೆ ಸಾಕಷ್ಟು ರೀತಿಯಲ್ಲಿ ಪರಿಹಾರ ಒದಗಿಸಿಕೊಟ್ಟಿತು. ಅವರು ಸಚಿವರಾಗಿದ್ದಾಗಿನ ಅವಧಿಯಲ್ಲಿ ಬೆಂಗಳೂರು ಸೇರಿದಂತೆ ಚಿತ್ರದುರ್ಗ, ದಾವಣಗೆರೆ, ಮಂಗಳೂರು, ಗುಲ್ಬರ್ಗ ಮುಂತಾದ ಕಡೆಗಳಲ್ಲಿ ಕಾಲರಾ ಮತ್ತು ಸಿಡುಬು ರೋಗಗಳು ಹರಡಿ ಜನತೆಯಲ್ಲಿ ಭಯ-ಭೀತಿ ಉಂಟುಮಾಡಿತ್ತು. ಆ ಸಂದರ್ಭದಲ್ಲಿ ರೋಗಗಳ ತ್ವರಿತ ನಿವಾರಣೆ ಹಾಗೂ ಸಂಪೂರ್ಣ ನಿರ್ಮೂಲನೆಗಾಗಿ ಕ್ಷಿಪ್ರಗತಿಯ ಕ್ರಮಗಳನ್ನು ಜಾರಿಗೆ ತರುವ ಮೂಲಕ ರೋಗವನ್ನು ಹತೋಟಿಗೆ ತಂದು ಜನತೆಯಲ್ಲಿ ಕವಿದಿದ್ದ ಆತಂಕವನ್ನು ಹೋಗಲಾಡಿಸಿ ಸಮಾಧಾನ ಮೂಡಿಸುವಲ್ಲಿ ಸಫಲರಾದರು. ತಮ್ಮ ರಾಜಕೀಯದಂತಹ ಸಾರ್ವಜನಿಕ ಸೇವೆಯಲ್ಲಿ ಯಾವುದೇ ಭ್ರಷ್ಟಾಚಾರ, ಸ್ವಜನಪಕ್ಷಪಾತ ಮುಂತಾದವುಗಳಿಂದ ದೂರವಿದ್ದು ಕಾರ್ಯ ನಿರ್ವಹಿಸುತ್ತಿದ್ದರು. ತಮ್ಮ ಇಲಾಖೆಯ ಎಲ್ಲ ಕೆಲಸ-ಕಾರ್ಯಗಳನ್ನು ಪಾರದರ್ಶಕವಾಗಿರಿಸಿಕೊಂಡು ಮುನ್ನಡೆಯುತ್ತಿದ್ದರು. ಸದನದಲ್ಲಿ ಸನ್ಮಾನ್ಯ ಸದಸ್ಯರುಗಳು ಪ್ರಸ್ತಾಪಿಸುವ ಯಾವುದೇ ಪ್ರಶ್ನೆಗಳು ಹಾಗೂ ಇನ್ನಿತರ ವಿಚಾರಗಳಿಗೆ ಅಂಕಿ-ಅಂಶಗಳ ಸಮೇತ ಸೂಕ್ತ ರೀತಿಯಲ್ಲಿ ಉತ್ತರಿಸುವ ಜಾಣ್ಮೆಯನ್ನು ಅವರು ರೂಢಿಸಿಕೊಂಡಿದ್ದರು. ರಾಜ್ಯದಲ್ಲಿ ಕೇಂದ್ರ ಸರಕಾರದ ಆರೋಗ್ಯ ಕಾರ್ಯಕ್ರಮಗಳ ಕುರಿತಾದ ಅನೇಕ ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ಪ್ರಧಾನ ಪಾತ್ರ ವಹಿಸಿದ್ದರು. ತಮ್ಮ ಸಚಿವ ಸ್ಥಾನದ ಕಾಲಾವಧಿಯಲ್ಲಿ ಹಲವಾರು ಮಸೂದೆ, ತಿದ್ದುಪಡಿಗಳನ್ನು ಸದನದಲ್ಲಿ ಮಂಡಿಸಿ ಶಾಸನ ಪ್ರಕ್ರಿಯೆಗೆ ಅನುಮೋದನೆ ದೊರಕಿಸಿಕೊಂಡರು. ಮಾನ್ಯ ಸದಸ್ಯರುಗಳು ಮಂಡಿಸಿದ ಠರಾವು ಇತ್ಯಾದಿಗಳಿಗೆ ಸಮರ್ಪಕ ಹಾಗೂ ಸೂಕ್ತ ಉತ್ತರಗಳನ್ನು ನೀಡಿ ಸಮರ್ಥರೆನಿಸಿಕೊಂಡರು.

## ಮುತ್ಸದ್ದಿ ರಾಜ್ಯಸಭಾ ಸದಸ್ಯ

1967ರ ನಂತರ ರಾಜ್ಯ ರಾಜಕಾರಣದಲ್ಲಿ ಸಕ್ರಿಯರಾಗಿದ್ದ ಅಕ್ಬರರು ಮೂರನೆಯ ಬಾರಿಗೆ ಸುರತ್ಕಲ್ ಕ್ಷೇತ್ರದಿಂದ ವಿಧಾನಸಭೆಗೆ ಸ್ಪರ್ಧಿಸಿ ಸೋಲು ಅನುಭವಿಸಿದರಾದರೂ ರಾಜಕೀಯ ಹುದ್ದೆಗಳ ಬಗ್ಗೆ ಅಷ್ಟೇನೂ ವ್ಯಾಮೋಹ ಬೆಳೆಸಿಕೊಂಡಿರದಿದ್ದ ಅವರು ಎಂದಿನಂತೆ ತಮ್ಮ ಜನಸೇವಾ ಹಾಗೂ ವೈದ್ಯಕೀಯ ಸೇವಾ ಕಾರ್ಯಗಳಲ್ಲಿ ತೊಡಗಿಸಿಕೊಂಡರು. ಮುಂದೆ ಮೈಸೂರು ವಿಧಾನ ಸಭೆಯಿಂದ ರಾಜ್ಯಸಭೆಗೆ 03-04-1970ರಿಂದ 02-04-1976ರ ಅವಧಿಗೆ ಆಯ್ಕೆಯಾದರು. ರಾಜ್ಯಸಭಾ ಸದಸ್ಯತ್ವದ ಅವಧಿಯಲ್ಲಿ ರಾಜ್ಯ ಮತ್ತು ರಾಷ್ಟ್ರದ ಹಿತಾಸಕ್ತಿಯ ದಿಕ್ಕಿನಲ್ಲಿ ಅವರು ಸದನದಲ್ಲಿ ಮಂಡಿಸಿದ ಪ್ರಶ್ನೆಗಳು ಮತ್ತು ಪ್ರಸ್ತಾಪಿಸಿದ

ವಿಷಯಗಳು ಗಣನೀಯ ವಿಶೇಷತೆ: The Homeopathy Central Council Bill, 1971, State Bank Laws (Amdt.) Bill, 1973, Tokyo Convintion Bill, 1974, Finance Bill - 1975, Policy for Children ಮುಂತಾದ ಮಸೂದೆಗಳ ಮೇಲೆ ಅವರು ಮಂಡಿಸಿದ ವಿಷಯ, ವಿಚಾರಗಳು ಮೌಲ್ಯಯುತವಾಗಿದ್ದವು.

## ಅವಿಭಾಜಿತ ಕಾಂಗ್ರೆಸ್‌ನ ಕಟ್ಟಕಡೆಯ ಅಧ್ಯಕ್ಷ

ರಾಜ್ಯಸಭೆಯಲ್ಲಿ ಡಾ|| ಆಳ್ವರವರು ಸಹಜವಾಗಿಯೇ ತಮ್ಮ ರಾಜಕೀಯ ಮುತ್ಸದ್ದಿತನ ತೋರಿದರು. ಇದರಲ್ಲಿ ಆರೋಗ್ಯ ಸಂಬಂಧಿತ ವಿಷಯಗಳು ಪ್ರಧಾನವಾಗಿ ಪ್ರಬುದ್ಧತೆಯಿಂದ ಪಾಲ್ಗೊಂಡು ಹೆಸರು ಗಳಿಸಿದರು. ದೇಶದಲ್ಲಿ ಕಾಂಗ್ರೆಸ್ ವಿಭಾಗವಾದ ನಂತರ ತಮ್ಮ ಪಕ್ಷದ ರಾಜಕೀಯ ಮುಂದಾಳುವಾಗಿದ್ದ ಶ್ರೀಮಾನ್ ನಿಜಲಿಂಗಪ್ಪರವರನ್ನು ಅನುಸರಿಸಿ ತಮ್ಮ ಆತ್ಮಸಾಕ್ಷಿಗನುಗುಣವಾಗಿ ಸಂಸ್ಥಾ ಕಾಂಗ್ರೆಸ್‌ನಲ್ಲಿ ಉಳಿದುಕೊಂಡರು. ತನ್ಮೂಲಕ ತಮಗೆ ಬರಬಹುದಾಗಿದ್ದ ಅಧಿಕಾರದ ಹುದ್ದೆಗಳನ್ನು ನಿಷ್ಠೆಯ ಕಾರಣಕ್ಕಾಗಿ ಕಳೆದುಕೊಂಡರು. ಡಾ|| ಆಳ್ವರವರು ತಾವು ನಂಬಿದ ತತ್ವಾದರ್ಶಗಳನ್ನು, ನಿಷ್ಠೆ, ಗೌರವಗಳಿಂದ ಪಾಲಿಸುತ್ತಿದ್ದರು. ಅವರು ಅವಿಭಜಿತ ಕಾಂಗ್ರೆಸ್‌ನ ಕಟ್ಟಕಡೆಯ ಅಧ್ಯಕ್ಷರೂ ಆಗಿದ್ದರೆಂಬುದು ಉಲ್ಲೇಖನೀಯ ಅಂಶವಾಗಿದೆ. ತದನಂತರವೂ, ಪಕ್ಷದ ಉನ್ನತ ಹುದ್ದೆಯಲ್ಲಿದ್ದು, ಪಕ್ಷ ನಿಷ್ಠರಾಗಿದ್ದುಕೊಂಡು ಮುಂದುವರಿದರು. ಭಾರತ ದೇಶಕ್ಕಾಗಿ ರಷ್ಯಾ ಮಾದರಿಯ ಯೋಜನೆಗಳು ರೂಪುಗೊಳ್ಳುತ್ತಿರುವುದನ್ನು ರಾಜ್ಯಸಭೆಯಲ್ಲಿ ಕಟುವಾಗಿ ವಿರೋಧಿಸಿ ತಮ್ಮ ವಾದವನ್ನು ಸಮರ್ಥಿಸಿಕೊಂಡ ಪ್ರಮುಖರಲ್ಲಿ ಡಾ|| ಆಳ್ವ ಕೂಡ ಒಬ್ಬರು. ದೇಶದ ಹಿತದೃಷ್ಟಿಯಿಂದ ಪೂರಕವಲ್ಲದ ಯಾವುದೇ ವಿಷಯವನ್ನು ಅವರು ಬಲವಾಗಿ ವಿರೋಧಿಸುವ ಮನೋಭಾವ ಹೊಂದಿದ್ದರು. ಪಾರ್ಲಿಮೆಂಟ್‌ನ ಆರೋಗ್ಯ ಸಮಿತಿ ಹಾಗೂ ಇತರ ಸಮಿತಿಗಳಲ್ಲಿ ಕಾಲಕಾಲಕ್ಕೆ ಸದಸ್ಯರಾಗಿ ಸೇವೆ ಸಲ್ಲಿಸಿದ್ದರು. 1975ರಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರು ಪ್ರಜಾಪ್ರಭುತ್ವ ರಕ್ಷಣೆಯ ಹೆಸರಿನಲ್ಲಿ ತುರ್ತು ಪರಿಸ್ಥಿತಿ ಘೋಷಿಸಿದರು. ಅಭಿವ್ಯಕ್ತಿ ಸ್ವಾತಂತ್ರ್ಯ, ಪತ್ರಿಕಾ ಸ್ವಾತಂತ್ರ್ಯ, ಅನ್ಯಾಯಗಳನ್ನು ಪ್ರತಿಭಟಿಸುವ ಅವಕಾಶವೂ ಒಳಗೊಂಡಂತೆ ಎಲ್ಲಾ ನಾಗರಿಕ ಹಕ್ಕುಗಳು ನಿಷೇಧಿಸಲ್ಪಟ್ಟವು. ಇದೇ ಅವಧಿಯಲ್ಲಿ 20 ಅಂಶಗಳ ಕಾರ್ಯಕ್ರಮವು ಕೂಡ ಜಾರಿಗೆ ಬಂತು. ತುರ್ತು ಪರಿಸ್ಥಿತಿಯ ವಿರುದ್ಧ ಧ್ವನಿ ಎತ್ತಿದ ಪರಿಣಾಮ ಆಳ್ವರವರು ಹದಿನಾಲ್ಕು ತಿಂಗಳ ಕಾಲ ಜೈಲು ವಾಸ ಅನುಭವಿಸಬೇಕಾಗಿ ಬಂತು. ಅವರು ಬೆಂಗಳೂರು ಜೈಲಿನಲ್ಲಿ ಬಂಧಿಯಾಗಿದ್ದ ಸಂದರ್ಭದಲ್ಲಿ ಮಾಜಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ, ಅಡ್ವಾಣಿ ಮತ್ತು ರಾಮಕೃಷ್ಣ ಹೆಗಡೆಯವರಾದಿಯಾಗಿ

ಪ್ರಮುಖ ರಾಜಕಾರಣಿಗಳು ಜೊತೆಗಿದ್ದರು. ಜೈಲಿನಲ್ಲಿ ಅವರು ಯಾವಾಗಲೂ ಸಂತೋಷಚಿತ್ತರಾಗಿದ್ದು ಎಲ್ಲರೊಂದಿಗೆ ವಾತ್ಸಲ್ಯಮಯಿಯಾಗಿದ್ದು, ಹಿರಿಯ ಮಾದರಿ ರಾಜಕಾರಣಿಯಾಗಿ ಪ್ರತಿಬಿಂಬಿತರಾದರು. ಅನೇಕ ಬಾರಿ ಕೇಂದ್ರ ಸರಕಾರದ ವತಿಯಿಂದ ಮತ್ತು ಖಾಸಗಿಯಾಗಿ ವಿದೇಶಗಳಿಗೆ ಹೋಗಿ ಬರುವ ಮೂಲಕ ನಮ್ಮ ದೇಶದ ಉನ್ನತ ಪರಂಪರೆಯ ಸಂಸ್ಕೃತಿಯನ್ನು ಪರಿಚಯಿಸುವ ಕರ್ತವ್ಯ ನಿರ್ವಹಿಸಿ ಅದರ ಪ್ರತಿಫಲವನ್ನು ದೇಶಕ್ಕೆ ತಂದುಕೊಟ್ಟರು.

1977ರಲ್ಲಿ ಜನತಾ ಸರಕಾರ ಅಧಿಕಾರಕ್ಕೆ ಬಂದಾಗ ಡಾ॥ ಆಳ್ವರ ಪ್ರತಿಷ್ಠಿತ ವ್ಯಕ್ತಿತ್ವ ಹಾಗೂ ಸೇವಾ ಮನೋಭಾವವನ್ನು ಗುರುತಿಸಿದ ಕೇಂದ್ರ ಸರಕಾರ ಅವರನ್ನು ತುರ್ತು ಪರಿಸ್ಥಿತಿಯ ಅವಧಿಯಲ್ಲಿ ಮಾನ್ಯ ಜಯಪ್ರಕಾಶ ನಾರಾಯಣರವರ ಯಕೃತ್‌ಗೆ ಹಾನಿಯುಂಟು ಮಾಡಿದ ಕಾರಣಗಳ ಬಗ್ಗೆ ತನಿಖೆ ನಡೆಸಲು ನೇಮಿಸಿದ ಏಕ ಸದಸ್ಯ ಆಯೋಗದ ಅಧ್ಯಕ್ಷರನ್ನಾಗಿ ನೇಮಿಸಿತು. ಆ ಕುರಿತ ಜವಾಬ್ದಾರಿಯನ್ನು ಆಳ್ವರವರು ಸಮರ್ಪಕವಾಗಿ ಹಾಗೂ ವಸ್ತುನಿಷ್ಠವಾಗಿ ನಿರ್ವಹಿಸಿ ಪೂರೈಸಿದರು.

ತಮ್ಮ ರಾಜ್ಯಸಭಾ ಸದಸ್ಯತ್ವದ ಅವಧಿಯನ್ನು ಯಶಸ್ವಿಯಾಗಿ ಮುಕ್ತಾಯಗೊಳಿಸಿ, 1979ರಲ್ಲಿ ಸಕ್ರಿಯ ರಾಜಕಾರಣದಿಂದ ಸ್ವಯಂ ನಿವೃತ್ತಿ ಹೊಂದಿದರು. ತಾವು ನಡೆದು ಬಂದ ರಾಜಕೀಯ ಜೀವನದುದ್ದಕ್ಕೂ ಯಾವುದೇ ಕಳಂಕವಿಲ್ಲದೆ, ಅಜಾತಶತ್ರುವಾಗಿ ನಿಸ್ವಾರ್ಥವಾಗಿ ಜನಸೇವೆ ಸಲ್ಲಿಸಿ ಮಾದರಿ ರಾಜಕಾರಣಿಯಾಗಿ ಖ್ಯಾತರಾದರು. ಅನುಭವಿ ರಾಜಕಾರಣಿಯಾಗಿ ಒಳ್ಳೆಯ ಹೆಸರು ಗಳಿಸಿದ್ದ ಆಳ್ವರಿಗೆ ರಾಜಕೀಯದಲ್ಲಿ ಉಜ್ವಲ ಭವಿಷ್ಯವಿತ್ತು. ಅಂತೆಯೇ ರಾಜ್ಯಪಾಲ, ರಾಯಭಾರಿ ಹುದ್ದೆಗಳಿಗೆ ಅವರ ಹೆಸರು ಪ್ರಸ್ತಾಪವಾದಾಗಲೂ ವಿಚಲಿತರಾಗದೆ ಅದನ್ನು ನಯವಾಗಿ ಬಿಟ್ಟುಕೊಟ್ಟರು. ತಮ್ಮ ಮಕ್ಕಳನ್ನು ಕೂಡ ರಾಜಕೀಯ ಕ್ಷೇತ್ರದಲ್ಲಿ ತೊಡಗಿಸಿಕೊಳ್ಳಲು ಅವರು ಪ್ರೋತ್ಸಾಹಿಸಲಿಲ್ಲ. ಮಹತ್ತರವಾದ ಈ ಅವಧಿಯಲ್ಲಿ ಅವರು ರಾಜಕೀಯದಿಂದ ದೂರವಾಗಿ ಗಾಂಧಿ ಶಾಂತಿ ಪ್ರತಿಷ್ಠಾನ, ಗಾಂಧಿ ಸ್ಮಾರಕ ನಿಧಿ, ಸರ್ವೋದಯ ಮಂಡಳ, ಪೀಪಲ್ಸ್ ಟ್ರಸ್ಟ್, ಭಾರತೀಯ ವಿದ್ಯಾಭವನ ಮತ್ತು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಗಳಲ್ಲದೆ ಹಲವಾರು ಸಾಂಸ್ಕೃತಿಕ, ಶೈಕ್ಷಣಿಕ, ಸಾಮಾಜಿಕ ಸಂಘಟನೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು.

## ವೈಚಾರಿಕ ಮತ್ತು ಆಧ್ಯಾತ್ಮಿಕದತ್ತ ಒಲವು

ಡಾ॥ ಆಳ್ವರವರು ತಮ್ಮ ವಿಶ್ರಾಂತ ಜೀವನದ ಬಹುತೇಕ ಅವಧಿಯನ್ನು ವೈಚಾರಿಕ ಮತ್ತು ಆಧ್ಯಾತ್ಮಿಕ ವಿಚಾರಗಳಲ್ಲಿ ತೊಡಗಿಸಿಕೊಂಡರು. ಆಧ್ಯಾತ್ಮಿಕ ಸಾಧನೆಯ ಹಾದಿಯಲ್ಲಿ ಕೀರ್ತಿ, ಪ್ರತಿಷ್ಠೆಗಳು ಬಹು ದೊಡ್ಡ ಅಡೆ-ತಡೆಗಳು ಮತ್ತು ಅವನತಿಯ ಸಾಧನಗಳೆಂಬ ಅರಿವು ಅವರು ರಾಜಕೀಯ ನಿವೃತ್ತಿ ಹೊಂದಲು ಜಾಗೃತಗೊಳಿಸಿರಬಹುದು. ತಮ್ಮ ಪೂರ್ವಾಶ್ರಮದಲ್ಲಿ ಅವರು ದೇವರು, ಧಾರ್ಮಿಕತೆಯ ಬಗ್ಗೆ ಅಷ್ಟಾಗಿ ವೈಚಾರಿಕತೆ ಬೆಳೆಸಿಕೊಂಡಿರದಿದ್ದರೂ ಅಕಸ್ಮಾತ್ತಾಗಿ ಒಮ್ಮೆಲೇ ಆ ಕಡೆಗೆ ಧಾವಿಸಿದುದು ಒಂದು ಕೌತುಕದ ವಿಚಾರ. ಜೀವನದಲ್ಲಿ ಒಳಿತನ್ನುಂಟು ಮಾಡುವಕಡೆಗೇ ಗಮನಹರಿಸಬೇಕೆಂದು ಅವರು ತಮ್ಮ ಆತ್ಮೀಯರಿಗೆ ಆಗಾಗ ಕಿವಿಮಾತು ಹೇಳುತ್ತಿದ್ದರು. ಅವರು ಸತ್ಯಸಾಯಿ ಟ್ರಸ್ಟ್‌ನ ಸಕ್ರಿಯ ಕಾರ್ಯಕರ್ತರಾಗಿ, ಇತರ ಹಲವಾರು ಧಾರ್ಮಿಕ ಸಂಘ-ಸಂಸ್ಥೆಗಳ ಮುಖ್ಯಸ್ಥರಾಗಿಯೂ ಕೆಲಸ ನಿರ್ವಹಿಸುತ್ತಿದ್ದರು. ಆಗಿಂದಾಗ್ಗೆ ಧಾರ್ಮಿಕ ಅನುಯಾಯಿಗಳು, ಮಠ-ಮಾನ್ಯಗಳವರು, ಸಾಧು-ಸಂತರು ಡಾ॥ ಆಳ್ವರನ್ನು ಕಾಣುವ ಸಲುವಾಗಿ ಅವರ ಮನೆಗೆ ಬಂದು ಉಭಯ ಕುಶಲೋಪರಿಗಳೊಂದಿಗೆ ಮರಳುತ್ತಿದ್ದುದು ವಿಶೇಷವಾಗಿತ್ತು. ಪುಟ್ಟಪರ್ತಿಯ ಶ್ರೀ ಸತ್ಯಸಾಯಿ ಬಾಬಾರವರು ಡಾ॥ ಆಳ್ವರವರ ಜನ್ಮದಿನದಂದು ಆಶೀರ್ವಚನ ನೀಡುವ ಮೂಲಕ ಅವರ ಪ್ರೀತಿಯ ಖಾದಿ ಬಟ್ಟೆಯ ಉಡುಪನ್ನು ತಪ್ಪದೆ ಉಡುಗೊರೆಯಾಗಿ ನೀಡುತ್ತಿದ್ದುದನ್ನು ಕುಟುಂಬ ವರ್ಗದವರು ಸ್ಮರಿಸುತ್ತಾರೆ. ಯಾವಾಗಲೂ ತಮ್ಮ ಮನೆಗೆ ಪ್ರೀತಿ ವಿಶ್ವಾಸದಿಂದ ಬಂದು ಹೋಗುವ ಸಾಹಿತಿಗಳ, ಬುದ್ಧಿಜೀವಿಗಳ, ಕಲಾವಿದರ, ಪತ್ರಕರ್ತರ, ಮತ್ತಿತರ ಪ್ರಮುಖ ರಂಗಗಳ ಪ್ರತಿಷ್ಠಿತರುಗಳ ಬಗ್ಗೆ ಗೌರವಾದರಗಳನ್ನಿಟ್ಟು ಯಥೋಚಿತವಾಗಿ ಸತ್ಕರಿಸಿ ಉಪಚರಿಸುತ್ತಿದ್ದರು.

ತಮ್ಮ ಪ್ರೀತಿಯ ಸಹಧರ್ಮಿಣಿ ಕಲ್ಯಾಣಿ ಆಳ್ವರವರು 1992ರಲ್ಲಿ ಅಗಲಿದ ಬಳಿಕ ನಾಗಪ್ಪ ಆಳ್ವರವರು ಜೀವನದಲ್ಲಿ ಸ್ವಲ್ಪಮಟ್ಟಿಗೆ ವಿಚಲಿತರಾದಂತೆ ತೋರುತ್ತಿದ್ದರು. ಸ್ಥಿತಪ್ರಜ್ಞೆಯಿಂದ ನಿರ್ಮಲಚಿತ್ತರಾಗಿ ತಮ್ಮ ಕುಟುಂಬದವರೊಂದಿಗೆ ಶಾಂತತೆಯಿಂದ ಜೀವಿಸುತ್ತಿದ್ದರು. ಸದಾ ಹಸನ್ಮುಖಿರಾಗಿ ಯಾರಿಗೂ ನೋವು, ಹಾನಿಯುಂಟು ಮಾಡದೆ, ವಾತ್ಸಲ್ಯಮಯಿಯಾಗಿ ಜನಸೇವೆ ಮಾಡಬೇಕೆಂಬುದು ಅವರ ಸಂದೇಶವಾಗಿತ್ತು. ಈ ರಾಷ್ಟ್ರಕ್ಕೆ ಡಾ॥ ಕೆ.ನಾಗಪ್ಪ ಆಳ್ವರವರು ಬಂಟ ಜನಾಂಗದ ಕೊಡುಗೆಯಾಗಿದ್ದು, ಸರ್ವ ಜನರೂ ಅವರನ್ನು ಪ್ರೀತಿಸುವ ಸರ್ವಾದರಣೀಯ ವ್ಯಕ್ತಿಯಾಗಿ, ಉದಾರ ಜನನಾಯಕರಾಗಿ, ರಾಷ್ಟ್ರೀಯ ನೇತಾರರಾಗಿ ಚರಿತ್ರೆಯಲ್ಲಿ ದಾಖಲಾದರು.

1996ರ ಮಾರ್ಚ್ ಮೂರರಂದು ಡಾ॥ ಕೆ.ನಾಗಪ್ಪ ಆಳ್ವರವರು ಇಹಲೋಕ ತ್ಯಜಿಸಿದರು. ತನ್ನ ಬಂಧು-ಬಳಗ, ಹಿತೈಷಿಗಳನ್ನಗಲಿದ ಒಬ್ಬ ಮಾದರಿ ರಾಜಕಾರಣಿ ಮುಂಬರುವ ಪೀಳಿಗೆಗೆ ಆದರ್ಶಪ್ರಾಯ ಜೀವನ ಸಂದೇಶವನ್ನು ಕೊಟ್ಟು ಹೋಗಿದ್ದಾರೆ.

## ನೆನಪು ಚಿರಸ್ಥಾಯಿ

ಡಾ॥ ಕೆ. ನಾಗಪ್ಪ ಆಳ್ವರವರು ಒಬ್ಬ ಶ್ರೇಷ್ಠ ಅಧ್ಯಯನಶೀಲ ಶಾಸಕರಾಗಿ, ಸಮರ್ಥ ಸಚಿವರಾಗಿ, ಮೇಧಾವಿ ರಾಜ್ಯಸಭಾ ಸದಸ್ಯರಾಗಿ, ತನ್ನ ವ್ಯಾಪ್ತಿಯಲ್ಲಿ ಕರ್ತವ್ಯಚ್ಯುತಿಯಾಗದಂತೆ ಕಾರ್ಯ ನಿರ್ವಹಿಸಿದರು. ಸದಾ ಕಾಲವು ನಮ್ಮೆಲ್ಲರ ನೆನಪಿನಲ್ಲಿ ಅವರ ರಾಜಕೀಯ ಜೀವನದ ಹಿರಿಮೆಗರಿಮೆಗಳಿಗಾಗಿ ಉಳಿದುಕೊಂಡಿದ್ದಾರೆ. ಸರಳ-ಸಜ್ಜನಿಕೆ, ಪರರಿಗೆ ಕೇಡು ಬಗೆಯಾದ, ಬಯಸದ, ಅವರ ಸದ್ಗುಣ, ಸದಾ ಮಂದಸ್ಮಿತರಾಗಿ ಎಲ್ಲರೊಂದಿಗೆ ಬೆರತು ಬಾಳುವ ನಡೆ ನುಡಿಗಳಿಂದಾಗಿ ಆಳ್ವರು ಬಹು ಜನರ ಪ್ರೀತಿ ಪಾತ್ರರಾಗಿದ್ದರು. ದೇಶಾಭಿಮಾನ ತತ್ವನಿಷ್ಠೆ ಮತ್ತು ಮಾನವೀಯ ಗುಣ ಮೌಲ್ಯಗಳನ್ನು ಅವರು ಸದಾಕಾಲವು ಅನುಸರಿಸಿಕೊಂಡು ಬಂದಿದ್ದರು. ರಾಜ್ಯದ ಅಭಿವೃದ್ಧಿಗೆ, ವಿಶೇಷತಃ ಆರೋಗ್ಯ ಕ್ಷೇತ್ರವಲ್ಲಿ ಅವರು ಮಾಡಿದ ಸಾಧನೆ ಸದಾಕಾಲ ಸ್ಮರಿಸುವಂಥದ್ದು.

ಡಾ॥ ಕೊಡ್ಮಾಣ್ ನಾಗಪ್ಪ ಆಳ್ವರವರು ಸಮಾಜದಲ್ಲಿನ ಸರ್ವರೂ ಪ್ರೀತಿ, ವಾತ್ಸಲ್ಯ, ಅಭಿಮಾನ, ಆದರದಿಂದ ಕಾಣುತ್ತಿದ್ದ ವ್ಯಕ್ತಿಯಾಗಿದ್ದರು. ಗಾಂಧಿಯುಗ ಮೌಲ್ಯದ ಮೇರುವ್ಯಕ್ತಿಯಾಗಿ, ಜನನಾಯಕರಾಗಿ, ರಾಷ್ಟ್ರೀಯ ನೇತಾರರಾಗಿ ಚರಿತ್ರೆಯಲ್ಲಿ ದಾಖಲಾಗಿ ಜನಮನದಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ.

"ಪ್ರತಿಯೊಬ್ಬರು ತಮ್ಮ ತಮ್ಮ ಕೆಲಸವನ್ನು ಸರಿಯಾಗಿ ಮಾಡಿದರೆ
ನಮ್ಮ ಹೆಚ್ಚಿನ ಸಮಸ್ಯೆಗಳು
ತನ್ನಿಂದ ತಾನೆ ಮಾಯವಾಗುತ್ತವೆ."

**– ಮಹಾತ್ಮ ಗಾಂಧೀಜಿ**

ಒಳಿತು ಮಾಡಿದರೆ ಅದು ಪುಣ್ಯಗಳ ರಾಶಿ
ಕೆಡುಕು ಮಾಡಿದರೆ ಅದು ಪಾಪ ಬಿಕನಾಸಿ
ಯಾವ ದೇವರ ಪೂಜೆ ಮಾಡಿದರೂ ವ್ಯರ್ಥ
ಜನಸೇವೆಯೇ ಪೂಜೆ, ಇದುವೆ ಪುರುಷಾರ್ಥ

* ಕವಿ ದಿನಕರ ದೇಸಾಯಿ

# ರಾಜ್ಯಪಾಲರ ಭಾಷಣದ ಮೇಲಿನ ವಂದನಾ ನಿರ್ಣಯ

15ನೇ ಜೂನ್ 1957

## ಚೊಚ್ಚಲ ಭಾಷಣದಲ್ಲಿ ಹೊರಹೊಮ್ಮಿದ ಜನಪರ ಕಾಳಜಿ

**ಡಾ॥ ಕೆ.ನಾಗಪ್ಪ ಆಳ್ವ [ಪಾಣೆ–ಮಂಗಳೂರು]:–** ಮಾನ್ಯ ಅಧ್ಯಕ್ಷರೇ, ರಾಜ್ಯಪಾಲರ ಭಾಷಣದ ಮೇಲೆ ಅನೇಕ ಭಾಷಣಗಳಾದುವು. ಆ ಭಾಷಣದಲ್ಲಿ ಅನೇಕ ಮಹತ್ವದ ವಿಚಾರಗಳು ಪ್ರಸ್ತಾಪ ಮಾಡಲ್ಪಟ್ಟಿವೆ. ಅವರ ಮೇಲೆ ಚರ್ಚೆ ಮಾಡಿ, ವಿಚಾರ ವಿನಿಮಯ ಮಾಡಿ ರಚನಾತ್ಮಕ ಸಲಹೆಗಳನ್ನು ಕೊಡುವಂಥ ಒಂದು ಅವಕಾಶ ನಮಗೆ ದೊರೆತಿದೆ. ಅದಕ್ಕಾಗಿ ರಾಜ್ಯಪಾಲರನ್ನು ವಂದಿಸುವುದು ನಮ್ಮ ಕರ್ತವ್ಯ. ರಾಜ್ಯಪಾಲರ ಭಾಷಣದಲ್ಲಿ ಅನೇಕ ವಿಷಯಗಳೇನಿವೆ. ಅವುಗಳನ್ನೆಲ್ಲ ಈಗ ಇಲ್ಲಿ ಪ್ರಸ್ತಾಪ ಮಾಡಲು ಸಾಧ್ಯವಿಲ್ಲ. ಆದುದರಿಂದ ಕೆಲವು ಸಲಹೆಗಳನ್ನು ಮಾತ್ರ ನಾನು ಹೇಳಬಯಸುತ್ತೇನೆ.

### ಆಹಾರ ವಿತರಣೆಗಾಗಿ ಸಕಾಲಿಕ ಕ್ರಮ

ಆಹಾರ ಸಮಸ್ಯೆಯ ವಿಚಾರದಲ್ಲಿ ಅನೇಕ ಫೇರ್‌ಪ್ರೈಸ್ ಶಾಪ್ಸ್ ಮತ್ತು ಸರಬರಾಜು ಮಳಿಗೆಗಳನ್ನು ಪ್ರಾರಂಭಿಸಿದ್ದಾರೆ. ಅಲ್ಲದೆ, ಹುಬ್ಬಳ್ಳಿ ಮತ್ತು ಮಂಗಳೂರುಗಳಲ್ಲಿ ಅಂಥ ಮಳಿಗೆಗಳನ್ನು ಪ್ರಾರಂಭಿಸುತ್ತೇವೆಂದು ವಾಗ್ದಾನಮಾಡಿದ್ದಾರೆ. ಆದರೆ ತಮ್ಮಲ್ಲಿ ನಾನು ಒತ್ತಿ ಕೇಳಿಕೊಳ್ಳುವುದೇನೆಂದರೆ ಹುಬ್ಬಳ್ಳಿಯಲ್ಲಿ ಮುಖ್ಯವಾಗಿ ಮಂಗಳೂರಿನಲ್ಲಿ ಸರಬರಾಜು ಆಗುವುದು ಅಗತ್ಯವಿದೆ. ಬರುವ ಮೂರು ತಿಂಗಳು, ಕಠಿಣ ಮಳೆಗಾಲ, ನಮಗೆ ಕಲ್ಲಿಕೋಟೆ ರೈಲ್ವೆ ಮಾರ್ಗದಲ್ಲಿ ಆಹಾರ ಬರುವುದಿದೆ. ಆದ್ದರಿಂದ ಕಡ್ಡಾಯವಾಗಿ ಈ ವಿಷಯದಲ್ಲಿ ಜಾಗ್ರತೆ ಕಾರ್ಯಕ್ರಮ ಕೈಗೊಳ್ಳಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

### ನೌಕರರ ಸಂಬಳದಲ್ಲಿ ಏಕತೆ ಇರಲಿ

ಸರಕಾರಿ ನೌಕರರ ಸಂಬಳ ಏಕರೂಪದಲ್ಲಿರಬೇಕೆಂಬುದು ತುಂಬಾ ಸಂತೋಷದ ವಿಚಾರ. ಆದರೆ ನಮ್ಮ ಜಿಲ್ಲೆಯ ವಿಷಯವಾಗಿ ನಾನು ಹೇಳುವುದಾದರೆ ಅಲ್ಲಿ ಉಪಾಧ್ಯಾಯರಿಗೆ ಇತರ ಕಡೆಗಳಲ್ಲಿರುವಷ್ಟು ಅನುಕೂಲವಿಲ್ಲ. ಅದರಿಂದ ಅವರಲ್ಲಿ ಅಶಾಂತಿ ಮೂಡಿದೆ. ನಮ್ಮಲ್ಲಿ ನೂರರಲ್ಲಿ ತೊಂಬತ್ತು ಶಾಲೆಗಳು ಲೋಕಲ್‌ಬೋರ್ಡ್‌ಗೆ ಸೇರಿದವು ಅಥವಾ ಏಡೆಡ್ ಶಾಲೆಗಳಾಗಿವೆ. ಸರ್ಕಾರಿ

ನೌಕರರಿಗೆ ದೊರೆತಿರುವ ಗ್ರೇಡುಗಳು ನಮ್ಮ ಕಡೆಯ ಏಡೆಡ್ ಶಾಲೆ ಮತ್ತು ಲೋಕಲ್‌ಬೋರ್ಡ್ ಶಾಲೆ ಉಪಾಧ್ಯಾಯರಿಗೆ ಸಿಗುವುದಿಲ್ಲವೆಂಬ ಸಂಶಯವಿದೆ. ಆದ್ದರಿಂದ ನಮ್ಮ ಜಿಲ್ಲೆಯ ಉಪಾಧ್ಯಾಯರುಗಳಲ್ಲೂ, ಜನತೆಯಲ್ಲೂ, ತುಂಬ ಅಸಮಾಧಾನವುಂಟಾಗುವ ಪರಿಸ್ಥಿತಿ ಇರುವುದು. ಈ ವಿಷಯದಲ್ಲಿ ಸರಕಾರದವರು ಗಮನ ತೆಗೆದುಕೊಂಡು ಅವರಿಗೆ ನ್ಯಾಯ ದೊರಕುವಂತೆ ಮಾಡಬೇಕಾಗಿ ನಾನು ಕೇಳಿಕೊಳ್ಳುತ್ತೇನೆ

**ಆಯುರ್ವೇದ ಶಿಕ್ಷಣದ ಗುಣಮಟ್ಟ ಹೆಚ್ಚಿಸಿ, ಮದ್ರಾಸ್ ಪ್ರಾಂತದಲ್ಲಿ ರಾಜ್ಯದ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಮುಂದುವರಿಸುವುದು**

ಆಯುರ್ವೇದ ಕಾಲೇಜಿಗೆ ಅನುಕೂಲವಾಗುವಂತೆ ಆಯುರ್ವೇದ ಆಸ್ಪತ್ರೆಯಲ್ಲಿನ ಹಾಸಿಗೆಗಳ ಸಂಖ್ಯೆಯನ್ನು 36ರಿಂದ 100ಕ್ಕೆ ಏರಿಸುವ ಆಲೋಚನೆಯಿದೆಯೆಂದು ಹೇಳಿದ್ದಾರೆ. ಇಲ್ಲಿನ ವಿದ್ಯಾಮಟ್ಟ ಅಷ್ಟೇನೂ ಹೆಚ್ಚಿಲ್ಲ. ವಿದ್ಯಾಮಟ್ಟವೂ ಹೆಚ್ಚುವುದರ ಕಡೆಗೆ ಹೆಚ್ಚಿನ ಗಮನ ಕೊಡಬೇಕೆಂದು ಹೇಳುತ್ತೇನೆ.

ಮತ್ತೊಂದು ವಿಚಾರ. ನಮ್ಮ ದಕ್ಷಿಣ ಕನ್ನಡ ಜಿಲ್ಲೆ ಅನೇಕ ವರ್ಷಗಳಿಂದ ಮದ್ರಾಸ್ ಪ್ರಾಂತ್ಯದಲ್ಲಿ ಸೇರಿದ್ದಾಗಿದ್ದು ಅಲ್ಲಿನ ಮೆಡಿಕಲ್ ಮತ್ತು ಇಂಜಿನಿಯರಿಂಗ್ ಕಾಲೇಜುಗಳಲ್ಲಿ ವಿದ್ಯಾಭ್ಯಾಸಂಗ ನಡೆಸಲು ನಮ್ಮ ವಿದ್ಯಾರ್ಥಿಗಳಿಗೆ ಎಂದಿನಂತೆ ಇನ್ನೂ ಕೆಲವು ವರ್ಷಗಳಮಟ್ಟಿಗಾದರೂ ಸ್ಥಳಾವಕಾಶ ಸಿಕ್ಕುವಂತೆ ಮಾಡಬೇಕೆಂದು ನಾನು ಒತ್ತಾಯಪೂರ್ವಕವಾಗಿ ಹೇಳುತ್ತೇನೆ.

**ಮಂಗಳೂರು ಕರಾವಳಿಯಲ್ಲಿ ಇನ್ನಷ್ಟು ಬಂದರುಗಳು**

ನಮ್ಮ ಮಂಗಳೂರು ಬಂದರನ್ನು ಒಳ್ಳೆಯ ಬಂದರಾಗಿ ಮಾರ್ಪಡಿಸಿ ಅದರ ಕೆಲಸ ಶೀಘ್ರವಾಗಿ ನಡೆಯುವಂತೆ ಮಾಡಬೇಕು. ನಮ್ಮ ಕಡೆ ಮೀನು ಕೈಗಾರಿಕೆ ಒಂದು ಮುಖ್ಯವಾದ ಕೈಗಾರಿಕೆ. ಈ ವಿಚಾರದಲ್ಲಿ ನಮ್ಮ ಸರ್ಕಾರದವರು ಹೆಚ್ಚಿನ ಕೆಲಸವನ್ನು ಕೈಗೊಳ್ಳುವ ಆಕಾಂಕ್ಷೆಯುಳ್ಳವರಾಗಿದ್ದಾರೆಂದು ಗೊತ್ತಾಗಿದೆ. ಮಲ್ಪೆಯಲ್ಲಿ ಒಂದು ಬಂದರನ್ನು ಮಾಡುವುದನ್ನು ಆಲೋಚಿಸಿರುವಂತೆ, ಈ ಕರಾವಳಿ ಪ್ರಾಂತ್ಯದಲ್ಲಿ ಇನ್ನೂ ಒಂದೆರಡು ಬಂದರುಗಳನ್ನು ಏರ್ಪಡಿಸುವ ವ್ಯವಸ್ಥೆ ಮಾಡಿದರೆ ಮೀನು ಕೈಗಾರಿಕೆಗೆ ಹೆಚ್ಚಿನ ಅನುಕೂಲವಾಗುತ್ತದೆಂದು ನಾನು ಹೇಳಬಯಸುತ್ತೇನೆ.

ಇಂಟರ್ ಸ್ಟೇಟ್ ಸೀನಿಯಾರಿಟಿ ಪಟ್ಟಿಯನ್ನು ತಯಾರಿಸುವುದರಲ್ಲಿ ಯಾರಿಗೂ ಅನ್ಯಾಯವಾಗದಂತೆ ಮಾಡಬೇಕೆಂದು ಹೇಳುತ್ತೇನೆ.

## ಮಂಗಳೂರು-ಹಾಸನ ರೈಲು ಮಾರ್ಗ

ಇನ್ನು ರಸ್ತೆ ಸಾರಿಗೆಗಳ ವಿಚಾರದಲ್ಲಿ ಒಂದು ಮಾತು. ರಸ್ತೆ ಮತ್ತು ಇತರ ಸಂಚಾರ ಸೌಕರ್ಯಗಳು ದೇಶದ ಅಭ್ಯುದಯದ ದೃಷ್ಟಿಯಿಂದ ಅತ್ಯಂತ ಮುಖ್ಯವಾದುವುಗಳೆಂಬುದನ್ನು ಹೇಳಬೇಕಾದ್ದಿಲ್ಲ. ಹೀಗಿರುವಾಗ ಈ ಭಾಷಣದಲ್ಲಿ ನಮ್ಮ ಭಾಗಕ್ಕೆ ಬಹಳ ಮಹತ್ವದ್ದಾಗಿರುವ ಹಾಸನ - ಮಂಗಳೂರು ರೈಲ್ವೆಯ ವಿಚಾರವನ್ನೇ ಪ್ರಸ್ತಾಪ ಮಾಡದಿರುವುದು ವಿಷಾದಕರ. ಮಲೆನಾಡಿನ ಅಭಿವೃದ್ಧಿಯ ದೃಷ್ಟಿಯಿಂದಲೇ ಅಲ್ಲದೆ ಇಡಿಯ ಕರ್ನಾಟಕ ಸರ್ವತೋಮುಖವಾದ ಬೆಳವಣಿಗೆಯಾಗಬೇಕಾದರೆ ಮಂಗಳೂರು - ಹಾಸನ ರೈಲ್ವೆಯ ಏರ್ಪಾಡು ಜೀವನಾಡಿಯಂತಿದೆ. ನಮ್ಮ ಎರಡನೆಯ ಪಂಚವಾರ್ಷಿಕ ಯೋಜನೆಯು ಹೇಗೂ ಇಲಾಸ್ಟಿಕ್ ಪ್ಲಾನ್ ಆಗಿರುವುದರಿಂದ ಕೇಂದ್ರ ಸರ್ಕಾರದವರ ಮೇಲೆ ನಮ್ಮ ಸರಕಾರದವರು ಆದಷ್ಟು ಪ್ರಭಾವ ಬೀರಿ ಎರಡನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದೊಳಗಾದರೂ ಈ ರೈಲ್ವೆಯನ್ನು ಮಾಡಿಕೊಡಬೇಕೆಂದು ಹೇಳುತ್ತೇನೆ.

### ಭೂಸುಧಾರಣಾ ಮಸೂದೆಗೆ ಒತ್ತಾಯ

ಭೂ-ಸುಧಾರಣೆಯ ವಿಚಾರದಲ್ಲಿ ನಾನು ಹೆಚ್ಚಿಗೆ ಹೇಳಲು ಇಷ್ಟಪಡುವುದಿಲ್ಲ. ಆದಷ್ಟು ಜಾಗ್ರತೆ ಕಾನೂನು ರೂಪದಲ್ಲಿ ಸರ್ವಸಾಮಾನ್ಯವಾದ ಒಂದು ಕಾನೂನನ್ನು ತರುವುದು ಅಗತ್ಯವಾಗಿದೆ. ಇದರಲ್ಲಿ ಒಂದು ವಿಷಯವನ್ನು ತಾವು ಮುಖ್ಯವಾಗಿ ಗಮನದಲ್ಲಿಡಬೇಕು. ತಾವು ಯಾವುದೇ ಭೂ-ಸುಧಾರಣಾ ಮಸೂದೆಯನ್ನು ತಂದರೂ ರೈತರ ಜೀವನದ ಮಟ್ಟವನ್ನು ಏರಿಸಲು ಅದು ಸಾಧಕವಾಗದಿದ್ದರೆ ಏನೂ ಪ್ರಯೋಜನವಾಗುವುದಿಲ್ಲ. ಸಹಕಾರ ಸಂಘಗಳ ಸಹಾಯ ಹೆಚ್ಚು ಹೆಚ್ಚಾಗಿ ಲಭಿಸುವಂತೆ ಮಾಡಬೇಕು. ಜೊತೆಗೆ ಪ್ರತಿಯೊಬ್ಬ ರೈತರಿಗೂ ಯಾವುದಾದರೊಂದು ಗುಡಿ ಕೈಗಾರಿಕೆ ಬರುವಂತೆ ಮಾಡಬೇಕೆಂದು ಹೇಳಿ, ನನಗೆ ಈ ಎರಡು ಮಾತುಗಳನ್ನಾಡುವುದಕ್ಕೆ ಅವಕಾಶ ಕೊಟ್ಟಿದ್ದಕ್ಕಾಗಿ ಅಧ್ಯಕ್ಷರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

# ಆಯವ್ಯಯ ಇಲಾಖಾ ಬೇಡಿಕೆಗಳ ಮೇಲಿನ ಚರ್ಚೆ

4ನೇ ಏಪ್ರಿಲ್ 1958

## ಪಾನ ನಿರೋಧ ಮತ್ತು ಪೋಲೀಸ್ ಇಲಾಖೆ

**ಡಾ|| ಕೆ. ನಾಗಪ್ಪ ಆಳ್ವ (ಪಾಣೆ–ಮಂಗಳೂರು) :** ಅಧ್ಯಕ್ಷರೇ, ಪೋಲೀಸು–ಡಿಮ್ಯಾಂಡನ್ನು ಸಮರ್ಥಿಸುತ್ತಾ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಪೋಲೀಸ್ ಡಿಮ್ಯಾಂಡಿನ ಮೇಲೆ ಟೀಕೆಗಳ ಸುರಿಮಳೆಯಾಗಿದೆ. ಪೋಲೀಸ್ ಅಂಡರ್ ಫೈರ್ ಎಂಬ ಮಾತು ಎಲ್ಲೆಲ್ಲೂ ಕೇಳಿಬಂದಿದೆ. ನಿಜವಾಗಿಯೂ ನಾವು ಇಂದಿನ ಪರಿಸ್ಥಿತಿಯಲ್ಲಿ ಪೋಲೀಸು ಇಲಾಖೆ ಯಾವ ರೀತಿಯಲ್ಲಿ ಕೆಲಸ ಮಾಡುತ್ತಾ ಇದೆ, ಇಂದಿನ ವಾತಾವರಣ ಹೇಗಿದೆ ಎಂಬುದನ್ನು ಸ್ವಲ್ಪ ಪರಿಶೀಲಿಸಿ ತಿಳಿದುಕೊಳ್ಳುವುದು ತುಂಬಾ ಅಗತ್ಯವಾಗಿದೆ. ನಮಗೆ ಸ್ವರಾಜ್ಯ ಸಿಗುವುದಕ್ಕೆ ಮುಂಚೆ ಪೋಲೀಸಿನವರು ಬ್ರಿಟಿಷರ ಏಜೆಂಟ್‌ರಾಗಿದ್ದವರು, ಜನರ ಪ್ರೀತಿ ವಿಶ್ವಾಸವನ್ನು ಪಡೆಯಲು ಅವರಿಗೆ ಅನುಕೂಲವಿದ್ದಿಲ್ಲ. ಆ ರೀತಿಯಲ್ಲಿ ಅವರು ನಡೆಯಬೇಕಾಗಿತ್ತು. ಸ್ವರಾಜ್ಯ ಸಿಕ್ಕಿದ ನಂತರ ನಿಜವಾಗಿ ಪೋಲೀಸು ಇಲಾಖೆಯವರು ದಿನದಿಂದ ದಿನಕ್ಕೆ ಜನರ ಪ್ರೀತಿ ವಿಶ್ವಾಸವನ್ನು ಪಡೆದದ್ದು ಮಾತ್ರವಲ್ಲ. ಅವರ ಅಭಿಮಾನವನ್ನು ಕೂಡ ಹೆಚ್ಚಿಸಿಕೊಂಡರು. ಕಳೆದ 7 ವರ್ಷಗಳಿಂದ ಪಾನನಿರೋಧ ಕಾನೂನನ್ನು ಜಾರಿ ಮಾಡುವ ಅಧಿಕಾರ ಪೋಲೀಸರಿಗೆ ಬಂದ ಮೇಲೆ ಜನರ ಅಭಿಮಾನ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಾ ಬರುತ್ತಿದೆಯೆಂದು ನಿಜವಾಗಿ ಹೇಳಬಲ್ಲೆ. Prohibition is a failure. ಅಷ್ಟು ಮಾತ್ರವಲ್ಲ. The common man's respect for law has completely gone. ಇವತ್ತು ಈ ಮಟ್ಟಕ್ಕೆ ಬಂದಿದೆ. ತಾನು ಮಾಡಿದ ತಪ್ಪನ್ನು ಮನುಷ್ಯನು ಒಪ್ಪಿಕೊಳ್ಳತಕ್ಕಂಥಾದ್ದು ಅವನ ಧರ್ಮ. ಹಾಗೆಯೇ ಸರ್ಕಾರ ಕೂಡ ತಪ್ಪನ್ನು ಒಪ್ಪಿಕೊಳ್ಳತಕ್ಕಂಥದ್ದು ಧರ್ಮ.

**ಅಧ್ಯಕ್ಷರು :** ಪ್ರೋಹಿಬಿಷನ್– ಇದು 29 ಪೋಲೀಸ್‌ನಲ್ಲಿ ಬರುವುದಿಲ್ಲ; ಎಕ್ಸೈಜ್‌ನಲ್ಲಿ ಬರುತ್ತದೆ. 8–State Excise Duty ಯ Demandನಲ್ಲಿ ಚರ್ಚೆಗೆ ಬರುತ್ತದೆ. ಆಗ್ಗೆ ಈ ವಿಷಯ ಚರ್ಚಿಸಬಹುದು.

## ಪೋಲೀಸ್ ಇಲಾಖೆಗೆ ದಕ್ಷತೆ

**ಡಾ|| ಕೆ. ನಾಗಪ್ಪ ಆಳ್ವ :** ಪಾನ ನಿರೋಧ ವಿಷಯ ಪೋಲೀಸ್ ಇಲಾಖೆಗೆ ವಹಿಸಲ್ಪಟ್ಟ ಮೇಲೆ ಪೋಲೀಸ್ ಬಗ್ಗೆ ಜನರ ಅಭಿಮಾನ ಕಡಿಮೆಯಾಗಿರುವುದು

ಮಾತ್ರವಲ್ಲದೇ ಕಾನೂನಿನ ಬಗ್ಗೆ ಜನರ ಗೌರವವು ಹೋಗಿದೆ ಎನ್ನುವ ಮಟ್ಟಕ್ಕೆ ಬಂದಿದೆ ಎಂದು ನಾನು ಹೇಳಬಯಸುತ್ತೇನೆ. ಆದುದರಿಂದ ಸರ್ಕಾರ ವಾಸ್ತವಾಂಶವನ್ನು ಒಪ್ಪಿಕೊಳ್ಳಬೇಕು. ಈ ವಿಷಯದ ಬಗ್ಗೆ ಇನ್ನೂ ಹೆಚ್ಚಿಗೆ ಇನ್ನೊಮ್ಮೆ ಸಂದರ್ಭ ಸಿಕ್ಕಾಗ ಸೂಚನೆಗಳನ್ನು ಕೊಡುತ್ತೇನೆ. ಮುಖ್ಯವಾಗಿ ಹೇಳುವುದೇನೆಂದರೆ, ಪೋಲೀಸಿನವರಲ್ಲಿ ಶಕ್ತಿ ಇದ್ದಿದ್ದರೆ ಇವತ್ತಿನ ದಿವಸ ಪೋಲೀಸಿನವರ ಮೇಲೆ ಈ ರೀತಿ ಟೀಕೆ ಬರಲು ಕಾರಣವಿರುತ್ತಿರಲಿಲ್ಲ. ಪೋಲೀಸಿನವರಿಂದ ಬಹಳ ಕೆಲಸವೇನೋ ಆಗುತ್ತಾ ಇದೆ. ಯಾವ ರೀತಿಯಲ್ಲಿ ನೋಡಿದರೂ ಕೂಡ ಇದರಲ್ಲಿ ಮುಖ್ಯವಾಗಿ ಒಂದು ಕಷ್ಟ ಪೋಲೀಸ್ ಡಿಪಾರ್ಟ್‌ಮೆಂಟಿನಲ್ಲಿದೆ. ನಮ್ಮ ಹಳ್ಳಿಗಳಲ್ಲಿ ಪಂಗಡ ಪಂಗಡಗಳಲ್ಲಿಯ ಮನಃಕ್ಲೇಶ ಇದಕ್ಕೆ ಕಾರಣವಾಗಿದೆ. ಪೋಲೀಸಿನವರಿಗೆ ಸಹಕಾರ ಸಲ್ಲಿಸತಕ್ಕಂಥಾದ್ದು ನಮ್ಮ ಪ್ರಥಮ ಕರ್ತವ್ಯವಾಗಿದೆ. ಪೋಲೀಸ್ ಡಿಪಾರ್ಟ್‌ಮೆಂಟಿನಲ್ಲಿ ನಿಜವಾಗಿಯೂ ದಕ್ಷರಾದವರು ಇಲ್ಲ, ಕೆಲಸವನ್ನು ಸರಿಯಾಗಿ ಮಾಡುವುದಿಲ್ಲ, ಅವರಲ್ಲಿ ಯೋಗ್ಯತೆಯು ಇಲ್ಲ ಎಂದು ಮುಖ್ಯವಾಗಿ ಅನೇಕರು ಟೀಕೆ ಮಾಡುತ್ತಾ ಹೇಳಿದ್ದಾರೆ. ಆ ರೀತಿ ಒಂದು ವೇಳೆ ಇದ್ದರೆ, ಅಂಥವರನ್ನು ಬೇರೆ ಇಲಾಖೆಯಲ್ಲಿ ಕೆಲಸ ಮಾಡಬಲ್ಲವರಾಗಿದ್ದರೆ ಅಲ್ಲಿಗೆ ಕಳುಹಿಸಬೇಕು, ಇಲ್ಲವಾದರೆ ಏನಾದರು ಪರಿಹಾರ ಕೊಟ್ಟು ನಿವೃತ್ತಿಗೊಳಿಸಬೇಕು. ಈ ರೀತಿ ಮಾಡಿ ಪೋಲೀಸ್ ಡಿಪಾರ್ಟ್‌ಮೆಂಟಿನ ಮರ್ಯಾದೆಯನ್ನು ಕಾಪಾಡಿಕೊಳ್ಳಬೇಕು.

## ಕನಿಷ್ಟ ವಿದ್ಯಾರ್ಹತೆ ಮತ್ತು ಸೌಲಭ್ಯಗಳು ಪೋಲೀಸ್ ಸಿಬ್ಬಂದಿಗೆ ಬೇಕು.

ಇನ್ನು ಪೋಲೀಸ್ ಡಿಪಾರ್ಟ್‌ಮೆಂಟನ್ನು ಸಂಘಟಿಸಲು ಒಂದು ಮುಖ್ಯ ಸೂಚನೆ ರೆಕ್ರೂಟ್‌ಮೆಂಟ್ ವಿಷಯ. ಅವರಿಗೆ ನಿಜವಾಗಿಯೂ S.S.L.C Educational Qualification ಇರಬೇಕು. ಹಾಗೂ ಅವರಿಗೆ ಇನ್ನೂ ಜಾಸ್ತಿ ಸಂಬಳ ಇರಬೇಕು. ಕ್ಲರ್ಕ್ ಆದವನಿಗೆ ಕೊಡುವ ಹಾಗೆ ಒಬ್ಬ ಕಾನ್‌ಸ್ಟೇಬಲ್‌ನಿಗೆ ಒಂದು ತಿಂಗಳಿಗೆ ಒಂದು ನೂರು ರೂಪಾಯಿ ಸಂಬಳ ಇರಲೇಬೇಕು. ಅವನು ತನ್ನ ಜೀವನವನ್ನು ತನ್ನ ಅನುಕೂಲತೆಗಳೊಂದಿಗೆ ಸ್ವಾಭಿಮಾನದಿಂದ ನಡೆಸುವ ಹಾಗೆ ಸರ್ಕಾರ ಅವನಿಗೆ ಸಂಬಳ ಮತ್ತು ಸೌಲಭ್ಯಗಳನ್ನು ಒದಗಿಸಿಕೊಡಬೇಕು. ಮನೆಯ ಅನುಕೂಲ ಎಂದರೆ ವಸತಿ ಸೌಕರ್ಯ, ವೈದ್ಯಕೀಯ ಸೌಲಭ್ಯ ಒದಗಿಸಿಕೊಡಬೇಕು. ಈಗಿರುವ ಸೌಲಭ್ಯಗಳು ಎಷ್ಟು ಮಾತ್ರಕ್ಕೂ ಸರಿಯಾಗಿಲ್ಲ. ನಮ್ಮ ಜಿಲ್ಲೆಯು ಮದ್ರಾಸ ರಾಜ್ಯದಲ್ಲಿದ್ದಾಗ ಮದ್ರಾಸ ಸರ್ಕಾರವನ್ನು 10-15 ವರ್ಷಗಳಿಂದಲೂ ನಾವು ಕೇಳುತ್ತಿದ್ದರೂ ಏನೂ ಮಾಡಲಿಲ್ಲ. ವಸತಿ ಸೌಕರ್ಯ ಸರಿಯಾಗಿಲ್ಲ. ಅವರಿಗೆ ಇರುವ ಕಷ್ಟವೇನು, ರೋಗ ಉಂಟಾಗಲು ಕಾರಣವೇನು ಎಂಬುದನ್ನು

ತಿಳಿದುಕೊಳ್ಳಬೇಕು. ಪ್ರತಿಯೊಂದು ಜಿಲ್ಲೆಯಲ್ಲಿನ ತಾಲ್ಲೂಕು ಕೇಂದ್ರದಲ್ಲಿ ಪೋಲೀಸರಿಗೆ ವೈದ್ಯಕೀಯ ಅನುಕೂಲ ಸಿಗುವಂತೆ ಒಂದು ಸರಿಯಾದ ಏರ್ಪಾಡು ಮಾಡಬೇಕು ಎಂದು ಒಂದು ಸೂಚನೆಯನ್ನು ಮಾಡುತ್ತೇನೆ. ಆಸ್ಪತ್ರೆಗೆ ಹೋಗಿ indoor patient ಆಗಿ ವೈದ್ಯಕೀಯ ಸಲಹೆ ಪಡೆಯುವುದಷ್ಟೇ ಅಲ್ಲ, ಖಾಯಿಲೆ ಬಿದ್ದರೆ ಅವರವರ ಮನೆಯಲ್ಲೇ ಬೇಕಾದ ವೈದ್ಯಕೀಯ ಸಹಾಯ ದೊರೆಯುವ ವ್ಯವಸ್ಥೆಯಾಗಬೇಕು. ಪೋಲೀಸಿನವರ ಹೆಂಡತಿ ಮಕ್ಕಳು ಖಾಯಿಲೆ ಬಿದ್ದ ಸಂದರ್ಭದಲ್ಲಿ ಈಗ ಇರುವ ಹಾಗೆ ಆಸ್ಪತ್ರೆಗೆ ಹೋಗಿ ಡಾಕ್ಟರ ಕಡೆಯಿಂದ ಪರೀಕ್ಷೆ ಮಾಡಿಸಬೇಕಾದರೆ, ಹಾಗೂ ಔಷಧಿ ಪಡೆಯಲು ಬಹಳ ಕಷ್ಟವಾಗುತ್ತದೆ. ಯಾರಿಗೂ ಹೋಗಿ ಔಷಧಿ ತರುವುದು ಶಕ್ಯವಾಗುವುದಿಲ್ಲ. ಔಷಧಿ ತಂದು ಖಾಯಿಲೆ ನಿವಾರಣೆಯಾಗುವ ಸಂಭವವಿಲ್ಲ. ಅವರು ಕಷ್ಟಕ್ಕೆ ಗುರಿಯಾಗುತ್ತಾರೆ. ಆದುದರಿಂದ ಡಾಕ್ಟರೊಬ್ಬರು ಜವಾಬ್ದಾರಿ ವಹಿಸಿಕೊಂಡು ಪ್ರತಿ ದಿವಸ ಒಂದೆರಡು ಗಂಟೆಗಳವರೆಗೆ ಪೋಲೀಸ್ ಲೈನಿಗೆ ಹೋಗಿ, ಖಾಯಿಲೆಯಾದವರನ್ನು ಪರೀಕ್ಷೆ ಮಾಡಿ, ಅವರ ಯೋಗಕ್ಷೇಮವನ್ನು ತಿಳಿದುಕೊಳ್ಳತಕ್ಕ ಅನುಕೂಲವನ್ನು ಒದಗಿಸುವ ಏರ್ಪಾಡು ಮಾಡುವುದು ಬಹಳ ಅಗತ್ಯವಾಗಿದೆ. ಅವರ ವಕ್ತತೆಗೆ ಕೊರತೆ ಬಾರದ ಹಾಗೆ ಮಾಡಬೇಕು. ಅವರಿಗೆ ವಾಸಮಾಡುವುದಕ್ಕೆ ಸ್ವಚ್ಛವಾದ ಮನೆಗಳನ್ನು ಏರ್ಪಾಡು ಮಾಡುವುದು ಅಗತ್ಯವಾಗಿದೆ.

## ಗುಪ್ತದಳವನ್ನು ಬಲಪಡಿಸಿ

ಇನ್ನು ಪೋಲೀಸ್ ಡಿಪಾರ್ಟ್‌ಮೆಂಟಿನಲ್ಲಿ ಮತ್ತೊಂದು C.I.D. ಡಿಪಾರ್ಟ್‌ಮೆಂಟ್ ಎಂದು ಇದೆ. ಈ ಡಿಪಾರ್ಟ್‌ಮೆಂಟನ್ನು ಒಂದು ಸ್ಪೆಷಲ್ ಡಿಪಾರ್ಟ್‌ಮೆಂಟೆಂದು ತಿಳಿದುಕೊಂಡು ಅವರಿಗೆ ಉತ್ತಮ ತರಹದ ಎಲ್ಲ ಅನುಕೂಲತೆಗಳನ್ನು ಒದಗಿಸಿಕೊಟ್ಟು ಅವರು ಕೆಲಸವನ್ನು ಸರಿಯಾದ ರೀತಿಯಲ್ಲಿ ಮಾಡುವಂತಾಗಬೇಕು. ಇವತ್ತಿನ ದಿವಸ ಪೋಲೀಸ್ ಆಡಳಿತದ ವಿಷಯದಲ್ಲಿ ಸಾಮಾನ್ಯವಾಗಿ ಎಷ್ಟೋ ತರಹದ ಟೀಕೆಗಳು ಬಂದಿವೆ. ನ್ಯಾಯವಾದ ರೀತಿಯಲ್ಲಿ C.I.D. ಯ ವಿಚಾರವಾಗಿ ತನಿಖೆಯಾಗಿಲ್ಲ. C.I.D. ಡಿಪಾರ್ಟ್‌ಮೆಂಟಿನಿಂದ ಹೆಚ್ಚಿನ ಮಟ್ಟದಲ್ಲಿ ಕೆಲಸವಾಗಿದ್ದರೆ, ಈ ರೀತಿ ಟೀಕೆಗೆ ಹೆಚ್ಚಿನ ಆಸ್ಪದ ಇರುತ್ತಿರಲಿಲ್ಲ. ಆಡಳಿತ ಮಟ್ಟ ಮೇಲಕ್ಕೆ ಏರಲು efficient ಆಗಿ ಇದ್ದವರು ಇದ್ದರೆ ಮುಂದೆ ಬರಲಿಕ್ಕೆ ಸೌಲಭ್ಯವಿದೆ. ಆದುದರಿಂದ C.I.D. ಡಿಪಾರ್ಟ್‌ಮೆಂಟು ಸರಿಯಾಗಿ ಕೆಲಸ ಮಾಡುವಂತೆ ಆಗಬೇಕು ಎಂದು ಸೂಚನೆ ಮಾತ್ರ ನಾನು ಕೊಡಲು ಬಯಸುತ್ತೇನೆ. ಈ ಮೂರು ಕೋಟಿ ರೂಪಾಯಿಯ ಬಡ್ಜೆಟ್ಟು ಅಷ್ಟೇನು ಹೆಚ್ಚಿನದು

ಎಂದು ನಾನು ತಿಳಿಯುವುದಿಲ್ಲ. ಇಂದು ಆಡಳಿತ ಸರಿಯಾಗಿ ನಡೆಯಬೇಕಾದರೆ, ಜನರು ಸುಖ ಶಾಂತಿಯಿಂದ ಬಾಳಬೇಕಾದರೆ, ದೇಶ ಭದ್ರತೆಯಿಂದ ಇರಬೇಕಾದರೆ, ಪೋಲೀಸ್ ಡಿಪಾರ್ಟ್‌ಮೆಂಟ್ ಸರಿಯಾಗಿ ಕೆಲಸ ಮಾಡುವಂಥಾದ್ದು ಆಗಿರಬೇಕಾದುದು ಬಹಳ ಅಗತ್ಯ. ಈ ಸಂದರ್ಭದಲ್ಲಿ ಒಂದು ಮಾತು ನಾನು ಹೇಳಬಯಸುತ್ತೇನೆ. ಬಡ್ಜೆಟ್ಟಿನ ಸಾಮಾನ್ಯ ಚರ್ಚೆಯ ಕಾಲದಲ್ಲಿ ಮಾಡಿದ ಟೀಕೆಗಳಿಗೆ, ನಮ್ಮ ಗೃಹ ಮಂತ್ರಿಗಳು ಬಹಳ ಗಂಭೀರವಾದ ರೀತಿಯಲ್ಲಿ ಉತ್ತರ ಕೊಟ್ಟರು. ಎಲ್ಲಿ ನೋಡಿದರೂ ಅದರಲ್ಲಿ ಧೈರ್ಯ ಬರಲಿಕ್ಕೆ ಬೇಕಾದಷ್ಟು ಕಾರಣವಾಯಿತು. ಏಕೆಂದರೆ ಈ ಡಿಪಾರ್ಟ್‌ಮೆಂಟು ತನ್ನ ಕೈಮೀರಿ ಕೆಲಸ ಮಾಡುತ್ತಿದೆ ಎಂಬ ಧೈರ್ಯವಿದೆ; ಆದರೆ ಅದಕ್ಕೆ ಜನರ ಸಹಕಾರ ಬೇಕು ಎಂದು ಸ್ಪಷ್ಟಪಡಿಸಿದ್ದಾರೆ. ಇದು ಬಹಳ ಸಂತೋಷ. ಅವರ ದಕ್ಷತೆಯನ್ನು ಮೆಚ್ಚಿಸಬೇಕು. ನಾನು ಎಲ್ಲಾ ರೀತಿಯಲ್ಲಿ ಅವರಿಗೆ ಸಹಕಾರ ಕೊಟ್ಟು ಈ ಮೂರು ಕೋಟಿ ರೂಪಾಯಿ ಬಡ್ಜೆಟ್ ಏಕೆ, ಇನ್ನೂ ಒಂದು ಕೋಟಿ ರೂಪಾಯಿ ಅಥವಾ ಅದಕ್ಕಿಂತಲೂ ಹೆಚ್ಚು ಈ ಡಿಪಾರ್ಟ್‌ಮೆಂಟಿಗೆ ನಾವು ಸಂತೋಷಚಿತ್ತರಾಗಿ ಒಪ್ಪಬೇಕು. ಇದರಿಂದ ನಮ್ಮ ದೇಶದ ಮೇಲ್ಮೆಯಾಗಲು ಕಾರಣವಾಗುತ್ತದೆ, ಎಂಬುದಾಗಿ ಹೇಳಿ ನನ್ನ ಮಾತುಗಳನ್ನು ಕೊನೆಗೊಳಿಸುತ್ತಿದ್ದೇನೆ.

## ಆಯವ್ಯಯ ಅಂದಾಜು –1958

**16ನೇ ಏಪ್ರಿಲ್ 1958**

## ಆರೋಗ್ಯ ಇಲಾಖೆಗೆ ಕಾಯಕಲ್ಪ ದೊರಕಲಿ

**ಡಾ. ಕೆ. ನಾಗಪ್ಪ ಆಳ್ವ (ಪಣೆಮಂಗಳೂರು):** ಸ್ವಾಮಿ ಮಾನ್ಯ ಸಭಾಧ್ಯಕ್ಷರೆ,

**ಮಾನ್ಯ ಸಭಾಧ್ಯಕ್ಷರು:** ಕಾಲಮಿತಿ ಹತ್ತು ನಿಮಿಷಗಳು ಮಾತ್ರ.

**ಡಾ: ಕೆ. ನಾಗಪ್ಪ ಆಳ್ವ:** ವೈದ್ಯ ಎಂ.ಎಲ್.ಎ., ಆಗಿ ನನಗೆ ಕನಿಷ್ಟ ಮೂವತ್ತು ನಿಮಿಷಗಳನ್ನಾದರೂ ಕೊಡಿ ಎಂದು ಸಭಾಧ್ಯಕ್ಷರನ್ನು ನಾನು ಕೋರಿಕೊಳ್ಳುತ್ತೇನೆ.

**ಮಾನ್ಯ ಸಭಾಧ್ಯಕ್ಷರು:** ಎಲ್ಲ ವಿಷಯಗಳನ್ನು ಪರಿಗಣಿಸಿದ ಮೇಲೆಯೇ ಕಾಲಮಿತಿಯನ್ನು ನಿಗದಿಪಡಿಸಿರುವುದು ನನಗೆ ಕಷ್ಟ ಆಗುತ್ತದೆ ಏಕೆಂದರೆ, ನಾನು ಎಲ್ಲರಿಗೂ ದಾಕ್ಷಿಣ್ಯಪರನಾಗಬೇಕಾಗುತ್ತದೆ.

ಲಕ್ಷ ರೂ.ಗಳು ಮತ್ತು ಕೇಂದ್ರದಿಂದ 7.5 ಲಕ್ಷ ರೂ.ಗಳು ಮಂಜೂರಾದ ಹಣವನ್ನು ಬಳಸಿಕೊಂಡೇ ಇಲ್ಲ.

ಆಸ್ಪತ್ರೆಗಳಲ್ಲಿ ಮಕ್ಕಳ ರೋಗಗಳಿಗೆ ಎಂದರೆ ಪೀಡಿಯಾಟ್ರಿಕ್ಸ್‌ಗೆ ಹೆಚ್ಚಿದ ಪ್ರಾಮುಖ್ಯತೆಯನ್ನು ನೀಡುತ್ತಿಲ್ಲ ಅದಕ್ಕೆ ಪ್ರಾಮುಖ್ಯತೆ ನೀಡಬೇಕು.

ಸಾಂಕ್ರಾಮಿಕ ರೋಗಗಳಿಗೆ ಸಂಬಂಧಿಸಿದಂತೆ – ಹೇಳುವುದಾದರೆ ಬೆಳಗಾವಿ ಜಿಲ್ಲೆಯ ಗೋಕಾಕದಲ್ಲಿ ಕಾಲರಾದ ಅಪಾಯಕರ ಉಪದ್ರವ ಕಂಡುಬಂದಿದೆ ಮತ್ತು ಅಂತಹ ಸಾಂಕ್ರಾಮಿಕ ರೋಗಗಳು ಬರದೇ ಇರುವ ಹಾಗೆ ನೋಡಿಕೊಳ್ಳಲು ಒಂದು ಸಂಘಟಿತ ಪ್ರಯತ್ನವನ್ನು ಮಾಡಬೇಕು.

## ಕ್ಷಯ ರೋಗ ನಿರ್ಮೂಲನೆಗಾಗಿ ಪ್ರಯತ್ನಿಸಿ

ಕ್ಷಯರೋಗಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ವಾಸ್ತವವಾಗಿ, ಕೇಂದ್ರ ಸರ್ಕಾರವು ಅತ್ಯಂತ ಹೆಚ್ಚಿನ ಪ್ರಮಾಣದವರೆಗೆ ನೆರವು ನೀಡಲು ಸಿದ್ಧವಿದೆ. ಆದರೆ ರಾಜ್ಯದ ವಿವಿಧ ಭಾಗಗಳಲ್ಲಿರುವ ಕ್ಷಯರೋಗದ ಆಸ್ಪತ್ರೆಗಳು ಅಥವಾ ಕ್ಲಿನಿಕ್‌ಗಳು ಏನೇ ಮಾಡಿದರೂ ಸಹ ಅವುಗಳ ಸ್ಥಿತಿ ತೃಪ್ತಿದಾಯಕವಾಗಿಲ್ಲ. ಇದಕ್ಕೆ ಕಾರಣ ಈ ಆಸ್ಪತ್ರೆಗಳಲ್ಲಿ ಪ್ರಯೋಗ ಶಾಲೆಗಳು, ಕ್ಷ–ಕಿರಣ ಉಪಕರಣಗಳು, ಆಪರೇಷನ್ ಥಿಯೇಟರ್‌ಗಳೂ ಸಹ ತೀರಾ ಅವಶ್ಯವಾಗಿದೆ. ಈ ಸಂಬಂಧದಲ್ಲಿ ಆಸ್ಪತ್ರೆಗಳ ಹಾಸಿಗೆ ಸಂಖ್ಯೆಯನ್ನು, ಗುಣಪಡಿಸಲಾಗದ ಕ್ಷಯರೋಗದ ರೋಗಿಗಳಿಗೆ ಹೆಚ್ಚಿಸಬೇಕು ಮತ್ತು ಪುನರ್ವಸತಿ ಸೌಕರ್ಯಗಳನ್ನು ಪರಿಗಣನೆಗೆ ತೆಗೆದುಕೊಳ್ಳಬೇಕು. ಬಿಸಿಜಿ ಚುಚ್ಚುಮದ್ದನ್ನು ಮುಂದುವರಿಸಬೇಕು ಎಂದು ನಾನು ಹೇಳಬಯಸುತ್ತೇನೆ.

ಸಾಮಾನ್ಯ ಆಸ್ಪತ್ರೆಗಳನ್ನು ಕುರಿತಂತೆ ಹೇಳುವುದಾದರೆ, ನಾನು ಸಾಧ್ಯವಾದಷ್ಟು ಹೆಚ್ಚಿನ ಸಂಖ್ಯೆಯ ಆಸ್ಪತ್ರೆಗಳಿಗೆ ಅಂಬ್ಯುಲೆನ್ಸ್ ಸೇವೆಗಳನ್ನು ಒದಗಿಸಬೇಕು.

## ಕುಷ್ಠ ರೋಗ ಶಾಪವಲ್ಲ, ಗುಣಪಡಿಸಬಹುದಾದ ಖಾಯಿಲೆ

ಕುಷ್ಠರೋಗದ ಬಗ್ಗೆ ಹೇಳುವುದಾದರೆ, ಅದೊಂದು ಅಪಾಯಕಾರಿ ಹಾಗೂ ಶಾಪ ಎಂದು ಪರಿಗಣಿಸಲಾಗಿದೆ. ಮೈಸೂರು ರಾಜ್ಯವೂ ಸೇರಿದಂತೆ ರಾಜ್ಯ ಸರ್ಕಾರಗಳು ಕೇಂದ್ರ ಸರ್ಕಾರದ ನೆರವಿನ ಅನುಕೂಲವನ್ನು ಪಡೆದುಕೊಂಡಿಲ್ಲವೆಂಬುದನ್ನು ನಾನು ಈ ದಿನದ ವಾರ್ತಾ ಪತ್ರಿಕೆಯಲ್ಲಿ ಓದಿದೆ. ಅದಕ್ಕಾಗಿ ಮೀಸಲಿರಿಸಿದ ಹಣ ಸಾಕಾಗುವುದಿಲ್ಲ ಮತ್ತು ಮೂರು ಜಿಲ್ಲೆಗಳಿಗೆ

ಕಡಿಮೆ ಮೊತ್ತವನ್ನು ಹಂಚಿಕೆ ಮಾಡಿರುವುದು ಸಂದಿಗ್ಧದ ಪರಿಸ್ಥಿತಿಯಾಗಿದೆ ಎಂದು ನಾನು ಹೇಳಬಯಸುತ್ತೇನೆ. ಈ ಸಂಬಂಧದಲ್ಲಿ ನಾನು ಏನು ಹೇಳಲು ಬಯಸುತ್ತೇನೆಂದರೆ, ಜನರ ಮುಗ್ಧತೆಯ ಕಾರಣ ಅದೊಂದು ಶಾಪಗ್ರಸ್ಥ ರೋಗವೆಂಬ ಮೂಢನಂಬಿಕೆಯು ಕುಷ್ಠರೋಗಕ್ಕೆ ಅಂಟಿಕೊಂಡು ಒಂದು ಕಳಂಕವಾಗಿದೆ. ಈ ರೋಗವು ಬ್ಯಾಸಿಲಿ- ಲೆಪರ್ ಬ್ಯಾಸಿಲಿಯಂತಹ ಏಕಾಣು ಜೀವಿಯಿಂದ ಉಂಟಾಗತಕ್ಕ ರೋಗವೆಂಬುದಾಗಿ ರುಜುವಾತಾಗಿದೆ ಎಂದು ಹೇಳಬಯಸುತ್ತೇನೆ. ಇದು ಗುಣವಾಗಬಲ್ಲ ರೋಗವಾಗಿದ್ದು, ಇದರಿಂದ ನರಳುವುದನ್ನು ಬಹುಮಟ್ಟಿಗೆ ಕೆಲವು ಔಷಧಗಳಿಂದ ನಿವಾರಿಸಬಹುದು. ಇದು ಸೋಂಕು ರೋಗವಾಗಿದ್ದರೂ, ಚಿಕಿತ್ಸೆಯ ಮೂಲಕ ಇದನ್ನು ಸೋಂಕುರಹಿತ ರೋಗವನ್ನಾಗಿ ಮಾಡಬಹುದು. ಆದ್ದರಿಂದ, ಸಮಾಜವು ದೂರವಿಟ್ಟಿರುವ ಈ ವರ್ಗದ ಜನರ ಬಗ್ಗೆ ಸರ್ಕಾರವು ತಕ್ಕ ಎಚ್ಚರಿಕೆ ವಹಿಸಿದೆ ಮತ್ತು ರಾಜ್ಯದ ವಿವಿಧ ಭಾಗಗಳಲ್ಲಿ ಜನರಿಗೆ ಚಿಕಿತ್ಸೆ ನೀಡಲು ಸೂಕ್ತ ವ್ಯವಸ್ಥೆ ಮಾಡಲಾಗಿದೆ ಎಂಬುದನ್ನು ಗಮನಿಸಲು ಸರ್ಕಾರವು ಪ್ರಚಾರ ಮತ್ತು ಪ್ರಕಟಣಾ ಸಂಸ್ಥೆಗಳನ್ನು ಪ್ರಾರಂಭಿಸಬೇಕೆಂದು ನಾನು ಸೂಚಿಸುತ್ತೇನೆ. ಈ ಸಂಬಂಧದಲ್ಲಿ ನಾನು, ಕುಷ್ಠರೋಗದ ಅಂಕಿ-ಅಂಶಗಳ ಸಮೀಕ್ಷೆಯನ್ನು ಕೂಡಲೇ ಕೈಗೊಳ್ಳುವಂತೆ ಸೂಚಿಸಬಯಸುತ್ತೇನೆ.

## ಮಾನಸಿಕ ರೋಗಿಗಳಿಗೆ ಸ್ವಾಸ್ಥ್ಯ ನೀಡುವ ನಿಮ್ಹಾನ್ಸ್

ನಾನು, ಬೆಂಗಳೂರಿನಲ್ಲಿರುವ ಮಾನಸಿಕ ಆಸ್ಪತ್ರೆ ಕುರಿತು ಒಂದೆರಡು ಮಾತುಗಳನ್ನು ಆಡಲು ಬಯಸುತ್ತೇನೆ. ನಾನು ಆಸ್ಪತ್ರೆಗೆ ಭೇಟಿ ನೀಡಿ, ಸುಮಾರು ಮೂರು ನಾಲ್ಕು ಗಂಟೆಗಳ ಕಾಲ ಆಸ್ಪತ್ರೆಯ ವ್ಯವಹಾರಗಳ ಬಗ್ಗೆ ಅಧ್ಯಯನ ಮಾಡಿದೆ. ಆ ಆಸ್ಪತ್ರೆಯ ಬಗ್ಗೆ ನನಗೆ ಮೆಚ್ಚಿಗೆ ಇದೆ. ನಾನು ಅದನ್ನು ಶ್ಲಾಘಿಸುತ್ತೇನೆ ಹಾಗೂ, ಆ ಆಸ್ಪತ್ರೆಯನ್ನು ಮನೋಜ್ಞವಾಗಿ ಅಖಿಲ ಭಾರತ ಮಾನಸಿಕ ಆರೋಗ್ಯ ಸಂಸ್ಥೆ ಎಂದು ಕರೆಯಲಾಗಿದೆ. ಅಲ್ಲಿ ವೈದ್ಯರಿಗೆ ಬೋಧನೆ ಮತ್ತು ತರಬೇತಿ ನೀಡಲಾಗುತ್ತದೆ ಮತ್ತು ದಾದಿಯರಿಗೆ ಸಂಶೋಧನೆ ಮತ್ತು ಸ್ನಾತಕೋತ್ತರ ಪದವಿ ಕೋರ್ಸ್‌ಗಳಿವೆ. ಸಾವಿರಕ್ಕೆ ಇಬ್ಬರು ಯಾವುದೋ ಒಂದು ರೀತಿಯ ಮಾನಸಿಕ ರೋಗ ಅಥವಾ ಬೇರೆ ರೀತಿಯಿಂದ ನರಳುತ್ತಿರುತ್ತಾರೆಂಬುದು ಸರ್ವವಿದಿತ. ಅದು ಸಾಂಖ್ಯಿಕ ಅಂಕಿ-ಅಂಶಗಳ ದೃಷ್ಟಿಯಿಂದ ಇಷ್ಟು ಇರಬಹುದೆಂದು ಎರಡು ದಶಲಕ್ಷ ಜನ ಯಾವುದೋ ಮಾನಸಿಕ ರೋಗ ಅಥವಾ ಇತರ ರೋಗದಿಂದ ಬಳಲುತ್ತಿದ್ದಾರೆಂದು ಹೇಳಿದರೂ, ಐದು ದಶಲಕ್ಷ ಜನರು ಈ ಸಮಸ್ಯೆಯಿಂದ ಬಳಲುತ್ತಿದ್ದಾರೆ ಎಂದು ನಾನು ಹೇಳಬಯಸುತ್ತೇನೆ. ಅದು ಒಂದು ರೀತಿ ಸಹಕಾರ

ಸಂಸ್ಥೆಯಂತೆ ಇದ್ದು, ಅದಕ್ಕೆ ರಾಜ್ಯ ಸರ್ಕಾರಗಳು, ಕೇಂದ್ರ ಸರ್ಕಾರ ಮತ್ತು ವಿಶ್ವ ಆರೋಗ್ಯ ಸಂಸ್ಥೆಗಳಿಂದ ನೆರವು ಒದಗಿಬರುತ್ತದೆ ಮತ್ತು ಹಾಸಿಗೆ ಸಂಖ್ಯೆಯು 300 ಇದ್ದರೂ ಅದನ್ನು ಈಗ 600ಕ್ಕೆ ಹೆಚ್ಚಿಸಲಾಗಿದೆ. ಆದ್ದರಿಂದ ಆ ಆಸ್ಪತ್ರೆಗೆ ಕೂಡಲೇ ದಾದಿಯರು ಮತ್ತು ವಾರ್ಡ್‌ಬಾಯ್‌ಗಳಿಗೆ ಮಂಜೂರಾತಿ ನೀಡುವ ಅವಶ್ಯಕತೆ ಇದೆ. ಆ ಆಸ್ಪತ್ರೆಯ ಸುತ್ತಮುತ್ತಲಿನ ವಾತಾವರಣವು ನನ್ನ ಮನಸ್ಸಿನ ಮೇಲೆ ಗಾಢವಾದ ಪರಿಣಾಮ ಬೀರಿದೆ. ಮದ್ರಾಸಿನಲ್ಲಿ ಆಸ್ಪತ್ರೆಗಳನ್ನು ನೋಡಿದ ಮತ್ತು ಅಲ್ಲಿ ಮೂರು ಅಥವಾ ನಾಲ್ಕು ತಿಂಗಳುಗಳ ಕೋರ್ಸ್‌ನಲ್ಲಿ ನನಗೆ ಆಗಿರುವ ಅನುಭವದಿಂದ, ಆ ಆಸ್ಪತ್ರೆಗಳನ್ನು ಇದಕ್ಕೆ ಹೋಲಿಸಿದರೆ ಅವು ಜೈಲುಗಳು ಎಂಬುದಾಗಿ ನಾನು ಹೇಳುತ್ತೇನೆ. ಆ ರೀತಿಯ ವಾತಾವರಣ ಅಲ್ಲಿ ಇರಬಾರದು. ರೋಗಿಗಳಿಗೂ ಸಹ, ಅವರು ಮಾನಸಿಕ ಆಸ್ಪತ್ರೆಯಲ್ಲಿ ಇರುವರೆಂಬ ಭಾವನೆ ಇರಬಾರದು. ಅಂಥ ಒಂದು ವಾತಾವರಣ ಬೆಂಗಳೂರಿನ ಮಾನಸಿಕ ಆಸ್ಪತ್ರೆಯಲ್ಲಿ ಇದೆ. ಏಷ್ಯಾದಲ್ಲಿಯೇ ಅತ್ಯುತ್ತಮವಾದ ಸಂಸ್ಥೆಗಳ ಪೈಕಿ ಒಂದು ಎಂದು ಕರೆಯಲ್ಪಟ್ಟಿರುವ ಈ ಸಂಸ್ಥೆಯನ್ನು ವೃದ್ಧಿಗೊಳಿಸುವ ನಿಟ್ಟಿನಲ್ಲಿ ನಮ್ಮ ಸರ್ಕಾರ ಎಲ್ಲ ರೀತಿಯ ನೆರವನ್ನು ನೀಡಬೇಕು.

ದೊಡ್ಡ ದೊಡ್ಡ ಆಸ್ಪತ್ರೆಗಳಲ್ಲಿ ರಕ್ತ ನಿಧಿ ಬ್ಯಾಂಕ್‌ಗಳನ್ನು ಸ್ಥಾಪಿಸಬೇಕು. ಈ ಸಂಬಂಧದಲ್ಲಿ ಅವರ ಸರ್ಕಾರಕ್ಕೆ ನಾನು ಸೂಚಿಸಬಯಸುವುದೇನೆಂದರೆ, ಕಣ್ಣಿನ ಬ್ಯಾಂಕ್ – ಡಾ॥ ಮೋದಿಯವರು ಬಹಳ ಒಳ್ಳೆಯ ಕೆಲಸ ಮಾಡುತ್ತಿದ್ದಾರೆ ಹಾಗೂ ಇದಕ್ಕೆ ಎಷ್ಟರಮಟ್ಟಿಗೆ ನೆರವು ನೀಡಬೇಕು, ಎಂಬುದನ್ನು ಸರ್ಕಾರವು ಪರಿಗಣಿಸಬೇಕು ಅಥವಾ ಕಾರ್ನಿಯಾ ಸಂರಕ್ಷಣೆ ಬ್ಯಾಂಕನ್ನೂ ಸಹ ಸ್ಥಾಪಿಸಬೇಕು.

## ವೈದ್ಯಕೀಯ ಶಿಕ್ಷಣದಲ್ಲಿನ ಪ್ರಗತಿ

ವೈದ್ಯಕೀಯ ಶಿಕ್ಷಣ ಕುರಿತಂತೆ, ಹೇಳುವುದಾದರೆ ನಾನು, ಸರ್ಕಾರ ಮತ್ತು ಆರೋಗ್ಯ ಸಚಿವರು, ತೆಗೆದುಕೊಂಡಿರುವ ಈ ಮುಂದಿನ ದಿಟ್ಟ ನಿಲುವುಗಳ ಬಗ್ಗೆ ನಾನು ಅಭಿನಂದಿಸುತ್ತೇನೆ. ಅವು, ಹುಬ್ಬಳ್ಳಿಯಲ್ಲಿ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸುವುದು ಮತ್ತು ಬೆಂಗಳೂರು ವೈದ್ಯಕೀಯ ಕಾಲೇಜನ್ನು ಸ್ವಾಧೀನಕ್ಕೆ ತೆಗೆದುಕೊಂಡಿರುವುದು ಮತ್ತು ಸಾಮಾಜಿಕ ಮತ್ತು ನಿರೋಧಕ ಔಷಧಗಳ ವ್ಯಾಪಾರ ಸಂಸ್ಥೆ ಸ್ಥಾಪನೆ ಮತ್ತು ಮೈಸೂರು ವೈದ್ಯಕೀಯ ಕಾಲೇಜಿನ ವಿಸ್ತರಣೆ. ಉನ್ನತ ಖಾಸಗಿ ಉದ್ಯಮವಾಗಿರುವ ಕಸ್ತೂರಬಾ ವೈದ್ಯಕೀಯ ಕಾಲೇಜು ಪೂರ್ಣ ಪ್ರಮಾಣದ ಕಾಲೇಜು ಆಗಿದ್ದು, ಆ ಕಾಲೇಜಿನ ಬೋಧನಾ ಗುಣಮಟ್ಟವು

1733-4

ಉತ್ತಮವಾಗಿರುವುದರಿಂದ ಇದಕ್ಕೆ 20,000 ರೂ.ಗಳ ಅನುದಾನವನ್ನು ಹೆಚ್ಚಿಸಬಹುದಾಗಿದೆ. ಈ ಕಾಲೇಜನ್ನು ಆದಷ್ಟು ಬೇಗನೆ ಸ್ವಾಧೀನಕ್ಕೆ ತೆಗೆದುಕೊಳ್ಳಬೇಕೆಂದು ನಾನು ಸೂಚಿಸುತ್ತೇನೆ ಈ ಸಂಸ್ಥೆಗಳಿಗೆ ಬೋಧಕ ಸಿಬ್ಬಂದಿಯನ್ನು ಆಯ್ಕೆ ಮಾಡುವಲ್ಲಿ ಸರ್ಕಾರವು ಅತ್ಯುತ್ತಮ ಜನರನ್ನು ಆಯ್ಕೆ ಮಾಡಿಕೊಳ್ಳುವಂತೆ ಮತ್ತು ವೈದ್ಯರನ್ನು ಭಾರತದಲ್ಲಿ ಮತ್ತು ವಿದೇಶದಲ್ಲಿ ತರಬೇತಿಗಾಗಿ ಕಳುಹಿಸಬೇಕೆಂದು ಮತ್ತು ಅವರಿಗೆ ಎಲ್ಲ ರೀತಿಯ ಪ್ರೋತ್ಸಾಹ ಮತ್ತು ನೆರವನ್ನು ನೀಡಲೂ ಸಹ ನಾನು ಸಲಹೆ ನೀಡುತ್ತೇನೆ.

ನಂತರ, ವೈದ್ಯರುಗಳ ವೇತನವನ್ನು ಹೆಚ್ಚಿಸಬೇಕು. ವೈದ್ಯರುಗಳಲ್ಲಿ ಸಹಾಯಕ ಶಸ್ತ್ರಚಿಕಿತ್ಸಕರು ಮತ್ತು ಉಪ ಸಹಾಯಕ ಶಸ್ತ್ರಚಿಕಿತ್ಸಕರು ಎಂಬ ಎರಡು ವರ್ಗಗಳಿವೆ ಎಂಬುದನ್ನು ತಿಳಿದು ನನಗೆ ನಿಜವಾಗಿಯೂ ಜಿಗುಪ್ಸೆ ಉಂಟಾಗಿದೆ.

**ಮಾನ್ಯ ಸಭಾಧ್ಯಕ್ಷರು :** ಸಮಯ ಮುಗಿಯಿತು.

**ಡಾ. ಕೆ. ನಾಗಪ್ಪ ಆಳ್ವ:** ಎರಡು ನಿಮಿಷ ಅಷ್ಟೆ ಸ್ವಾಮಿ.

ಆಸ್ಪತ್ರೆಗಳಲ್ಲಿ ಆಹಾರದ ವಿಷಯ ಕುರಿತಂತೆ, ಆಹಾರದ ಸರಬರಾಜು, ತಯಾರಿ ಮತ್ತು ಕೊಡುವ ವ್ಯವಸ್ಥೆ ತೃಪ್ತಿಕರವಾಗಿಲ್ಲ. ಎಷ್ಟರಮಟ್ಟಿಗೆ ಅದನ್ನು ಸುಧಾರಿಸಬಹುದೆಂಬುದರ ಬಗ್ಗೆ ಆಲೋಚಿಸಬೇಕಾಗಿದೆ.

## ಕುಟುಂಬ ಯೋಜನೆ–ಸಮಕಾಲೀನ ಪ್ರಜ್ಞೆ

ಬಹಳ ಮುಖ್ಯವಾದ ಹಾಗೂ ಜನರ ಮತ್ತು ಸರ್ಕಾರದ ಗಮನವನ್ನು ಸೆಳೆದಿರುವಂತಹ ಕುಟುಂಬ ಯೋಜನೆ ಬಗ್ಗೆ ಎರಡೇ ಎರಡು ಮಾತುಗಳನ್ನಾಡುತ್ತೇನೆ. ಕೇಂದ್ರ ಸರ್ಕಾರವು ವಾಸ್ತವವಾಗಿ ಸುಮಾರು ಶೇ. 75ರಷ್ಟು ವೆಚ್ಚಗಳನ್ನು ಭರಿಸುತ್ತಿದೆ ಹಾಗೂ ಅವು ಸರಿಯಾದ ಕೆಲಸ ಮಾಡುವ ಸ್ಥಿತಿಯಲ್ಲಿಲ್ಲ. ಕುಟುಂಬ ಯೋಜನಾ ಮತ್ತು ತರಬೇತಿ ಕೇಂದ್ರಗಳನ್ನು ತೆರೆಯಬೇಕು ಮತ್ತು ಈ ಸಂಬಂಧದಲ್ಲಿ ಶಿಕ್ಷಣ ತೀರಾ ಅವಶ್ಯವಾಗಿದೆ. ಉದಾಹರಣೆಗೆ, ಒಂದು ಒಪ್ಪಿಕೊಳ್ಳಬೇಕಾದ ವಿಷಯವೆಂದರೆ ಬಡತನ ಹೆಚ್ಚಿದಷ್ಟೂ ಮಕ್ಕಳನ್ನು ಹೆರುವುದು ಜಾಸ್ತಿ. ಅದನ್ನು ನಾವು ಯಾವಾಗಲೂ ಗಮನದಲ್ಲಿಟ್ಟುಕೊಳ್ಳಬೇಕು. ಜನಸಂಖ್ಯೆಯಲ್ಲಿ ಹೆಚ್ಚಳ ಜಾಸ್ತಿಯಾಗುತ್ತಿದೆ, ನಾವು ಜನಸಂಖ್ಯೆಯನ್ನು ನಿಯಂತ್ರಿಸದ ಹೊರತು, ಭಾರತದಲ್ಲಿ ಉತ್ತಮ ಜೀವನ ಗುಣಮಟ್ಟವನ್ನು ಹೊಂದುವುದು ಸಾಧ್ಯವೇ ಇಲ್ಲ. ಈ ವಿಷಯದಲ್ಲಿ ಜನರಿಗೆ ಶಿಕ್ಷಣ ನೀಡಲು ಸಾಧ್ಯವಿರುವ ಎಲ್ಲ ಪ್ರಯತ್ನವನ್ನು ಮಾಡಬೇಕೆಂದು ಮತ್ತು

ಸಾಧನ-ಸಲಕರಣೆಗಳನ್ನು ಉಚಿತವಾಗಿ ಸರಬರಾಜು ಮಾಡಲು ವ್ಯವಸ್ಥೆ ಮಾಡಬೇಕೆಂದು ನಾನು ಸಲಹೆ ನೀಡುತ್ತೇನೆ. ಮಂಗಳೂರಿನ ಲೇಡಿ ಘೋಷ ಆಸ್ಪತ್ರೆಯಲ್ಲಿ ಈ ಲೋಪ ಆಗಿದೆ. ಏಕೆಂದರೆ ಆ ಸಾಧನ-ಸಲಕರಣೆಗಳ ಅಗತ್ಯ ಇರುವ ಜನರಿಗೆ ಮತ್ತು ಅದನ್ನು ಕೇಳಿದ ಜನರಿಗೆ ಸರಬರಾಜು ಮಾಡಿಲ್ಲ. ಈ ಮಾತುಗಳೊಂದಿಗೆ ಬೇಡಿಕೆಯನ್ನು ನಾನು ಬೆಂಬಲಿಸುತ್ತೇನೆ.

## ಆಯವ್ಯಯ ಚರ್ಚೆ

**12ನೇ ಮಾರ್ಚ್ 1959**

### ಭರವಸೆ ಮೂಡಿಸಿದ ಪಂಚವಾರ್ಷಿಕ ಯೋಜನೆ

**ಡಾ॥ ಕೆ. ನಾಗಪ್ಪ ಆಳ್ವ (ಪಾಣೆ-ಮಂಗಳೂರು):** ಮಾನ್ಯ ಅಧ್ಯಕ್ಷರೆ, 12ನೇ ಮಾರ್ಚ್, 1959ರಂದು ಆರ್ಥಿಕ ಮಂತ್ರಿಗಳು ತಮ್ಮ ಮುಂದೆ ಮಂಡಿಸಿರುವ ಉಳಿತಾಯ ಬಜ್ಜೆಟ್‌ನ್ನು ಸ್ವಾಗತಿಸುತ್ತೇನೆ. ಅದರಲ್ಲೂ ಅರ್ಥಗರ್ಭಿತವಾದ ಒಂದು ಭಾಷಣವನ್ನು ತಯಾರಿಸುವುದು, ಅದು ಮಾತ್ರ ಅಲ್ಲದೆ ಒಂದು ಪ್ರಗತಿಪಥದಲ್ಲಿರುವ ಬಜ್ಜೆಟ್‌ನ್ನು ಮಂಡಿಸಿರುವುದಕ್ಕಾಗಿ ನಾನು ಅವರನ್ನು ಅಭಿನಂದಿಸುತ್ತೇನೆ. ಆದರೆ ಅದು ಅಷ್ಟೊಂದು ಉತ್ತಮ ತರಹದ ಭಾಷಣವಾಗಿದ್ದರೂ ಕೂಡ ಕೆಲವು ಮುಖ್ಯ ಅಂಶಗಳು ಅದರಲ್ಲಿ ಅಡಕವಾಗಿಲ್ಲ. ಹೊಸ ಮೈಸೂರು ಪ್ರಾಂತ ರಚನೆಯಾಗಿ ಎರಡು ವರ್ಷ ಆಗುತ್ತಾ ಬಂದರೂ ಕೂಡ ಐದು ತರಹ ಘಟಕಗಳು ಬಂದದ್ದರಿಂದ, ಅನೇಕ ತರಹ ಆಡಳಿತ ಮತ್ತು ಮಾನವ ಸಂಬಂಧವಾದ ಸಮಸ್ಯೆಗಳನ್ನು ಎದುರಿಸಲಿಕ್ಕೆ ಇದ್ದುದರಿಂದ, ಕೆಲವು ಸಮಸ್ಯೆಗಳು ಹೊಸದಾಗಿ ಉದ್ಭವಿಸುತ್ತಾ ಬಂದಿವೆ. ಅಭಿವೃದ್ಧಿ ಕಾರ್ಯಗಳು ನಡೆಯುತ್ತಾ ಬಂದಿವೆ. ಅನೇಕ ಏಕತರದ ಕಾನೂನುಗಳ ರಚನೆಯಾಗಬೇಕಾಗಿದೆ. ಅದರಲ್ಲೂ ಕೂಡ ಮುಖ್ಯವಾಗಿ ಆಗಬೇಕಾದ ಕೆಲವು ಕಾನೂನುಗಳು ಆಗದೇ ಬಾಕಿ ಇವೆ. ಈ ವಿಷಯದಲ್ಲಿ ತ್ವರಿತವಾದ ಕಾರ್ಯವನ್ನು ಮಾಡುವಂಥಾದ್ದು ಬಹಳ ಅಗತ್ಯವಿದೆ. ಪಂಚವಾರ್ಷಿಕ ಯೋಜನೆಗಳ ಕೆಲಸವನ್ನು ನೋಡಿದರೆ ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಎರಡು ವರ್ಷಗಳಲ್ಲಿ ಅಷ್ಟೊಂದು ತೀವ್ರಗತಿಯಲ್ಲಿ ಕೆಲಸ ನಡೆಯದಿದ್ದರೂ ಕೂಡ ನಮಗೆ ಭರವಸೆ ಕಾಣುತ್ತಿದೆ; ಇನ್ನು ಮುಂದಿನ ವರ್ಷಗಳಲ್ಲಿ ಈ ಕಾರ್ಯವು ಒಳ್ಳೆಯ ರೀತಿಯಲ್ಲಿ ನಡೆಯಬಹುದು ಎನ್ನುವ ರೀತಿಯಲ್ಲಿ ನಂಬಿಕೆ ಕಾಣುತ್ತದೆ. ಆದರೆ ಈ ಭಾಷಣದಲ್ಲಿ ಮಾನಸಿಕ ಹಾಗು ಆರ್ಥಿಕ ವಿಲೀನೀಕರಣವು ಸಂಪೂರ್ಣವಾಗಿ ಆಗಿಲ್ಲ, ಎಂದು ಹೇಳಿದರೆ ನನ್ನ ಅನುಭವದಲ್ಲಿ ಅದಕ್ಕೆ ಮುಖ್ಯವಾಗಿ ಮೂರು ಕಾರಣಗಳು ನನಗೆ ಕಾಣುತ್ತವೆ. ಈ ವಿಷಯದಲ್ಲಿ ಒಂದೆರಡು ಮಾತುಗಳನ್ನು ನಾನು ಹೇಳಬಯಸುತ್ತೇನೆ.

## ವೇತನ ಅಸಮಾನತೆಗೊಂದು ಪರಿಹಾರ

ಒಂದು, ನೌಕರರ ಸಂಬಳದ ಸಮಾನತೆ ಮತ್ತು inter-state seniority ಪಟ್ಟಿ. ಇದನ್ನು ಇತ್ಯರ್ಥ ಮಾಡುವುದರಲ್ಲಿ ಎಷ್ಟೇ ಕಷ್ಟಗಳು ಇದ್ದರೂ, ಇದು ಎಷ್ಟೇ ಜಟಿಲ ಪ್ರಶ್ನೆಯಾಗಿದ್ದರೂ ಅದನ್ನು ಧೈರ್ಯವಾಗಿ ಇಷ್ಟು ಹೊತ್ತಿಗೆ ಮಾಡಬೇಕಾಗಿತ್ತು. ಎಲ್ಲರನ್ನೂ ಮೆಚ್ಚಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ; ದೇವರಿಂದಲೂ ಸಾಧ್ಯವಿಲ್ಲ. ಕ್ಯಾಬಿನೆಟ್ಟಿನ ನಾಲ್ಕು ಜನರ ಸಮಿತಿಯೂ ಕೂಡ ಇದನ್ನು ಸಂಪೂರ್ಣವಾಗಿ ಮಾಡಲಿಲ್ಲ. ಅದರಲ್ಲೂ ಭಿನ್ನಾಭಿಪ್ರಾಯಗಳಿದ್ದವೆಂದು ಗೊತ್ತಾಯಿತು. ಅವರಾದರೂ ಧೈರ್ಯವಾಗಿ ಕೆಲಸ ಮಾಡಬೇಕಿತ್ತು. ಧೈರ್ಯ ಮತ್ತು ಯಾವ ತರಹದ ದಾಕ್ಷಿಣ್ಯಕ್ಕೂ ಬೀಳದೆ ಆದಷ್ಟು ಬೇಗನೆ ಈ ಕಾರ್ಯವನ್ನು ಪರಿಹರಿಸಬೇಕಾದದ್ದು ಅಗತ್ಯವೆಂದು ನಾನು ಈ ಸಂದರ್ಭದಲ್ಲಿ ಹೇಳಲಿಚ್ಛಿಸುತ್ತೇನೆ.

## ಪಾನನಿರೋಧ ಪೊಲೀಸ್ ವ್ಯಾಪ್ತಿಗೆ ಬೇಡ

ಎರಡನೆಯದಾಗಿ, ಪಾನನಿರೋಧ. ಇದರ ಸಂಬಂಧದಲ್ಲಿ, ನಾವು ಸತ್ಯ, ಧರ್ಮ ಇವುಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಮಾತನಾಡುವುದಿದ್ದರೆ, ನಾನು ಹೇಳಬೇಕಾಗುತ್ತದೆ– ಇದು ಖಂಡಿತ failure ಆಗಿದೆ ಎಂದು. ಆದರೂ ಯಾವುದೋ ಕಾರಣದಿಂದ ಇದನ್ನು ಮುಂದೊತ್ತುವ ದಾರಿಯಲ್ಲಿ ಹೋಗುತ್ತಿದ್ದಾರೆ. ಆದ್ದರಿಂದ ಈ ವಿಷಯದಲ್ಲಿ ನನ್ನ ಒಂದು ಸೂಚನೆ ಏನೆಂದರೆ, ತಮಗೆ ಸಾಧ್ಯವಿದ್ದರೆ ಇದನ್ನು ಸರಿಯಾದ ರೀತಿಯಲ್ಲಿ ನಡೆಸಿಕೊಂಡು ಹೋಗಬೇಕು, ಇಲ್ಲದಿದ್ದರೆ ಈಗ ಪ್ರೋಹಿಬಿಷನ್ ಕಾನೂನನ್ನು ತೊಡೆದು ಹಾಕಬೇಕು ಎಂದು ಹೇಳುತ್ತೇನೆ. ಈ ಹೊತ್ತು ಎಲ್ಲಿ ನೋಡಿದರೂ, ಈ ಸಭೆಯಲ್ಲಿ ಅನೇಕರ ಭಾಷಣಗಳಲ್ಲಿಯೂ ಸದಾ ಪೊಲೀಸ್ ಇಲಾಖೆಯವರ ಮೇಲೆ ಅನೇಕ ತರಹದ ಟೀಕೆಗಳು ಬರುತ್ತಿವೆ. ಇವಕ್ಕೆ ಮುಖ್ಯವಾದ ಕಾರಣ ಪೊಲೀಸ್ ಇಲಾಖೆಗೆ ಈ ಕಾರ್ಯವನ್ನು ವಹಿಸಿರತಕ್ಕದ್ದು. ಇದರಿಂದ ಏನಾಗಿದೆಯೆಂದು ಮಂತ್ರಿಗಳಿಗೂ ಗೊತ್ತು. ಮಾಮೂಲು, ಲಂಚ, ಲಾಭ–ಇವೆಲ್ಲಕ್ಕೂ ಇದು ಎಡೆಕೊಟ್ಟಿದೆ. ಪ್ರೋಹಿಬಿಷನ್ ಜಾರಿಗೆ ಬಂದುದಾಗಿ ಕೆಲವರಿಗೆ ಮಾಮೂಲು–ಲಂಚ ಪಡೆಯುವುದಕ್ಕೆ ಅನುಕೂಲವಾಗಿದೆ. ಸಮತಾವಾದ ಸಮಾಜವು ರಚನೆಯಾಗುವುದು ಹೋಗಿ ದೊಡ್ಡ ದೊಡ್ಡ ಲೀಡರುಗಳು– ಇದರಿಂದಾಗಿ ಹಣ ಮಾಡುವಂಥ ಅಥವಾ ಪ್ರಭಾವಬೀರುವಂಥ ಸಂದರ್ಭ ಹೆಚ್ಚುತ್ತಿದೆ. ಆದ್ದರಿಂದ ಪ್ರೋಹಿಬಿಷನ್‌ನ್ನು ಮುಂದುವರೆಸುವುದಾದರೆ ಇದರ ಕೆಲಸವನ್ನು ಪೊಲೀಸ್ ಡಿಪಾರ್ಟ್‌ಮೆಂಟಿಗೆ ತಪ್ಪಿಸಿ, ಬೇರೆ ಒಬ್ಬ ಮುಖ್ಯ ಅಧಿಕಾರಿಗೆ ಕೊಡುವುದು ಮುಖ್ಯವೆಂದು ಹೇಳುತ್ತೇನೆ.

## ಗಡಿ ಪ್ರಶ್ನೆಯ ಗಂಭೀರತೆ

ಮೂರನೆಯದಾಗಿ, ಒಂದು ಮಹತ್ತರವಾದ ವಿಚಾರವೇನೆಂದರೆ, ಗಡಿ ವಿವಾದದ ಪ್ರಶ್ನೆ. ಇದು ನಮ್ಮ ದೇಶದಲ್ಲಿ ಒಂದು cancer ರೋಗದಂತಿದೆ. ಇದಕ್ಕೆ ಈಗ ಬೇಕಾದದ್ದು ಔಷಧಿ, ಇಲ್ಲವಾದರೆ ಆಪರೇಷನ್– ಇವೆರಡರಲ್ಲಿ ಒಂದು ಆಗಬೇಕು. ನಾನು ನಿಜವಾಗಿ ಹೇಳುವುದಾದರೆ, ಈ ವಿಷಯದಲ್ಲಿ ನಮ್ಮ ಮುಖ್ಯಮಂತ್ರಿಗಳ ಸಹನಶಕ್ತಿ ಹಾಗು ಧೈರ್ಯವನ್ನು ನಾನು ಮೆಚ್ಚುತ್ತೇನೆ. ಅವರು ನಮಗೆ ಆಶ್ವಾಸನೆ ಕೊಟ್ಟಿದ್ದಾರೆ, ಧೈರ್ಯವನ್ನು ಕೊಟ್ಟಿದ್ದಾರೆ. ಆದರೆ ಒಂದು ಶಬ್ದ ಮಾತ್ರ ಇದುವರೆಗೂ ಅವರ ಬಾಯಿಯಿಂದ ಬರಲಿಲ್ಲ. ಕನ್ನಡಿಗನಾಗಿ ನಾನದನ್ನು ಹೇಳಬಯಸುತ್ತೇನೆ. ಕಾಸರಗೋಡು ಅಚ್ಚಕನ್ನಡದ ನಾಡು ಎಂಬುದರಲ್ಲಿ ಯಾವ ತರಹದ ಅಡ್ಡಿಯೂ ಇಲ್ಲ. ಆ ವಿಷಯದಲ್ಲಿ ಯಾವ ತರಹದ ಕಷ್ಟವಿದೆ ಎಂಬುದನ್ನು ಮಾನ್ಯ ಮಂತ್ರಿಗಳಿಗೆ ತಿಳಿಸಲಿಲ್ಲ. ನಮ್ಮ ಕೇಳಿಕೆಗಳಿಗೆಲ್ಲಾ ಬೆಲೆಯಿಲ್ಲದಂತಾಗಿದೆ. ಪ್ರಜಾಪ್ರಭುತ್ವ ತತ್ವಕ್ಕೆ ಎಲ್ಲ ರೀತಿಯಲ್ಲೂ ಬೆಲೆ ಕೊಟ್ಟ ನಮ್ಮಗಳ ಸಹನಾ ಶಕ್ತಿಯನ್ನು ಇಂದು ಪರೀಕ್ಷೆ ಮಾಡುವಂತಿದೆ. ನಮ್ಮ ಸಹನಾ ಶಕ್ತಿಯನ್ನು ಬಲಹೀನತೆಯೆಂದು ತಿಳಿದುಕೊಳ್ಳದೆ, ಈ ಹೊತ್ತು ಗಡಿ ವಿವಾದ ತೀರ್ಮಾನವಾಗುವಾಗ, ಯಾವ ತೆರದಲ್ಲಿ ರಾಜ್ಯ ಪುನರ್ವಿಂಗಡಣಾ ಸಮಿತಿಯು ತಮ್ಮ ತಪ್ಪನ್ನು ಒಪ್ಪಿಕೊಂಡು ವಿಚಾರವನ್ನು ತಮಗೆ ತಿಳಿಸಿರುವಹಾಗೆಯೇ, ಬೇಗನೆ ಕೆಲಸ ಕೈಮೀರಿ ಹೋಗುವುದಕ್ಕೆ ಮುಂಚೆ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಸಹನಶಕ್ತಿ ಮತ್ತು ಒಗ್ಗಟ್ಟಿನ ಶಕ್ತಿಗೆ ಬೆಲೆಕೊಟ್ಟು ಈ ಕಾರ್ಯ ನೆರವೇರಿಸಿಕೊಡಬೇಕು. ಈ ಬಗ್ಗೆ ನಡೆಯಬೇಕಾದ ಕೆಲಸವನ್ನು ನಮ್ಮ ಮುಖ್ಯ ಮಂತ್ರಿಗಳು ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

## ಅಕ್ಕಿ ಬೆಳೆದ ರೈತರಿಗೆ ಬೆಲೆ ನೀಡಿ

ಇನ್ನು ಅಕ್ಕಿಯ ಬೆಲೆ ಜಾಸ್ತಿಯಾಗುತ್ತಾ ಬರುತ್ತಿರುವುದನ್ನು ತಡೆಗಟ್ಟಲು ಅಕ್ಕಿಯ ದಾಸ್ತಾನನ್ನು ಕಳೆದ ವರ್ಷ ಮಾಡಿಯೂ ಈ ವರ್ಷ ಅಕ್ಕಿಯನ್ನು ಹೆಚ್ಚು ಧಾರಣೆಗೆ ಮಾರುತ್ತಿರುವಾಗ, ಅದಕ್ಕೆ ಬೇಕಾದ ಕಾನೂನು ಲೈಸೆನ್ಸ್‌ಗಳು ಜಾರಿಯಾಗುತ್ತಲಿವೆ. ಈ ಸಂದರ್ಭದಲ್ಲಿ ಒಂದು ವಿಚಾರ ಹೇಳಬಯಸುತ್ತೇನೆ.

ದೇಶದ ಪ್ರತಿಯೊಂದು ಭಾಗದಲ್ಲಿಯೂ ಮಣ್ಣಿನ ಶಕ್ತಿಯಲ್ಲಿ, ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋದಲ್ಲಿ, ಅದರ ಫಲವತ್ತಿನಲ್ಲಿ ವ್ಯತ್ಯಾಸ ಇರುವುದರಿಂದ ಅದನ್ನು ಗಣನೆಗ ತೆಗೆದುಕೊಂಡು ಅಲ್ಲಿ ಬೆಳೆದ ಅಕ್ಕಿಯ

ಧಾರಣೆಯನ್ನು ಗೊತ್ತು ಮಾಡುವುದು ಸರ್ಕಾರದ ಕರ್ತವ್ಯ. ಪ್ರತಿಯೊಬ್ಬ ರೈತನಿಗೂ ಅವನು ಮಾಡುವ ಕೆಲಸಕ್ಕೆ ಅವನ ಉತ್ಪಾದನೆಗೆ ನ್ಯಾಯವಾದ ಬೆಲೆ ಸಿಗುವಂತೆ ಮಾಡುವುದು ಅಗತ್ಯ. ಪೇಟೆಯಲ್ಲಿರುವವರಿಗೆ, ಕಾರ್ಖಾನೆಯಲ್ಲಿ ಕೆಲಸ ಮಾಡುವ ಜನರಿಗೆ ಅಕ್ಕಿಯ ಬೆಲೆ ಜಾಸ್ತಿಯಾಯಿತೆಂದು ಕಾಣಬಹುದು. ಆದರೂ ದೇಶಾಭಿಮಾನವಿದ್ದಲ್ಲಿ, ಹಳ್ಳಿಯ ರೈತನಿಗೆ ಪ್ರತಿಯೊಬ್ಬರು ಅವನ ಉತ್ಪಾದನೆಗೆ ನ್ಯಾಯವಾದ ಬೆಲೆ ಕೊಡಬೇಕು. ಹೀಗಿರುವಾಗ, ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ರೈತರ ಅನುಭವ ಹೇಳುವುದಾದರೆ, ಅಲ್ಲಿಯ ಕೃಷಿಕನ ಜೀವನದ ಕಷ್ಟವನ್ನು ಯಾರೂ ಮರೆಯುವಂತಿಲ್ಲ. ಅವನಿಗಿರತಕ್ಕ ಉತ್ಪತ್ತಿಯ ಖರ್ಚು ಬೇರೆ ಎಲ್ಲ ಕಡೆಗಿಂತಲೂ ಹೆಚ್ಚು. ಆದ್ದರಿಂದ ಅವನಿಗೆ ಮಣಕ್ಕೆ 15 ರೂಪಾಯಿ 20 ರೂಪಾಯಿಗಳನ್ನು ಗೊತ್ತುಮಾಡಿದರೆ ಏನೂ ಫಲಸಿಕ್ಕಂತಾಗುವುದಿಲ್ಲ. ಕಡೆಯ ಪಕ್ಷ 20–26 ರೂಪಾಯಿಗಳನ್ನಾದರೂ ಗೊತ್ತುಮಾಡಬೇಕೆಂದು ಹೇಳುತ್ತೇನೆ.

## ಸಹಕಾರ ಕ್ಷೇತ್ರದ ವಿಸ್ತಾರ

ಕೋ–ಆಪರೇಟಿವ್ ಭೂ ಸುಧಾರಣೆಯಲ್ಲಿ ಕೋ–ಆಪರೇಟಿವ್ ಫಾರ್ಮಿಂಗ್ ಎಂದು ಬರುತ್ತದೆ. ಇದರ ಸಂಬಂಧವಾಗಿ ನಾನೀಗ ಹೆಚ್ಚಿಗೆ ಹೇಳಬಯಸುವುದಿಲ್ಲ. ಸರ್ವೀಸ್ ಕೋ–ಆಪರೇಟಿವ್ಸ್ ಎಂಬುದು ಈ ಸಂಬಂಧ ಮೊದಲು ಬಂದದ್ದು. ಇವುಗಳ ಮುಖಾಂತರ ಜನರ ವಿಶ್ವಾಸವನ್ನು ಒಂದೆರಡು ವರ್ಷಗಳಲ್ಲಿ ಗಳಿಸದೇ ಇದ್ದರೆ, ಬೇರೆ ಕೋ–ಆಪರೇಟಿವ್ಸ್‌ಗಳಿಂದ ಸಾಧ್ಯವಿಲ್ಲವೆಂದು ನಾನು ಹೇಳಬಲ್ಲೆ. ಆದ್ದರಿಂದ ತಾವು ಮೊದಲು ಸರ್ವೀಸ್ ಕೋ–ಆಪರೇಟಿವ್‌ಗಳನ್ನು ಏರ್ಪಾಡು ಮಾಡಿ ಹಳ್ಳಿಯ ಜನರಿಗೆ ಬೇಕಾದ ಎಲ್ಲ ಸಹಾಯ ಸೌಲಭ್ಯಗಳನ್ನು ಒದಗಿಸಿಕೊಟ್ಟರೆ ಅವರ ಪ್ರೀತಿ ವಿಶ್ವಾಸವನ್ನು ಗಳಿಸಿದಂತಾಗುತ್ತದೆ. ಅದು ಬಿಟ್ಟು ಬರೀ ಉದ್ದ ಉದ್ದದ ತತ್ವಗಳನ್ನು ಪ್ರಚಾರ ಮಾಡಿದರೆ ಸಾಲದು. ನೀವೇ ಕಾರ್ಯತಃ ಮಾಡಿ ತೋರಿಸಬೇಕು. ಏಕೆಂದರೆ, ಈಗಿನ ಕಾಲದಲ್ಲಿ ಕೋ–ಆಪರೇಟಿವ್‌ಗಳ ಪರಿಚಯ ಕೇವಲ ಹತ್ತರಷ್ಟು ಜನರಿಗೆ ಮಾತ್ರ ಉಂಟಾಗಿದೆ. ನೂರರಲ್ಲಿ 50 ಜನರಿಗೆ ಇದು ಮುಟ್ಟಿ, ಅವರಿಗೆ ಅದರ ಪ್ರಯೋಜನ ಕಾರ್ಯ ರೂಪದಲ್ಲಿ ಸಿಗದೇ ಇದ್ದರೆ, ಅವರಿಂದ ಮಿಕ್ಕ ವಿಷಯಗಳಲ್ಲಿ ಕೋ–ಆಪರೇಷನ್ ಸಿಗುವುದಿಲ್ಲ.

## ಸಹಕಾರ ತತ್ವ ಕೃಷಿ–ಕೈಗಾರಿಕೆಗಳಲ್ಲಿ ಬರಲಿ

ಎರಡನೆಯದಾಗಿ, ಬಂಜರು ಭೂಮಿಯ ವಿಲೇವಾರಿಯ ವಿಚಾರದಲ್ಲಿ ಒಂದು ಮಾತು ಹೇಳುತ್ತೇನೆ. ಬಂಜರು ಭೂಮಿ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯೊಂದರಲ್ಲಿ ಎರಡು ಲಕ್ಷ ಎಕರೆಯಷ್ಟಿದೆ. ಸ್ವಲ್ಪ ಖರ್ಚು ಮಾಡಿದರೆ ಸಾಗುವಳಿಗೆ ತರಬಹುದಾದದ್ದು 90,000 ಎಕರೆಯಿದೆ. ಅದನ್ನು ಕೋ–ಆಪರೇಟಿವ್ ಫಾರಂ ಎಂದು ಹೇಳದೇ ಇದ್ದರೂ ರೈತರಿಗೆಲ್ಲರಿಗೂ ಬಿಟ್ಟುಕೊಟ್ಟು ವ್ಯವಸಾಯ ಮಾಡಿಸುವ ಏರ್ಪಾಡು ಮಾಡಬೇಕೆಂದು ಹೇಳುತ್ತೇನೆ. ಕೊನೆಯದಾಗಿ ಇನ್ನೊಂದು ವಿಚಾರ ಹೇಳಿ ಮುಗಿಸುತ್ತೇನೆ. ರೈತರ ಜೀವನದ ಮಟ್ಟ ಮೇಲಕ್ಕೆ ಏರಬೇಕಾದರೆ ಬರೀ ಕೃಷಿಯಿಂದ ಸಾಧ್ಯವಿಲ್ಲ. ಮಹಾತ್ಮ ಗಾಂಧಿಯವರು ಯಾವ ತತ್ವವನ್ನು ಹೇಳುತ್ತಾ ಬಂದಿದ್ದರೋ; ನಾವು ಅದೇ ತತ್ವವನ್ನು ಬೋಧಿಸುತ್ತಿದ್ದೇವೆಯೇ ಹೊರತು ಕಾರ್ಯ ರೂಪದಲ್ಲಿ ನಿಜವಾಗಿಯೂ ಏನೂ ಮಾಡುತ್ತಿಲ್ಲ. ಅದೇನೆಂದರೆ, ಕೃಷಿ ಕೈಗಾರಿಕೆಗಳನ್ನು ಸಹಕಾರ ತತ್ವದ ರೀತ್ಯಾ ನಡೆಸಲು ಪ್ರಯತ್ನ ಮಾಡಬೇಕು. ರೈತನ ಆರ್ಥಿಕ ಮಟ್ಟ ಇಂಥ ಉಪವೃತ್ತಿಗಳಿಲ್ಲದೆ ಮೇಲೇರುವುದಕ್ಕೆ ಸಾಧ್ಯವಿಲ್ಲ. ಅದನ್ನು ಮಾಡಿಕೊಟ್ಟ ಹೊರತು ರೈತರಿಗೆ ಸರ್ಕಾರದಲ್ಲಿ ಪ್ರೀತಿ ವಿಶ್ವಾಸಗಳು ಬರುವುದಕ್ಕೆ ಸಾಧ್ಯವಿಲ್ಲವೆಂದು ಹೇಳುತ್ತೇನೆ.

## ಕರಾವಳಿ ತೀರದ ನೈಜ ಸಂಪತ್ತು

ಖನಿಜಸಂಪತ್ತು ಬಹಳ ದೊಡ್ಡದು. ವನ ಸಂಪತ್ತು, ಮೀನಿನ ಸಂಪತ್ತು, ಹೀಗೆ ಎಲ್ಲಾ ಸಂಪತ್ತುಗಳಿಂದ ಕೂಡಿದ ಸಮೃದ್ಧಿಯಾದ ರಾಜ್ಯವೆಂಬ ಮಾತನ್ನು ಕೇಳುತ್ತಿದ್ದೇನೆ. ಕರಾವಳಿಯಲ್ಲಿ ಮೀನಿನ ಸಂಪತ್ತಿದೆ. ಆದರೆ ಇಷ್ಟೆಲ್ಲಾ ಶಬ್ದಗಳನ್ನು ಈ ಸಭೆಯಲ್ಲಿ ತರುತ್ತಾ ಇದ್ದರೂ. ಇದರಲ್ಲಿ ಬೇಕಾದಷ್ಟು ಕೆಲಸ, ಹಣ ಕೊಟ್ಟಿರುವುದು ಸಾಲದು. ಇವತ್ತು ನಮ್ಮ ರಾಜ್ಯ ಎಲ್ಲಾ ಸಂಪತ್ತುಗಳಿಂದ ಕೂಡಿದ್ದರೂ ಕೂಡ ಜನತೆಯ ಶಾಂತತೆ, ಮನಸ್ಸಿನ ಸಂಪತ್ತು ಬೇಕಾಗಿದೆ. ಈ ವಿಷಯದಲ್ಲಿ ಸರ್ಕಾರ ಹೆಚ್ಚಿಗೆ ಗಮನ ತೆಗೆದುಕೊಳ್ಳಬೇಕಾಗಿದೆ.

**ಶ್ರೀ ಟಿ. ಮರಿಯಪ್ಪ** : ಏನು ಮಾಡಬೇಕೆಂಬುದನ್ನು ಹೇಳಿ.

**ಶ್ರೀ ಕೆ. ನಾಗಪ್ಪ ಆಳ್ವ** : ನನಗೆ ಈಗ ಅಷ್ಟಾಗಿ ಕಾಲಾವಕಾಶ ಸಿಕ್ಕಿಲ್ಲ. ಆದ್ದರಿಂದ ಡಿಮಾಂಡ್ಸ್ ಮೇಲೆ ಮಾತನಾಡುವಾಗ ಸಮಯ ಕೊಟ್ಟರೆ ಆಗ ಎಲ್ಲ ವಿಚಾರಗಳ ಮೇಲೆ ವಿಶೇಷವಾಗಿ ಮಾತನಾಡಬೇಕೆಂಬ ಆಶೆಯಲ್ಲಿದ್ದೇನೆ.

ಇನ್ನು ಕರಾವಳಿ ಪ್ರದೇಶದಿಂದ ಒಳನಾಡಿಗೆ ಸಂಪತ್ತಿನಿಂದ ಕೂಡಿದ ರಾಷ್ಟ್ರೀಯ ದಾರಿ ಒಂದು ಹೆದ್ದಾರಿ ಆಗಬೇಕಾಗಿದೆ. ಅದು ಒಂದು ದೊಡ್ಡ ಬಂದರು. ಈ ಬಂದರಿನ ವಿಷಯವಾಗಿ ಮುಖ್ಯಮಂತ್ರಿಗಳಿಂದ ಒಂದು ಆಶ್ವಾಸನೆ ಬಂದಿದೆ. ಮಂಗಳೂರು ಬಂದರು ಸರ್ವೋತ್ಕೃಷ್ಟವಾದ ಬಂದರು ಎಂಬುದಾಗಿ ಇಂಡಿಯಾ ಸರ್ಕಾರದಿಂದ ಕಳೆದ ಐದು ವರ್ಷಗಳಿಂದ ಎಷ್ಟೋ ಆಶ್ವಾಸನೆ ಕೊಟ್ಟರು. ಅದು ಆಗಲಿಲ್ಲ. ಅದು ಕೂಡಲೆ ಆಗಬೇಕು. ಇದರ ಜೊತೆಗೆ ಹಾಸನ–ಮಂಗಳೂರು ರೈಲು, ನಮ್ಮ ಮಲೆನಾಡಿನ ಅಭಿವೃದ್ಧಿ ಇವು ಆಗಬೇಕಾದರೆ ಮತ್ತು ಇಡೀ ಭಾರತದ ಅಭಿವೃದ್ಧಿಯಾಗಬೇಕಾದರೆ ನಮಗೆ ಸರ್ವೋತ್ಕೃಷ್ಟವಾದ ಬಂದರು ಆಗಬೇಕು. ಅದರ ಜೊತೆಗೆ ಹಾಸನ–ಮಂಗಳೂರು ರೈಲ್ವೆ ಜಾಗ್ರತೆಯಾಗಿ ಆಗಬೇಕು. ಎಷ್ಟು ಪ್ರಾಮುಖ್ಯತೆಯನ್ನು ಹಾಸನ–ಮಂಗಳೂರು ರೈಲು ಮಾರ್ಗ ಹಾಕುವುದಕ್ಕೂ ಕೊಡಬೇಕು. ಅಂತಹ ಒಂದು ಒತ್ತಾಯ ಕೇಂದ್ರ ಸರ್ಕಾರದ ಮೇಲೆ ಬೀಳುವುದು ಅಗತ್ಯವಿದೆ. ಅದಕ್ಕಾಗಿ ನಮ್ಮ ಸರ್ಕಾರದವರು ಹೆಚ್ಚು ಕೆಲಸ ಮಾಡಬೇಕಾಗುತ್ತದೆ.

ಇನ್ನು ಮಲೆನಾಡು ಡೆವಲಪ್‌ಮೆಂಟ್ ಬೋರ್ಡ್ ವಿಷಯವಾಗಿ ಪ್ರತ್ಯೇಕವಾಗಿ ಯಾವ ಮಾತೂ ಬಂದಿಲ್ಲ. ಮಲೆನಾಡು ಸಮೃದ್ಧಿಯಾದರೆ ಇಡೀ ದೇಶದ ಸಂಪತ್ತು ಹೆಚ್ಚಲಿಕ್ಕೆ ನಿಗಾ ತೆಗೆದುಕೊಂಡು ಜನರಿಗೆ ಎದ್ದು ಕಾಣುವಂತಹ ಕೆಲವು ಕೆಲಸಗಳನ್ನು ಮಾಡಬೇಕಾದರೆ ನಾನಾ ಯೋಜನೆಗಳನ್ನು ಮುಂದುವರೆಸಬೇಕೆಂದು ಕೇಳಿಕೊಳ್ಳುತ್ತೇನೆ.

## ಜನಾರೋಗ್ಯ ವ್ಯವಸ್ಥೆ ಹೇಗಿರಬೇಕು?

ಇನ್ನು ಜನಾರೋಗ್ಯಕ್ಕೆ ಸಂಬಂಧಪಟ್ಟ ವಿಷಯದಲ್ಲಿ ನಾನು ಹೆಲ್ತ್ ಡಿಮಾಂಡ್ ಚರ್ಚೆ ಕಾಲದಲ್ಲಿ ಸ್ವಲ್ಪ ಉದ್ದವಾಗಿ ಭಾಷಣ ಮಾಡಬೇಕೆಂದಿದ್ದೇನೆ. ಮುಖ್ಯವಾಗಿ ಆರೋಗ್ಯ ಇಲಾಖೆಯಲ್ಲಿ ಡಾಕ್ಟರುಗಳು ಹೆಚ್ಚಾಗಬೇಕು. ಈ ಇಲಾಖೆಯ ಬಗ್ಗೆ ಹೆಚ್ಚಿನ ಪ್ರಾಮುಖ್ಯತೆ ಕೊಡಬೇಕು.

ಫ್ಯಾಮಿಲಿ ಪ್ಲಾನಿಂಗ್ ವಿಷಯದಲ್ಲಿ ಒಂದು ಆಜ್ಞೆ ಜಾರಿಯಲ್ಲಿದೆ. ಇದರಲ್ಲಿ ಮಿತಸಂತತಿ ಪ್ರಚಾರ ವಿಷಯವಾಗಿ ಹೆಚ್ಚಿಗೆ ಬಡವರ ಮಟ್ಟಿಗೆ ಮಾಡಿ, ಅವರು ಹೆಚ್ಚಿನ ಪ್ರಯೋಜನ ಪಡೆದುಕೊಳ್ಳುವಂತೆ ಮಾಡುವುದು ಅಗತ್ಯವಿದೆ. ನನ್ನ ಮಾನ್ಯ ಸ್ನೇಹಿತರಾದ ಶ್ರೀ ಶಿವಪ್ಪನವರು ಈ ಬಗ್ಗೆ ಕೆಲವು ಮಾತುಗಳನ್ನಾಡಿದರು. ನನಗೆ ಅದರ ಬಗ್ಗೆ ಬಹಳ ಬೇಸರವಾಗಿದೆ. ಅವರು ಒಳ್ಳೆ ಭಾಷಣಕಾರರು, ಒಳ್ಳೆಯ ಅನುಭವಸ್ಥರು, ಬುದ್ಧಿವಂತರು, ಯಾವ ವಿಚಾರವನ್ನೂ ತಿಳಿಯದೇ

ಮಾತನಾಡುವವರಲ್ಲ. ಈ ಮಿತ ಸಂತಾನ ಪದ್ಧತಿ ಈ ಲೋಕದ ಅನೇಕ ದೇಶಗಳಲ್ಲಿ ಇರುವುದು ಮಾತ್ರವೇ ಅಲ್ಲ. ಅದು ನಮ್ಮ ನೆರೆಹೊರೆ ಪ್ರದೇಶಗಳಲ್ಲಿಯೂ ಇದೆ. ಅಂತಾದ್ದರಲ್ಲಿ ಅವರು ಏನೂ ತಿಳಿಯದೆ ಯಾರೋ ಹೇಳಿದ ಮಾತುಗಳನ್ನು ಕೇಳಿ ಇಲ್ಲಿ ಕೆಲವು ಅಲ್ಪ ಮಾತುಗಳಿಂದ ಅವರ ಒಂದು ಸಣ್ಣತನವನ್ನು ತೋರಿಸಿದ್ದಾರೆ. ಬೊಂಬಾಯಿಯಲ್ಲಿ ಅನೇಕ ವರ್ಷಗಳ ಆಡಳಿತದ ಅನುಭವವನ್ನು ಪಡೆದು ಈ ಆರೋಗ್ಯ ಇಲಾಖೆಯಲ್ಲಿಯೇ ಹೆಚ್ಚಿನ ಅನುಭವವನ್ನು ಪಡೆದಿರುವ ನಮ್ಮ ಆರೋಗ್ಯ ಮಂತ್ರಿಗಳಾದ ಶ್ರೀಮಾನ್ ಡಾ॥ ಕೆ. ಹೆಗ್ಗಡೆಯವರು ಇಲ್ಲಿ ಇದ್ದಾರೆ. ಅವರು ಎಲ್ಲಾ ವಿಚಾರಗಳನ್ನು ತಿಳಿದು ಮಾಡಿದ್ದಾರೆ. ಇವೊತ್ತು ಆರ್ಡಿನರಿ ಡಾಕ್ಟರಾಗಿರುವವರು ಅವರ ಸೇವಾ ಬುದ್ಧಿಯಿಂದ ಅವರ ಅನುಭವದ ಪ್ರಯೋಜನವನ್ನು ಜನತೆಗೆ ಸಿಗುವಂತೆ ಮಾಡಿ ಜನರ ಪ್ರೀತಿ, ವಿಶ್ವಾಸವನ್ನು ಗಳಿಸುವುದಕ್ಕೆ ತಕ್ಕ ವ್ಯವಸ್ಥೆಯನ್ನು ಸರ್ಕಾರದವರು ಮಾಡಬೇಕೆಂದು ನಾನು ಹೇಳುತ್ತೇನೆ.

### ಇಲಾಖಾ ನ್ಯೂನತೆಗಳನ್ನು ಸರಿಪಡಿಸಿ

ಕಡೆಯದಾಗಿ ಇನ್ನು ಪಂಚಾಯಿತಿ ಮತ್ತು ಕೋ–ಆಪರೇಟಿವ್ ಸೊಸೈಟಿ ಬಿಲ್ಲನ್ನು ಇದೇ ಅಧಿವೇಶನದಲ್ಲಿ ಪಾಸ್ ಆಗುವಂತೆ ವ್ಯವಸ್ಥೆ ಮಾಡಬೇಕು. ಕೇಂದ್ರ ವೇತನದ ಸಮಿತಿ ಬಂದಮೇಲೆ ವೇತನ ಮಟ್ಟ ಸರಿಯಾಗುತ್ತದೆ ಎಂದು ಹೇಳುತ್ತಾರೆ. ಕೆಲವು ಕಡೆಗಳಲ್ಲಿ ನಿಜವಾಗಿ certain anomalies ಇವೆ. ಅವನ್ನು ಮಾತ್ರ ಹೇಳಬಯಸುತ್ತೇನೆ. ವಿದ್ಯಾ ಇಲಾಖೆಯಲ್ಲಿ ತುಂಬಾ ಕೆಲಸ ಮಾಡಿದ್ದಾರೆ. ಆದರೆ ವೇತನದಲ್ಲಿರತಕ್ಕ ವ್ಯತ್ಯಾಸದ ಬಗ್ಗೆ ಒಂದು ಉದಾಹರಣೆಯನ್ನು ಕೊಡುತ್ತೇನೆ. ಟ್ರೈನ್ಡ್ ಅಂಡ್ ಅನ್‌ಟ್ರೈನ್ಡ್ ಗ್ರಾಜುಯೇಟ್ಸ್ ವಿಷಯದಲ್ಲಿ 20 ರೂಪಾಯಿಗಳ ಹೆಚ್ಚು ಕಡಿಮೆ ಇದೆ. ಎಸ್.ಎಸ್.ಎಲ್.ಸಿ. ಟ್ರೈನ್ಡ್ ಅಂಡ್ ಅನ್‌ಟ್ರೈನ್ಡ್, ಅವರ ಸಂಬಳದಲ್ಲಿ ಆ ರೀತಿ ವ್ಯತ್ಯಾಸ ಇದ್ದರೂ ಚಿಂತೆ ಇಲ್ಲ, ಆದರೆ ಅವರು ಒಂದು ಮಟ್ಟಕ್ಕೆ ಬರಬೇಕಾದರೆ ಅವರ ಸಂಬಳದ ಮಟ್ಟದಲ್ಲಿ ವಿಪರೀತವಾದ ವ್ಯತ್ಯಾಸವಿರಬಾರದು. ಇದೇ ರೀತಿಯಲ್ಲಿ ಇನ್ನೂ ಅನೇಕ ಇಲಾಖೆಗಳಲ್ಲಿ ಇಂತಹ ನ್ಯೂನತೆಗಳಿವೆ. ಅವನ್ನು ಸರಿಮಾಡಿಕೊಳ್ಳಬೇಕು ಎಂಬುದಾಗಿ ಸರ್ಕಾರದವರನ್ನು ಕೇಳಿಕೊಂಡು ನನಗೆ ಮಾತನಾಡಲು ಅವಕಾಶವನ್ನು ಕಲ್ಪಿಸಿ ಕೊಟ್ಟಂತಹ ಅಧ್ಯಕ್ಷರಿಗೆ ವಂದನೆಗಳನ್ನು ಅರ್ಪಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ಆಯವ್ಯಯ ಅಂದಾಜು–ಜನಾರೋಗ್ಯ ಇಲಾಖಾ ಬೇಡಿಕೆಗಳು

**23ನೇ ಮಾರ್ಚ್ 1959**

**ಶ್ರೀ ಡಾ॥ ಕೆ. ನಾಗಪ್ಪ ಆಳ್ವ (ಪಾಣೆ ಮಂಗಳೂರು):** ಸ್ವಾಮಿ, ಮಾನ್ಯ ಸಭಾಧ್ಯಕ್ಷರೇ, ವೈದ್ಯಕೀಯ ಮತ್ತು ಜನಾರೋಗ್ಯಗಳಿಗೆ ಅನುದಾನಗಳ ಬೇಡಿಕೆಗಳಿಗೆ ಬೆಂಬಲಿಸುವಾಗ ನಾನು ಕೆಲವೊಂದು ಅಭಿಪ್ರಾಯಗಳನ್ನು ಮತ್ತು ನನ್ನ ಸಲಹೆಗಳನ್ನು ಕೊಡಲು ಬಯಸುತ್ತೇನೆ.

**ಶ್ರೀ ಯು. ಎಂ. ಮಾದಪ್ಪ (ಚಾಮರಾಜನಗರ):** ಈಗಾಗಲೇ ಮೂವರು ಸದಸ್ಯರು, ಆಕಡೆ ಮಾತನಾಡಿದ್ದಾರೆ ಮತ್ತು ಒಬ್ಬರೆ ಒಬ್ಬ ಸದಸ್ಯರು ಮಾತ್ರ ಈ ಕಡೆ ಮಾತನಾಡಿದ್ದಾರೆ.

**ಶ್ರೀ ಡಾ॥ ಕೆ. ನಾಗಪ್ಪ ಆಳ್ವ:** ಬೇಡಿಕೆಗಳನ್ನು ಒಂದು ಕೋಟಿ ರೂಪಾಯಿಗಳಿಗೆ ಹೆಚ್ಚಿಸಿದ್ದರೆ, ನಾನು, ಮಾನ್ಯ ಹಣಕಾಸು ಸಚಿವರಿಗೆ ನನ್ನ ವಿಶೇಷ ಧನ್ಯವಾದಗಳನ್ನು ಮತ್ತು ಹೆಚ್ಚಿನ ಅಭಿನಂದನೆಗಳನ್ನು ಸಲ್ಲಿಸಬಹುದಾಗಿತ್ತು. ಕೆಲವು ಲಕ್ಷ ರೂ.ಗಳೊಂದಿಗೆ ಹೆಚ್ಚುವರಿ ಆಯವ್ಯಯ ಏರ್ಪಾಡು ಮಾಡುವುದರ ಬದಲು, ಅವರು ಒಂದು ಕೋಟಿ ರೂಪಾಯಿಗಳ ಕೊರತೆ, ಆಯವ್ಯಯದ ಏರ್ಪಾಡು ಮಾಡಿದ್ದರೂ ಸಹ, ಸದನವು ಅದನ್ನು ಶ್ಲಾಘಿಸುತ್ತಿತ್ತು. ಏಕೆಂದರೆ, ಮುಖ್ಯವಾದ ವಿಷಯಗಳು ಬಿಟ್ಟುಹೋಗಿದೆ ಎಂದು ನನಗೆ ಮನವರಿಕೆಯಾಗಿದೆ. ಅದರ ಬಗ್ಗೆ ನಾನು ಈಗ ಮಾತನಾಡುತ್ತೇನೆ.

## ಸಾಮಾಜಿಕ ಪ್ರಗತಿಗೆ ಜನಾರೋಗ್ಯ ಪೂರಕ

ಪ್ರಜಾಕಲ್ಯಾಣ ರಾಜ್ಯವೇ ನಮ್ಮ ಧ್ಯೇಯ. ನಾವೆಲ್ಲರೂ ಈ ನಿಟ್ಟಿನಲ್ಲಿ ಶ್ರಮಿಸುತ್ತಿದ್ದೇವೆ. ಪ್ರಜಾಕಲ್ಯಾಣ ರಾಜ್ಯವನ್ನು ನಿರ್ಮಾಣ ಮಾಡಲು, ಜನರ ಆರೋಗ್ಯದ ಮಟ್ಟ ಅತ್ಯುತ್ತಮವಾಗಿರಬೇಕಾದುದು ತೀರಾ ಅಗತ್ಯ. ಆರೋಗ್ಯವೇ ಭಾಗ್ಯವೆಂದು ಹೇಳಲಾಗಿದೆ. ಆದರೆ ನಮ್ಮ ಜನರ ಸಾಮಾನ್ಯ ಆರೋಗ್ಯದ ಗುಣಮಟ್ಟಗಳೇನು? ಅದು ತೃಪ್ತಿಕರವಾಗಿಲ್ಲ. ಅನೇಕ ಗಂಟೆಗಳು ಹೊಲಗಳಲ್ಲಿ ಹಾಗೂ ಕಾರ್ಖಾನೆಗಳಲ್ಲಿ ಕಳೆದುಹೋಗುತ್ತದೆ. ಒಬ್ಬ ಭಾರತೀಯನ ಸರಾಸರಿ ಆಯಸ್ಸು ಈ ದಿನ ಮೂವತ್ತು ವರ್ಷಗಳೆಂದು ಅಂದಾಜು ಮಾಡಲಾಗಿದೆ. ಅದು 25 ವರ್ಷಗಳ ಹಿಂದೆ. ಈ ಕ್ಷೇತ್ರದಲ್ಲಿ ಸ್ವಲ್ಪಮಟ್ಟಿಗೆ ಪ್ರಗತಿಯಾಗಿದೆ ಎಂಬುದನ್ನು ಎಲ್ಲರೂ ಒಪ್ಪಬೇಕು. ಜನರ ಆರೋಗ್ಯದ ಗುಣಮಟ್ಟಕ್ಕೂ, ಜನರ ಜೀವನ ಗುಣಮಟ್ಟಕ್ಕೂ ನಿಕಟವಾದ

ಸಂಬಂಧವಿದೆ. ಸ್ವಚ್ಛತೆ ತತ್ವಗಳ ಬಗ್ಗೆ ಅವರಿಗೆ ಇರುವ ತಿಳಿವಳಿಕೆಯ ಜೊತೆಗೆ ಅವರು ಸ್ವಚ್ಛತೆ ಹಾಗೂ ಆರೋಗ್ಯದ ಬಗ್ಗೆ ಒಂದು ಶಿಕ್ಷಣ ಕ್ರಮವನ್ನು ಪಡೆಯಬೇಕು. ಖಾಯಿಲೆ ನಂತರದ ಚಿಕಿತ್ಸೆಗಿಂತ ಅದು ಬರದಂತೆ ನಿರೋಧಿಸುವುದು ಲೇಸು ಎಂಬುದು ವಾಸ್ತವಿಕ ಸಂಗತಿ. ಮುಂಬರುವ ವರ್ಷಗಳಲ್ಲಿ ಔಷಧಗಳ ನಿರೋಧದ ಕಡೆಗೆ ಸಮಾನ ಪ್ರಾಮುಖ್ಯತೆ ಮತ್ತು ಹೆಚ್ಚಿನ ಮಹತ್ವವನ್ನು ನೀಡಬೇಕು. ಜನಾರೋಗ್ಯ ಮತ್ತು ಔಷಧಗಳು ಜೊತೆ ಜೊತೆಯಲ್ಲೇ ನಡೆಯಬೇಕು ಮತ್ತು ಜನರ ಹಿತದೃಷ್ಟಿಯಿಂದ ಈ ಎರಡು ವಿಭಾಗಗಳು ಎಷ್ಟರಮಟ್ಟಿಗೆ ಮತ್ತು ಯಾವ ಮಟ್ಟದವರೆಗೆ ಮತ್ತು ಯಾವ ಹಂತದವರೆಗೆ ಒಟ್ಟಿಗೆ ಕೆಲಸ ಮಾಡಬೇಕು ಎಂಬುದನ್ನು ಅರಿಯುವುದು ಸಹ ಅತ್ಯಾವಶ್ಯಕ. ಸಾವಿನ ಸಂಖ್ಯೆ ಇಳಿಮುಖವಾಗಿದೆ. ಆದರೆ ಜನನ ಪ್ರಮಾಣಗಳು ಹೆಚ್ಚಿವೆ. ಗರ್ಭಿಣಿಯರ ಮತ್ತು ಶಿಶು ಮರಣಗಳ ಪ್ರಮಾಣ ಕಡಿಮೆಯಾಗಿದೆ. ಇದರ ಪರಿಣಾಮವಾಗಿ ಜನಸಂಖ್ಯೆ ಹೆಚ್ಚಾಗಿದೆ. ವ್ಯವಹಾರಗಳ ಪರಿಸ್ಥಿತಿಯನ್ನು ಪರಿಗಣಿಸಿದರೆ, ಜನಸಂಖ್ಯೆ ಹೆಚ್ಚಿದ ಹಾಗೆಲ್ಲ ಜನರ ತೊಂದರೆಗಳೂ ಸಹ ಹೆಚ್ಚುತ್ತಿವೆ ಮತ್ತು ಜನರ ಬೇಡಿಕೆಯೊಂದಿಗೆ ಹೋಲಿಸಿದರೆ, ನಾವು ಕೊಡುತ್ತಿರುವ ವೈದ್ಯಕೀಯ ಮತ್ತು ಇತರ ನೆರವು ವಾಸ್ತವವಾಗಿ ತೀರಾ ಕಡಿಮೆ. ಮೊದಲನೆಯದಕ್ಕೆ ಮೊದಲ ಸ್ಥಾನ ಎಂಬುದು ಸರ್ಕಾರದ ನೀತಿ ಆಗಬೇಕು. ಸೋಂಕು ಮತ್ತು ಅಂಟುರೋಗಗಳನ್ನು ನಿಯಂತ್ರಿಸುವುದಲ್ಲ, ಅದನ್ನು ನಿರ್ಮೂಲನ ಮಾಡಬೇಕು. ಇದಕ್ಕೆ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ, ಅದು ನಮಗೆ ಗೊತ್ತು, ಆದರೆ ಅದೇ ವೇಳೆಯಲ್ಲಿ, ಅದು ತೀವ್ರಗತಿಯಲ್ಲಿ ಸಾಗುತ್ತಿಲ್ಲ. ಮಲೇರಿಯ, ಫಿಲೇರಿಯಾ, ಡಿಫ್ತೀರಿಯ, ಡೀಸೆಂಟರಿ, ಕಾಲರಾ, ಸಿಡುಬು, ಕ್ಷಯರೋಗ, ಕುಷ್ಠರೋಗ, ಗೊನೇರಿಯ ಮತ್ತು ಇತರ ವೈರಾಣು ರೋಗಗಳು, ಇವುಗಳನ್ನು ಧೈರ್ಯದಿಂದ ಎದುರಿಸಬೇಕು. ಎಲ್ಲರಿಗೂ ಚುಚ್ಚುಮದ್ದು ಹಾಕಿಸಬೇಕು. ಜಾಹೀರು ಮತ್ತು ಪ್ರಚಾರ ವ್ಯಾಪಕವಾಗಿರಬೇಕು, ಹಾಗೂ ಅದನ್ನು ತೀವ್ರಗತಿಯಲ್ಲಿ ಮಾಡಬೇಕು. ಆ ಬಗೆಯ ಪ್ರಚಾರವನ್ನು ನಾವು ಇಂದು ಮಾಡುತ್ತಿಲ್ಲ ಮತ್ತು ನಾವು ಈಗ ಮಾಡುತ್ತಿರುವ ಪ್ರಚಾರ ಏನೇನೂ ಸಾಲದು. ಆರೋಗ್ಯ ಶಿಕ್ಷಣವು ತೃಪ್ತಿದಾಯಕವಾಗಬೇಕಾದರೆ ಮತ್ತು ಜನರಿಗೆ ಅನುಕೂಲವಾಗಬೇಕಾದರೆ, ಅದು ವ್ಯಾಪಕವಾಗಿರಬೇಕು ಮತ್ತು ಪರಿಣಾಮಕಾರಿಯಾಗಿರಬೇಕು. ಆಸ್ಪತ್ರೆಗಳು ನಗರ ಅಥವಾ ಗ್ರಾಮೀಣ ಆಸ್ಪತ್ರೆಗಳಾಗಿರಲಿ ಅವು ಒಳ್ಳೆಯ ಸಿಬ್ಬಂದಿಯನ್ನು ಹೊಂದಿರಬೇಕು. ಕೆಲವೊಂದು ಕ್ಷೇತ್ರಗಳಲ್ಲಿ ತಜ್ಞತೆ ಬಹಳ ಅತ್ಯಾವಶ್ಯಕವಾಗಿದೆ ಮತ್ತು ವೈದ್ಯಕೀಯ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಬೇಕು. ಚೆನ್ನಾಗಿ ಗಾಳಿ ಬೆಳಕು ಬರುವಂತಹ ಮನೆಗಳಿರಬೇಕು ಮತ್ತು ಸಂರಕ್ಷಿತ ನೀರು ಸರಬರಾಜು ಅತ್ಯಾವಶ್ಯಕವಾಗಿವೆ. ಇಂದು ಸಂರಕ್ಷಿತ ನೀರಿನ

ಸರಬರಾಜಿನ ಸ್ಥಿತಿ ಏನಾಗಿದೆ ಮತ್ತು ಒಳಚರಂಡಿ ವ್ಯವಸ್ಥೆ ಹೇಗಿದೆ ಎಂಬುದರ ಬಗ್ಗೆ ನಾನು ಕೇಳಬಯಸುತ್ತೇನೆ. ಇದಕ್ಕಾಗಿ ಕೇಂದ್ರ ಸರ್ಕಾರವು ನೀಡಿದ ಹಣದಲ್ಲಿ ಎಷ್ಟು ಹಣವನ್ನು ಬಳಸಲಾಗಿದೆ ಎಂಬುದನ್ನು ನಾನು ತಿಳಿಯಬಯಸುತ್ತೇನೆ. ಹಿಂದೆ, ಒಳಚರಂಡಿ ಯೋಜನೆಯಡಿಯಲ್ಲಿ ಕೇಂದ್ರವು ನೀಡಿದ ಮೊತ್ತದಲ್ಲಿ ಶೇ. 40ರಿಂದ 50ರಷ್ಟು ಮೊತ್ತವನ್ನು ರಾಜ್ಯಗಳು ಬಳಸಿಕೊಂಡಿಲ್ಲವೆಂಬುದನ್ನು ನೆನ್ನೆ ಮೊನ್ನೆಯ ದಿನಪತ್ರಿಕೆಯಲ್ಲಿ ನಾನು ಓದಿದ್ದೇನೆ. ಒಳಚರಂಡಿ, ನೀರು ಸರಬರಾಜು ಮತ್ತು ಕೊಳಚೆ ನಿರ್ಮೂಲನದ ಸಂಬಂಧದಲ್ಲಿ ರಾಜ್ಯವು ಏನು ಸುಧಾರಣೆ ಮಾಡಿದೆ? ವಿಶ್ವ ಆರೋಗ್ಯ ಸಂಸ್ಥೆ, ಯುನೆಸ್ಕೋ ಮತ್ತು ಇತರ ಸಂಸ್ಥೆಗಳು ನೀಡಿದ ಮೊತ್ತವನ್ನು ಸರಿಯಾಗಿ ಬಳಕೆ ಮಾಡಿಕೊಳ್ಳುತ್ತಿಲ್ಲ ಅಥವಾ ಪೂರ್ಣಪ್ರಮಾಣದವರೆಗೆ ಬಳಕೆಯಾಗುತ್ತಿಲ್ಲ. ಯೋಜನೆಗಳ ಬಗ್ಗೆ ನಾವು ಸಾಕಷ್ಟು ಭಾಷಣಗಳನ್ನು ಮಾಡಿದರೂ ಸಹ ಅವುಗಳನ್ನು ಸರಿಯಾಗಿ ಕಾರ್ಯರೂಪಕ್ಕೆ ತಂದಿಲ್ಲ. ಸಂಶೋಧನಾ ಕೆಲಸಕ್ಕೆ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಬೇಕು. ರಾಜ್ಯದಲ್ಲಿ ಲಸಿಕೆ ತಯಾರಿಕೆಯು ತೃಪ್ತಿಕರವಾಗಿಲ್ಲ ಮತ್ತು ಆಹಾರ ವಿಶ್ಲೇಷಣೆಗಳಿಗೆ ಯಾವುದೇ ಪ್ರಯೋಗ ಶಾಲೆಗಳಿಲ್ಲ. ನಮ್ಮ ಜನರ ಆರೋಗ್ಯದ ಗುಣಮಟ್ಟ ಕುಸಿಯಲು ಆಹಾರ ಪದಾರ್ಥಗಳ ಕಲಬೆರಕೆಯೇ ಬಹಳಮಟ್ಟಿಗೆ ಕಾರಣವಾಗಿದೆ. ಜನಾರೋಗ್ಯ ಅಧಿನಿಯಮ ಇದೆ ಆದರೆ ಅದನ್ನು ಜಾರಿಗೊಳಿಸಿಲ್ಲ. ಆದರೆ ಅದೊಂದು ರೀತಿಯ ನಿಷೇಧ ಅಧಿನಿಯಮವಾಗಿದೆ. ಈ ಅಧಿನಿಯಮವನ್ನು ಜಾರಿಗೊಳಿಸಬೇಕು ಮತ್ತು ಆಹಾರ ಪದಾರ್ಥಗಳ ಕಲಬೆರಕೆಯನ್ನು ನಿರ್ದಾಕ್ಷಿಣ್ಯವಾಗಿ ಹಿಡಿದುಹಾಕಬೇಕು ಹಾಗೂ ಕಲಬೆರಕೆಯ ವೃತ್ತಿ ನಡೆಸುವ ಜನರನ್ನು ತೀವ್ರವಾಗಿ ಶಿಕ್ಷಿಸಬೇಕು.

## ಬೆಂಗಳೂರಿಗೆ ಶುದ್ಧ ನೀರು

ನಾನು, ಬೆಂಗಳೂರಿನ ಸ್ಥಿತಿಗತಿಯ ಬಗ್ಗೆ ಕೆಲವು ಮಾತುಗಳನ್ನು ಆಡಲು ಇಚ್ಛಿಸುತ್ತೇನೆ. ಇಲ್ಲಿ ಒಳಚರಂಡಿ ವ್ಯವಸ್ಥೆ ಇದೆ. ಆದರೆ ಅದು ತೃಪ್ತಿಕರವಾಗಿ ಇಲ್ಲವೇ ಇಲ್ಲ. ನೀರು ಸರಬರಾಜು ತೀರಾ ಕಡಿಮೆ ಆದರೆ ಜನಸಂಖ್ಯೆ ಹೆಚ್ಚುತ್ತಲೇ ಹೋಗ್ತಾ ಇದೆ. ಕಳೆದ ಐದು ವರ್ಷಗಳ ಅವಧಿಯಲ್ಲಿ, ಜನಸಂಖ್ಯೆ ಮೂರುಪಟ್ಟು ಹೆಚ್ಚಾಗಿದೆ. ಆಸ್ಪತ್ರೆಗಳಲ್ಲಿ ಒಳರೋಗಿಗಳ ಮತ್ತು ಹೊರರೋಗಿಗಳ ಸಂಖ್ಯೆ ಹೆಚ್ಚಾಗುತ್ತಿದೆ. ಅದು ಮೂರರಷ್ಟು ಹೆಚ್ಚಿದೆ. ಅರ್ಧದಷ್ಟು ಜನರು ಅದರಲ್ಲೂ ವಿಶೇಷವಾಗಿ ವಿದ್ಯಾರ್ಥಿ ಜನಸಂಖ್ಯೆಯು ಯಾವುದೋ ಗ್ಯಾಸ್ಟ್ರಿಕ್ ಸಮಸ್ಯೆಯಿಂದ ಬಳಲುತ್ತಿರುವುದನ್ನು ನಾನೇ ಖುದ್ದಾಗಿ ನೋಡಿದ್ದೇನೆ. ಈ ರೋಗಕ್ಕೆ ಆಹಾರ ಕಲಬೆರಕೆಯೇ ಕಾರಣ. ನೀರು ಪೂರೈಕೆ ಸ್ಥಿತಿಯು ತೃಪ್ತಿಕರವಾಗಿಲ್ಲ ಹಾಗೂ ನೀರಿನಲ್ಲಿ ಕ್ಲೋರಿನ್ ಅಂಶವೂ

ಸಹ ತೃಪ್ತಿಕರವಾಗಿಲ್ಲವೆಂಬುದನ್ನು ನಾನು ಧೈರ್ಯದಿಂದ ಹೇಳುತ್ತೇನೆ. ನೀರಿನಲ್ಲಿ ಕ್ಲೋರಿನ್ ಅಂಶವಿರುವುದಿಲ್ಲ ಅಥವಾ ಕೆಲವು ಬಾರಿ ಅದು ತೀರಾ ಹೆಚ್ಚಾಗಿರುತ್ತದೆ ಮತ್ತು ಅದು ಜನರ ಸ್ವಾಸ್ಥ್ಯವನ್ನು ಬಹುಮಟ್ಟಿಗೆ ಹಾಳು ಮಾಡುತ್ತದೆ.

## ಅಸ್ಪತ್ರೆಗಳನ್ನು ಸುವ್ಯವಸ್ಥಿತವಾಗಿರಿಸಿ

ನಾನೀಗ ಆಸ್ಪತ್ರೆಯ ವಿಷಯಕ್ಕೆ ಬರುತ್ತೇನೆ. ಎಲ್ಲಿ ನೋಡಿದರೂ, ಉತ್ತಮ ಸಿಬ್ಬಂದಿ ವರ್ಗ ಇಲ್ಲ ಅನ್ನುವುದಷ್ಟೇ ಅಲ್ಲ, ಆದರೆ, ಅದನ್ನು ಸರಿಯಾಗಿ ವ್ಯವಸ್ಥೆ ಮಾಡಿಲ್ಲ. ಕೆಲವು ಆಸ್ಪತ್ರೆಗಳಲ್ಲಿ ಸಾಧನ–ಸಾಮಗ್ರಿಗಳು ಸಮರ್ಪಕವಾಗಿಲ್ಲ. ಇಲ್ಲಿ ಬೋಧನಾ ಸಂಸ್ಥೆಗಳಿದ್ದರೂ, ಅದರಲ್ಲಿನ ಅನುಕೂಲಗಳು ತೃಪ್ತಿಕರವಾಗಿಲ್ಲ. ತಜ್ಞರೊಂದಿಗೆ ವಿಶೇಷ ಘಟಕಗಳು ಇರುವುದು ಅತ್ಯಾವಶ್ಯಕ ತುರ್ತು ಸಮಯಗಳಲ್ಲಿ ಔಷಧಗಳನ್ನು ಮತ್ತು ಸಾಮಗ್ರಿಗಳನ್ನು ಖರೀದಿಸಲು ಸೂಪರಿಂಟೆಂಡೆಂಟರಿಗೆ ಮತ್ತು ಜಿಲ್ಲಾ ವೈದ್ಯಕೀಯ ಅಧಿಕಾರಿಗಳಿಗೆ ವಿಶೇಷ ಅಧಿಕಾರಗಳು ಅವಶ್ಯವಾಗಿರುತ್ತವೆ. ಪ್ರಸ್ತುತ ವೈದ್ಯಕೀಯ ಸೇವೆಗಳ ನಿರ್ದೇಶಕರು, ನಗರದಲ್ಲಿ ಎರಡು ದೊಡ್ಡ ಆಸ್ಪತ್ರೆಗಳಿಗೆ ಭೇಟಿ ನೀಡಿ ಮೊದಲನೆಯದಾಗಿ ರೋಗಿಗಳ ದಟ್ಟಣೆಯ ಬಗ್ಗೆ ಇರತಕ್ಕ ತೊಂದರೆಗಳು ಮತ್ತು ಸಮಸ್ಯೆಗಳು ಅವರಿಗೆ ನೀಡುವ ಚಿಕಿತ್ಸೆ ಮತ್ತು ವೈದ್ಯರಿಗೆ ಇರತಕ್ಕ ಅನಾನುಕೂಲಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಿ ಈ ಆಸ್ಪತ್ರೆಗಳಲ್ಲಿ ಸುಮಾರು ಆರರಿಂದ ಎಂಟು ಗಂಟೆಗಳ ಕಾಲ ಕಳೆದಿದ್ದಾರೆ ಎಂಬುದನ್ನು ಹೇಳಲು ನನಗೆ ಅತ್ಯಂತ ಸಂತೋಷವಾಗುತ್ತದೆ. ಅವರು ಬಹಳ ಅತ್ಯುತ್ತಮವಾದ ಸಲಹೆಗಳನ್ನು ನೀಡಿದ್ದಾರೆಂಬುದು ನನಗೆ ತಿಳಿದಿದೆ. ಅಂತಹ ಸಲಹೆಗಳನ್ನು ಜಾರಿಗೊಳಿಸಬೇಕು. ಈ ಸಂಬಂಧದಲ್ಲಿ ಕಳೆದ ಅಧಿವೇಶನದಲ್ಲಿ ಈ ಆಸ್ಪತ್ರೆಗಳ ಮತ್ತು ವೈದ್ಯಕೀಯ ಶಿಕ್ಷಣದ ಕೆಲಸ–ಕಾರ್ಯಗಳನ್ನು ಗಮನಿಸಲು ಏಕಸದಸ್ಯ ಸಮಿತಿ ಅಥವಾ ದ್ವಿಸದಸ್ಯ ಸಮಿತಿಯನ್ನು ಸ್ಥಾಪಿಸಲಾಗುವುದೆಂಬ ಭರವಸೆ ನೀಡಿದ್ದುದು ನನಗೆ ನೆನಪಿದೆ. ಅದರ ಬಗ್ಗೆ ಏನಾಯಿತೆಂದು ನಾನು ತಿಳಿದುಕೊಳ್ಳಬಹುದೇ ಸ್ಥಳೀಯ ನಿಧಿ ಆಸ್ಪತ್ರೆಗಳನ್ನು ಮತ್ತು ಔಷಧಾಲಯಗಳನ್ನು ಸಾಧ್ಯವಾದಷ್ಟು ಬೇಗನೆ ಸರ್ಕಾರವು ಸ್ವಾಧೀನಕ್ಕೆ ತೆಗೆದುಕೊಳ್ಳಬೇಕು. ಒಳರೋಗಿಗಳ ಮತ್ತು ಹೊರರೋಗಿಗಳ ಪರಿಸ್ಥಿತಿಗಳನ್ನು ನಾವು ನೋಡಿದರೆ, ಅರ್ಧದಷ್ಟು ಜನ ಪೌಷ್ಟಿಕ ಆಹಾರದ ಕೊರತೆ ಮತ್ತು ವಿಟಮಿನ್ ಕೊರತೆಗಳಿಂದ ಬಳಲುತ್ತಿದ್ದಾರೆ ಎಂದು ನಮಗೆ ತಿಳಿಯುತ್ತದೆ. ಅನೇಕ ಜನ ಅವರಿಗೆ ಖಾಯಿಲೆ ಗುಣಮುಖವಾಗಿದ್ದರೂ ಸಹ, ಅವರು ಮನೆಗೆ ಹೋಗಲು ತಯಾರಿರುವುದಿಲ್ಲ, ಏಕೆಂದರೆ ಆಸ್ಪತ್ರೆಗಳಲ್ಲಿ ಅವರಿಗೆ ದೊರೆಯುವ ಆಹಾರ ಅವರು ಹೊರಗಡೆ ತೆಗೆದುಕೊಳ್ಳುವ ಆಹಾರಕ್ಕಿಂತ ಹೆಚ್ಚು ಉತ್ತಮವಾಗಿರುತ್ತದೆ.

ಇದು ಒಟ್ಟಾರೆ ಇನ್ನೊಂದು ಸಮಸ್ಯೆ. ವೈದ್ಯಕೀಯ ಸಮಸ್ಯೆ ಸಾಮಾಜಿಕ ಸಮಸ್ಯೆಯಾಗುತ್ತದೆ ಹಾಗೂ ನಮ್ಮ ಶಿಶು ಪ್ರಜಾಪ್ರಭುತ್ವದಲ್ಲಿ ಅದು ರಾಜಕೀಯ ಸಮಸ್ಯೆಯೂ ಆಗಿದೆ. ಆದ್ದರಿಂದ ಆದಷ್ಟು ಬೇಗನೆ ಈ ಬಗ್ಗೆ ಕ್ರಮ ತೆಗೆದುಕೊಳ್ಳುವುದು ತೀರಾ ಅಗತ್ಯ. ಇದರ ಬಗ್ಗೆ ಒಂದು ಸಮೀಕ್ಷೆ ನಡೆಸಬೇಕು ಮತ್ತು ಹಲವಾರು ಕ್ಷೇತ್ರಗಳಲ್ಲಿ ಬೇಡಿಕೆಗಳನ್ನು ಭರಿಸಲು ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳಬೇಕು. ಬೆಂಗಳೂರಿನ ಎರಡು ಆಸ್ಪತ್ರೆಗಳಲ್ಲಿ ರೋಗಿಗಳ ಪ್ರಮಾಣ ಎಷ್ಟಿದೆಯೆಂದರೆ, ಮಲ್ಲೇಶ್ವರದಲ್ಲಿ ಇನ್ನೊಂದು ಆಸ್ಪತ್ರೆಯ ಅವಶ್ಯಕತೆ ಬಹಳ ಇದೆ. ಮಲ್ಲೇಶ್ವರದ ಈ ಆಸ್ಪತ್ರೆಯು ಕನಿಷ್ಠ 200ರಿಂದ 300 ಹಾಸಿಗೆಗಳನ್ನು ಹೊಂದಿರಲೇಬೇಕು. ಈ ಸಂಬಂಧದಲ್ಲಿ, ನಾನು ಒಂದು ಸಲಹೆಯನ್ನು ಕೊಡಬಹುದು. ನೀಡಲಾದ ದೇಣಿಗೆಗಳನ್ನು ಬಹುಮಟ್ಟಿಗೆ ಬಳಸಿಕೊಂಡಿರುವುದಿಲ್ಲ. ಬರಹಗಾರರಿದ್ದಾರೆ; ಬಹಳ ಒಳ್ಳೆಯ ಮನುಷ್ಯರು ಪ್ರಭಾವಿ ವ್ಯಕ್ತಿಗಳು ಇದ್ದಾರೆ. ಅವರು, ಈ ಸಂಸ್ಥೆಗಳಿಗೆ ಜನರು ದೇಣಿಗೆಗಳನ್ನು ನೀಡುವಂತೆ ತಮ್ಮ ಅತ್ಯುನ್ನತ ಪ್ರಭಾವವನ್ನು ಬೀರಲು ಪ್ರಯತ್ನ ಮಾಡಬೇಕು. ಇದರಿಂದ ಲಕ್ಷಾಂತರ ರೂಪಾಯಿಗಳನ್ನು ಸಂಗ್ರಹಿಸಬಹುದೆಂಬ ಭರವಸೆ ನನಗಿದೆ. ಆ ರೀತಿಯಲ್ಲಿ ನಾವು ಈ ವೈದ್ಯಕೀಯ ಸಂಸ್ಥೆಗಳನ್ನು ಕಟ್ಟಬಹುದು. ಮಲ್ಲೇಶ್ವರದಲ್ಲಿ ಸಾಧ್ಯವಾದಷ್ಟು ಬೇಗನೆ ಒಂದು ಆಸ್ಪತ್ರೆಯನ್ನು ಸ್ಥಾಪಿಸಬೇಕು.

ನಂತರ, ವೈದ್ಯರ ವೇತನದ ಉಪಲಬ್ಧಿಗಳು. ಎಂಬಿಬಿಎಸ್ ವೈದ್ಯನ ಪ್ರಾರಂಭಿಕ ವೇತನ ತಿಂಗಳಿಗೆ 200 ರೂ.ಗಳಿಗಿಂತ ಕಡಿಮೆ ಇರಬಾರದು ಮತ್ತು ಎಲ್.ಎಂ.ಪಿ. ವೈದ್ಯನ ವೇತನ ತಿಂಗಳಿಗೆ 150 ರೂ.ಗಳಿಗಿಂತ ಕಡಿಮೆ ಇರಬಾರದು. ವಾಸ್ತವವಾಗಿ ಅರ್ಜಿಗಳನ್ನು ಕರೆದರೆ ವೈದ್ಯರುಗಳಿಗೆ ಏನೂ ಕೊರತೆ ಇಲ್ಲ. ಆದರೆ ಎಲ್ಲೋ ಏನೋ ತೊಂದರೆಯಾಗಿದೆ. ಆಯ್ಕೆಯ ಸಂದರ್ಭದಲ್ಲಿಯೂ ಸಹ ಸುತ್ತು ಬಳಸಿ ಅರ್ಜಿಯನ್ನು ಕರೆಯುವುದು ನಂತರ ಆಯ್ಕೆ ಮಾಡುವುದು, ಈ ರೀತಿ ಏತಕ್ಕೆ? ಅರ್ಹ ವೈದ್ಯರುಗಳಿದ್ದು, ಅವರು ಸಮರ್ಥರಾಗಿದ್ದರೆ, ಅವರನ್ನು ಆಯ್ಕೆ ಮಾಡಬೇಕು. ಅವರ ವೇತನವನ್ನು ಹೆಚ್ಚಿಸುವುದು ಅತ್ಯಾವಶ್ಯಕವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಕೆಲಸ ಮಾಡುವವರಿಗೆ ಸರ್ಕಾರವು ವೃತ್ತಿಯೇತರ ಭತ್ಯೆ ಮತ್ತು ಗ್ರಾಮೀಣ ಭತ್ಯೆಯನ್ನು ಸಂದಾಯ ಮಾಡಬೇಕು. ಅವರಿಗೆ ಸಹಾಯಧನವನ್ನೂ ನೀಡಬೇಕು. ವಾಸ್ತವವಾಗಿ, ನಾನು ಈಗ ಈ ವಿಷಯದ ಬಗ್ಗೆ ಮಾತನಾಡುವುದಿಲ್ಲ. ಏಕೆಂದರೆ, ಕೆಲವು ಮುಖ್ಯ ಪ್ರಶ್ನೆಗಳು ಹಾಗೂ ಕೆಲವು ವೈದ್ಯರಿಗೆ ಸಹಾಯಧನ ನೀಡುವ ಬಗ್ಗೆ ಆರೋಗ್ಯಮಂತ್ರಿಗಳಿಗೆ ಮತ್ತು ಮುಖ್ಯಮಂತ್ರಿಗಳಿಗೆ ವರದಿಯೊಂದನ್ನು ಸಲ್ಲಿಸುತ್ತಿದ್ದೇನೆ.

## ಮಹಿಳೆಯರ ಮತ್ತು ಮಕ್ಕಳ ತಜ್ಞರು ಇರಲಿ

ಆಮೇಲೆ, ತಜ್ಞತೆ, ಶಿಶು ಆರೋಗ್ಯ, ಮಕ್ಕಳ ರೋಗಗಳು, ಮಹಿಳಾ ಮತ್ತು ಮಕ್ಕಳ ಅಗತ್ಯತೆ ಬಗ್ಗೆ ವಿಶೇಷ ಗಮನ ನೀಡಬೇಕು. ಶಿಶು ರೋಗಗಳು, ಸಾಂಕ್ರಾಮಿಕ ರೋಗಗಳು, ಸೋಂಕು ರೋಗಗಳು – ಇವುಗಳಿಗೆಲ್ಲಾ ಚಿಕಿತ್ಸೆ ನೀಡಬೇಕು. ಈ ಸಂಬಂಧದಲ್ಲಿ, ಈಗಿರುವ ಐಸೊಲೇಷನ್ ಸೋಂಕು ರೋಗ ಆಸ್ಪತ್ರೆಯನ್ನು ಎಲ್ಲ ಅನುಕೂಲತೆಗಳನ್ನು ಒದಗಿಸಿ ಹೆಚ್ಚು ಆಕರ್ಷಣೀಯವನ್ನಾಗಿ ಮಾಡಬೇಕು. ನೆನಪಿನಲ್ಲಿಡಬೇಕಾದ ಇನ್ನೊಂದು ವಿಷಯ ಇದೆ. ಈ ಸೋಂಕು ರೋಗಗಳು ಋತುಮಾನ ವೈಪರೀತ್ಯಗಳಿಗೊಳಪಟ್ಟಿರುತ್ತವೆ. ಆ ಸಮಯದಲ್ಲಿ, ಈ ಆಸ್ಪತ್ರೆಗಳಿಗೆ ವಿಶೇಷ ಭತ್ಯೆಗಳನ್ನು ನೀಡಬೇಕು ಮತ್ತು ಹೆಚ್ಚಿನ ಸಂಖ್ಯೆಯ ವೈದ್ಯರುಗಳನ್ನು ಕಳುಹಿಸಿಕೊಡಬೇಕು ಎಂದು ನಾನು ಸೂಚಿಸಬಯಸುತ್ತೇನೆ. ಈ ಸಂಬಂಧದಲ್ಲಿ ಸ್ಥಳಿಕ ರೋಗಗಳು ಮತ್ತು ಸಾಂಕ್ರಾಮಿಕ ರೋಗಗಳು ಪ್ರಾರಂಭವಾದಾಗ ಅನುಸರಿಸಬೇಕಾದ ಅನೇಕ ವಿಧಿ–ವಿಧಾನಗಳಿಂದ ಕೆಲವು ವೇಳೆ ಚಿಕಿತ್ಸೆ ವಿಳಂಬವಾಗುತ್ತದೆ ಮತ್ತು ಆ ಸ್ಥಳಗಳಿಗೆ ಹೋಗಿ ಕೆಲಸ ಮಾಡುವಂಥ ವೈದ್ಯರಿಗೆ ಅವರ ಪ್ರಯಾಣ ಭತ್ಯೆ ಮತ್ತು ಇತರ ಸೌಲಭ್ಯಗಳನ್ನು ಪಡೆದುಕೊಳ್ಳಲು ತೊಂದರೆಯಾಗುತ್ತದೆ ಎಂಬುದೂ ಸಹ ನನಗೆ ನೆನಪಿದೆ.

ಆಸ್ಪತ್ರೆಗಳಲ್ಲಿ ಬಟ್ಟೆಗಳನ್ನು ಒಗೆಯುವ ವಿಚಾರದ ಬಗ್ಗೆ ಒಂದು ಅಂಶ ನನಗೆ ನೆನಪಿಗೆ ಬರುತ್ತದೆ. ಅನಾದಿ ಕಾಲದಿಂದಲೂ, ಅವರು ಹೇಳುವ ಹಾಗೆ ಓಬಿರಾಯನ ಕಾಲದಿಂದಲೂ, ಆಸ್ಪತ್ರೆಗಳಲ್ಲಿ ಬಟ್ಟೆಗಳನ್ನು ಒಗೆಯುವುದಕ್ಕೆ ನೂರಕ್ಕೆ ಮೂರು (3) ರೂಪಾಯಿ ದರದಂತೆ ನೀಡಲಾಗುತ್ತಿದೆ. ಇವತ್ತಿಗೂ ಸಹ, ಆಸ್ಪತ್ರೆಗಳ ಸೂಪರಿಂಟೆಂಡೆಂಟರುಗಳು ಪ್ರಯತ್ನ ಮಾಡಿ ಶಿಫಾರಸುಗಳನ್ನು ಮಾಡಿದರೂ ಸಹ, ಅವರಿಗೆ ಅದೇ ದರವನ್ನು ಮುಂದುವರಿಸುವಂತೆ ತಿಳಿಸಲಾಗಿದೆ. ಅವರು ಎಷ್ಟು ಚೆನ್ನಾಗಿ ಬಟ್ಟೆಗಳನ್ನು ಒಗೆಯುತ್ತಾರೆ, ಅವರು ಸರಿಯಾದ ರೀತಿಯಲ್ಲಿ ಬಟ್ಟೆ ಒಗೆಯುತ್ತಾರೆಯೇ? ಬಟ್ಟೆಗಳನ್ನು ಸರಿಯಾಗಿ ಒಗೆಯದಿದ್ದರೆ, ಆಸ್ಪತ್ರೆಗಳಲ್ಲಿ ರೋಗಗಳು ಹರಡಲು ಅವಕಾಶ ಮಾಡಿಕೊಟ್ಟಂತಾಗುವುದಿಲ್ಲವೆ? ಎಂಬುದನ್ನು ನೀವು ಸ್ವಲ್ಪ ಕಲ್ಪಿಸಿಕೊಳ್ಳಿ. ನಾನು ಈ ವಿಷಯುಗಳನ್ನು ಸರಿಯಾದ ಸಮಯುದಲ್ಲಿ ಪರಾಮರ್ಶಿಸಬೇಕೆಂದು ನಾನು ಸಲಹೆ ಸೂಚನೆ ನೀಡುತ್ತಿಲ್ಲ.

## ವೈದ್ಯಕೀಯ ಶಿಕ್ಷಣವು ಪ್ರಗತಿ ಕಾಣಲಿ

ನಾನು ಈಗ ವೈದ್ಯಕೀಯ ಶಿಕ್ಷಣದ ಬಗ್ಗೆ ಮಾತನಾಡುತ್ತೇನೆ. ವೈದ್ಯಕೀಯ ಶಿಕ್ಷಣಕ್ಕೆ ಅದಕ್ಕೆ ಕೊಡಬೇಕಾದ ಯುಕ್ತ ಪ್ರಾಮುಖ್ಯತೆಯನ್ನು ನೀಡಬೇಕು. ನಮ್ಮಲ್ಲಿ ಮೂರು ವೈದ್ಯಕೀಯ ಕಾಲೇಜುಗಳಿಗೆ ಆದರೆ, ಈಗಿರುವ ಪ್ರಕಾರ ಯಾವ ಕಾಲೇಜೂ ಪರಿಪೂರ್ಣವಾಗಿಲ್ಲ. ನೀವು ಈ ವರ್ಷವಷ್ಟೇ ಆ ವೈದ್ಯಕೀಯ ಕಾಲೇಜುಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡಿದ್ದೀರಿ ಎಂಬ ಒಂದು ಕಾರಣಕ್ಕಾಗಿ ಖಂಡಿತವಾಗಿಯೂ ವಿಮೆ ಇದೆ. ಆದರೆ, ಏನೇ ಇರಲಿ, ಈ ಕಾಲೇಜುಗಳು ಪೂರ್ಣವಾಗಿ ಅರ್ಹತೆ ಹೊಂದಿರುವ ಮತ್ತು ಪರಿಪೂರ್ಣವಾಗಿ ಸುಸಜ್ಜಿತಗೊಳಿಸಿದ ವೈದ್ಯಕೀಯ ಪದವೀಧರರನ್ನು ತರಬೇತುಗೊಳಿಸಿ ಕಳುಹಿಸುವಂತಹ ಹಂತವನ್ನು ಮತ್ತು ಸ್ಥಾನಮಾನವನ್ನು ಹೊಂದಬೇಕು. ನಮ್ಮಲ್ಲಿ ಮೂರು ವೈದ್ಯಕೀಯ ಕಾಲೇಜುಗಳಿವೆ ಬೋಧಕ ವೃಂದವೂ ಇರಬೇಕು ಹಾಗೂ ನೀವು ನೀಡುವ ಶಿಕ್ಷಣವು ಗುಣಮಟ್ಟದ್ದಾಗಿರಬೇಕು. ತಜ್ಞರ ಸಹಿತ ಯುಕ್ತ ಉಪಕರಣಗಳು ಅಲ್ಲಿರಬೇಕು.

ಕಸ್ತೂರಬಾ ವೈದ್ಯಕೀಯ ಕಾಲೇಜಿನ ಬಗ್ಗೆ ಒಂದು ವಿಷಯ ಹೇಳ್ತೀನಿ ಈ ಕಾಲೇಜು, ನ್ಯಾಯಯುತವಾಗಿ ಅತ್ಯುನ್ನತ ಸ್ಥಾನವನ್ನು ತಲುಪಿದೆ ಹಾಗೂ ಕನಿಷ್ಠ ಪಕ್ಷ ಕೇಂದ್ರ ಸರ್ಕಾರದ ನೆರವಿನೊಂದಿಗೆ, ಅದನ್ನು ಆದಷ್ಟು ಬೇಗನೆ ಅವರು ಅದನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬೇಕೆಂದು ನಾನು ಸರ್ಕಾರಕ್ಕೆ ಸಲಹೆ ನೀಡುತ್ತೇನೆ. ಡಾ॥ ಮಾಧವ ಪೈ ಅವರು, ಬೇರಲ್ಲಾದರೂ ಇನ್ನೊಂದು ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲೂ ಸಹ ಇದರಿಂದ ಸಹಾಯವಾಗುತ್ತದೆ. ಇತರ ಕಾಲೇಜುಗಳನ್ನು ಪ್ರಾರಂಭಿಸುವ ಬಗ್ಗೆ, ಈಗಿರುವ ಕಾಲೇಜುಗಳನ್ನು ಅತ್ಯಂತ ಉನ್ನತ ಮಟ್ಟಕ್ಕೆ ಏರಿಸಬೇಕೆಂದು ನಾನು ಆಗ್ರಹಪಡಿಸುತ್ತೇನೆ ಮತ್ತು ಈ ರಾಜ್ಯದಲ್ಲಿ ನಾವು ಇನ್ನೊಂದು ಕಾಲೇಜನ್ನು ಪ್ರಾರಂಭಿಸಲು ನನ್ನ ಅಭಿಪ್ರಾಯದಲ್ಲಿ ಅದಕ್ಕೆ ಸರಿಯಾದ ಸ್ಥಳ ಎಂದರೆ ಬಳ್ಳಾರಿ. ಎಲ್ಲ ದೃಷ್ಟಿಯಿಂದಲೂ ಹೇಳುವುದಾದರೆ ಬಳ್ಳಾರಿಗೆ ಒಂದು ವೈದ್ಯಕೀಯ ಕಾಲೇಜನ್ನು ಹೊಂದುವ ಅರ್ಹತೆ ಇವೆ.

## ವೈದ್ಯಕೀಯ ವಿದ್ಯಾರ್ಥಿಗಳಿಗೆ ವಸತಿ ಸೌಲಭ್ಯ

ನಾನು ಈಗ ವಸತಿ ನಿಲಯಗಳ ವಿಷಯಕ್ಕೆ ಬರುತ್ತೇನೆ. ವೈದ್ಯಕೀಯ ಕಾಲೇಜಿನ ವಿದ್ಯಾರ್ಥಿಗಳಿಗೆ ಸರಿಯಾದ ವಸತಿ ನಿಲಯಗಳಿಲ್ಲವೆಂಬುದು ನಿಜವಾಗಿಯೂ ಆಶ್ಚರ್ಯಕರವಾದ ಹಾಗೂ ನೋವಿನ ಸಂಗತಿ ಕೂಡ ಆಗಿದೆ.

ಮೈಸೂರಿನಲ್ಲಿ ಒಂದು ವಸತಿ ನಿಲಯವಿದೆ. ಆದರೆ, ಸಂಬಂಧಪಟ್ಟ ಸಚಿವರಿಗಷ್ಟೇ ಅಲ್ಲದೆ ಇತರರಿಗೂ ಸಹ ನಾನು ಸಲಹೆ ನೀಡುವುದೇನೆಂದರೆ, ಆ ವಸತಿ ನಿಲಯಗಳಿಗೆ ಖುದ್ದಾಗಿ ಭೇಟಿಯಿತ್ತು ಅಲ್ಲಿನ ಸ್ಥಿತಿಗತಿಗಳನ್ನು ಅವಲೋಕಿಸಬೇಕು. ಬೆಂಗಳೂರಿನಲ್ಲಿ ಸರಿಯಾದ ವಸತಿ ನಿಲಯವಿಲ್ಲ. ಪ್ರಾಸಂಗಿಕವಾಗಿ, ನಾನು ಒಂದು ವಿಷಯವನ್ನು ಹೇಳಬಯಸುತ್ತೇನೆ; ಅದೆಂದರೆ, ಶಾಸಕರು ಸ್ವಾಧೀನಪಡಿಸಿಕೊಂಡಿರುವ ಒಂದು ಸಾಮಾನ್ಯ ವಸತಿ ನಿಲಯವನ್ನು ವಾಸ್ತವವಾಗಿ ವೈದ್ಯಕೀಯ ವಿದ್ಯಾರ್ಥಿಗಳಿಗೆ ನೀಡಲು ಸಿದ್ಧಪಡಿಸಲಾಗಿತ್ತು. ಆದರೆ, ಹೇಗೋ ಏನೋ ಅದನ್ನು ನಮ್ಮ ಮಾನ್ಯ ಸದಸ್ಯರುಗಳಿಗೆ, ಶಾಸಕರುಗಳಿಗೆ ನೀಡಲಾಗಿದೆ. ವಿದ್ಯಾರ್ಥಿಗಳಿಗೆ ತೊಂದರೆಯುಂಟುಮಾಡಿ ಹಾಗೆ ಮಾಡಬಾರದಾಗಿತ್ತು. ಇದೇ ದುಸ್ಥಿತಿ ಇನ್ನೊಂದು ಕಟ್ಟಡಕ್ಕೂ ಬಂದಿರುವುದೂ ಸಹ ನನಗೆ ತಿಳಿಯಿತು. ಆ ಕಟ್ಟಡವನ್ನು ನಮ್ಮ ಸಚಿವರುಗಳಲ್ಲೊಬ್ಬರಾದ ಶ್ರೀಮಾನ್ ರಾಚಯ್ಯನವರು ಸ್ವಾಧೀನಪಡಿಸಿಕೊಂಡಿದ್ದಾರೆ. ಅಂದರೆ ಪ್ರಸ್ತುತ ಮಹಿಳಾ ಕ್ಲಬ್ ಅನ್ನು ವೈದ್ಯಕೀಯ ಕಾಲೇಜಿನ ಮಹಿಳಾ ವಿದ್ಯಾರ್ಥಿಗಳ ವಸತಿನಿಲಯಕ್ಕೆ ಕೊಡುವುದಕ್ಕಾಗಿ ಮೀಸಲಿಟ್ಟಿದ್ದರು. ಆದರೆ, ವಸತಿ ನಿಲಯದ ಉದ್ದೇಶಕ್ಕಾಗಿ ಸೂಕ್ತ ರೀತಿಯಲ್ಲಿ ಹೊಂದಾಣಿಕೆಯಾಗುತ್ತಿದ್ದ ಒಂದು ಕಟ್ಟಡವನ್ನು ಮಾನ್ಯ ಸಚಿವರಿಗೆ ನೀಡಲಾಗಿದೆ. ಸಚಿವರುಗಳಿಗೆ ಮನೆಗಳನ್ನು ಕೊಡಬಾರದೆಂದು ಸಹಾ ನಾನು ಹೇಳುವುದಿಲ್ಲ. ಬಹಳ ಸುಂದರವಾದ ಹಾಗೂ ಘನತೆಯಿಂದ ಕೂಡಿದ ಮನೆಯನ್ನು ನಮ್ಮ ಸಚಿವರಿಗೆ ಕೊಡಬೇಕಾದುದು ಸರ್ಕಾರದ ಕರ್ತವ್ಯ. ಆದರೆ ಅದೇ ವೇಳೆಯಲ್ಲಿ, ಅಂತಹ ಕಟ್ಟಡಗಳನ್ನು ಹಲವಾರು ಶಿಕ್ಷಣ ಸಂಸ್ಥೆಗಳಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಸತಿ ನಿಲಯಗಳಿಗಾಗಿ ಬಿಟ್ಟುಕೊಡುವುದು ಒಳ್ಳೆಯದೆಂದು ಸಚಿವರೂ ಸಹ ಭಾವಿಸುತ್ತಾರೆಂದು ನಾನು ಆಶಿಸುತ್ತೇನೆ.

ಶ್ರೀ ಬಿ.ಡಿ. ಜತ್ತಿ (ಮುಖ್ಯ ಮಂತ್ರಿ): ಮಾನ್ಯರೇ, ಶ್ರೀ ರಾಚಯ್ಯನವರು ಸ್ವಾಧೀನಪಡಿಸಿಕೊಂಡಿರುವ ಮನೆಯ ಕುರಿತು ಉಲ್ಲೇಖ ಮಾಡಲಾಗಿದೆ. ಮಹಿಳೆಯರಿಗೆ ಈಗಾಗಲೇ ಒಂದು ನಿವೇಶನವನ್ನು ಕೊಡಲಾಗಿದ್ದು ಅವರ ಕ್ಲಬ್‌ಗಾಗಿ ಹೊಸ ಕಟ್ಟಡವನ್ನು ನಿರ್ಮಾಣ ಮಾಡಲು ಅವರು ತೀರ್ಮಾನಿಸಿದ್ದಾರೆ.

**ಶ್ರೀ ಕೆ.ಕೆ. ಹೆಗ್ಡೆ (ಆರೋಗ್ಯ ಸಚಿವರು):** ವಸತಿ ನಿಲಯ ಸ್ಥಳಾವಕಾಶಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ ಹೇಳುವುದಾದರೆ, ಸರ್ಕಾರವು ಕೂಡಲೇ ಕ್ರಮ ಕೈಗೊಂಡಿದೆ. ಒಂದು ನಿವೇಶನವನ್ನು ಈಗಾಗಲೇ ಮಂಜೂರು ಮಾಡಿದ್ದು, ಅದರ ಅಂದಾಜು ಮೊತ್ತವನ್ನು ಈಗಾಗಲೇ ಮಂಜೂರು ಮಾಡಿದೆ. ವಿದ್ಯಾರ್ಥಿನಿಯರಿಗೆ ವಾಣಿ ವಿಲಾಸ ಆಸ್ಪತ್ರೆ ಸಮೀಪ ಮತ್ತು ವಿದ್ಯಾರ್ಥಿಗಳಿಗೆ ಜನರಲ್ ಹಾಸ್ಟೆಲ್

ಪಕ್ಕದ ಕಟ್ಟಡವನ್ನು ನಿರ್ಮಿಸುತ್ತಾರೆ. ಈ ವಿಷಯದ ಬಗ್ಗೆ ಸದನವು ತನ್ನ ವೇಳೆಯನ್ನು ವಿನಿಯೋಗಿಸುವ ಅಗತ್ಯವಿಲ್ಲ.

ಶ್ರೀ ಕೆ. ನಾಗಪ್ಪ ಆಳ್ವ: ಮುಖ್ಯ ಮಂತ್ರಿಗಳು ಮತ್ತು ಆರೋಗ್ಯ ಸಚಿವರು ಈ ವಿಷಯಕ್ಕೆ ಹೆಚ್ಚು ಗಮನ ಹರಿಸಿರುವುದನ್ನು ಕಂಡು ನನಗೆ ಬಹಳ ಸಂತೋಷವಾಗಿದೆ. ನಾನು ಈ ಸಮಸ್ಯೆಯ ಪ್ರಾಮುಖ್ಯತೆ ಬಗ್ಗೆ ಮಾತ್ರ ಒತ್ತಿ ಹೇಳಿದೆ ಅಷ್ಟೆ. ಏಕೆಂದರೆ, ನಾನು ಮದ್ರಾಸಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಆ ದಿನಗಳನ್ನು ನೆನಪು ಮಾಡಿಕೊಂಡೆ. ಅದಕ್ಕೆ ಮದ್ರಾಸಿನಲ್ಲಿ ವಿದ್ಯಾರ್ಥಿಗಳು ವಿದ್ಯಾರ್ಥಿ ನಿಲಯಕ್ಕಾಗಿ ಹೋರಾಟ ನಡೆಸಿ ಅದನ್ನು ಪಡೆದುಕೊಂಡರು. ನಾವು ಹೋರಾಟ ಮಾಡಿಯೇ ವಸತಿ ನಿಲಯವನ್ನು ಪಡೆದುಕೊಂಡೆವು. ಅಂತಹ ಒಂದು ಪರಿಸ್ಥಿತಿ ಇಲ್ಲಿ ನಿರ್ಮಾಣವಾಗದಿರಬಹುದೆಂದು ಮಾತ್ರ ನಾನು ಆಶಿಸುತ್ತೇನೆ.

ಶ್ರೀ ಕೆ.ಕೆ. ಹೆಗ್ಡೆ: ಮೈಸೂರು ಸರ್ಕಾರವು ಕೂಡಲೇ ಕ್ರಮ ಕೈಕೊಂಡಿದೆ. ಮದ್ರಾಸ್ ಸರ್ಕಾರದ ತರಹ ಮಾಡಲಿಲ್ಲ. ಮಾನ್ಯ ಸದಸ್ಯರಿಗೆ ಈ ಬಗ್ಗೆ ತಿಳಿದಿರಬಹುದೆಂದು ನಾನು ಭಾವಿಸುತ್ತೇನೆ.

## ಭಾರತೀಯ ವೈದ್ಯ ಪದ್ಧತಿಗಳಿಗೆ ಪ್ರೋತ್ಸಾಹ ನೀಡಿ

ಶ್ರೀ ಕೆ. ನಾಗಪ್ಪ ಆಳ್ವ: ಪಕ್ಕಾ ವಸತಿ ನಿಲಯದ ಅಗತ್ಯತೆಯನ್ನು ನೀವು ತಿಳಿದುಕೊಂಡಿರುವುದಕ್ಕೆ ನನಗೆ ಸಂತೋಷವಾಗಿದೆ. ಆದರೆ ಅದು ಸ್ಥಳದಿಂದ ಹೊರಗೆ ಇದ್ದರೂ ಸಹ ಇನ್ನೂ ಸ್ವಲ್ಪ ದೂರದಲ್ಲಿ ಅದೇ ರೀತಿಯ ವಸತಿ ನಿಲಯಗಳು ಇತರ ಕಾಲೇಜುಗಳಿಗೆ – ಕಾನೂನು ಕಾಲೇಜು ಹಾಗೂ ಇತರ ಕಾಲೇಜುಗಳಿಗೆ ಅಗತ್ಯವೆಂದು ಹೇಳಿ, ವಿದ್ಯಾರ್ಥಿಗಳ ಪರಿಸ್ಥಿತಿ ತೀರಾ ವಿಷಾದನೀಯ.

ಮಾನ್ಯರೇ, ಆಯುರ್ವೇದದ ಬಗ್ಗೆ ಕೆಲವು ಮಾತುಗಳನ್ನು ಹೇಳುವುದು ನನ್ನ ಕರ್ತವ್ಯವೆಂದು ನನ್ನ ಭಾವನೆ. ಆಯರ್ವೇದವನ್ನು ಭಾರತೀಯ ವೈದ್ಯ ಪದ್ಧತಿಯಾಗಿ ಪ್ರೋತ್ಸಾಹಿಸಬೇಕು. ಆಯುರ್ವೇದ ಮಾತ್ರವೇ ಅಲ್ಲ, ಆಯುರ್ವೇದ, ಯುನಾನಿ ಮತ್ತು ಹೋಮಿಯೋಪತಿಯಂತಹ ದೇಶೀಯ ವೈದ್ಯಪದ್ಧತಿಗಳನ್ನೂ ಸಹ ಪ್ರೋತ್ಸಾಹಿಸಬೇಕು. ಈ ವೈದ್ಯರುಗಳ ಸ್ಥಿತಿಗತಿಗಳನ್ನು ಬಲಪಡಿಸುವಲ್ಲಿ ಕಾನೂನಿಗೆ ದೀರ್ಘ ಸಮಯ ಬೇಕಾಗುತ್ತದೆ ಮತ್ತು ಆಯುರ್ವೇದಕ್ಕೆ ಪ್ರೋತ್ಸಾಹ ಕೊಡುವಲ್ಲಿ ಸರ್ಕಾರವು ಉಡುಪ ಸಮಿತಿಯ ವರದಿಯನ್ನು ಗಮನದಲ್ಲಿಟ್ಟುಕೊಳ್ಳಬೇಕೆಂದು ಮಾತ್ರ ನಾನು ವಿನಂತಿಸುತ್ತೇನೆ. ಆಯುರ್ವೇದವನ್ನು ವೈಜ್ಞಾನಿಕ ಆಧಾರದ ಮೇಲೆ ಅಭಿವೃದ್ಧಿಗೊಳಿಸಬೇಕು. ಉತ್ತರ ಪ್ರದೇಶದಲ್ಲಿ ಆಯುರ್ವೇದ ಕಾಲೇಜುಗಳನ್ನು

ಖಾಸಗಿ ವಲಯಗಳು ಪ್ರಾರಂಭಿಸಿವೆ. ಇಲ್ಲಿ, ಸರ್ಕಾರವು ಕನಿಷ್ಠ ಎರಡು ಅಥವಾ ಮೂರು ಕಾಲೇಜುಗಳನ್ನು ಪ್ರಾರಂಭಿಸುವುದು ಅವಶ್ಯವಾಗಿದೆ ಮತ್ತು ಅವು ಮಾದರಿ ಕಾಲೇಜುಗಳಾಗಿರಬೇಕು. ಅದರಿಂದ, ಖಾಸಗಿ ವಲಯವು ಅವುಗಳಿಂದ ಸ್ಫೂರ್ತಿ ಪಡೆಯಬಹುದು. ಸಂಶೋಧನೆಗೆ ಹೆಚ್ಚಿನ ಗಮನ ಕೊಡಬೇಕು ಮತ್ತು ಕೇಂದ್ರ ಔಷಧಾಲಯವನ್ನು ಪ್ರಾರಂಭಿಸಬೇಕು. ಈ ಕಾಲೇಜುಗಳಿಗೆ ಎರಡೂ ವೈದ್ಯಪದ್ಧತಿಗಳ ಬಗೆಗಿನ ಜ್ಞಾನದ ತಿಳಿವಳಿಕೆ ಇರುವಂಥ ಶಿಕ್ಷಕ ವೃಂದವು ಇರುವುದು ಅತ್ಯಾವಶ್ಯಕ.

ಆರೋಗ್ಯ ಶಿಕ್ಷಣ ಕುರಿತಂತೆ, ನಾನು ಈಗಾಗಲೆ ಹೇಳಿದಂತೆ, ಅದಕ್ಕೆ ಹೆಚ್ಚಿನ ಗಮನ ನೀಡಬೇಕು ಮತ್ತು ನಾನು ಮತ್ತೊಮ್ಮೆ ಕೊಳಚೆ ನಿರ್ಮೂಲನಕ್ಕೆ ಒತ್ತುಕೊಡುತ್ತೇನೆ. ಕಲಬೆರಕೆ ಬಗ್ಗೆ ಹೇಳುವುದಾದರೆ, ಇದೊಂದು ನಿಜವಾಗಲೂ ಶಾಪ. ಅದನ್ನು ತಡೆಗಟ್ಟಲು ಆದಷ್ಟು ಬೇಗನೆ ಸರಿಯಾದ ಕ್ರಮವನ್ನು ತೆಗೆದುಕೊಳ್ಳಬೇಕು.

## ಜನಸಂಖ್ಯಾ ನಿಯಂತ್ರಣಕ್ಕೆ ಮಾರ್ಗಸೂಚಿಗಳು

ನಾನು, ಈಗ ಕುಟುಂಬ ಯೋಜನೆಯ ವಿಷಯಕ್ಕೆ ಬರುತ್ತೇನೆ. ಕುಟುಂಬ ಯೋಜನೆಯು ಜನಸಂಖ್ಯಾ ನಿಯಂತ್ರಣಕ್ಕೆ ಸಂಬಂಧಿಸಿದ್ದು, ಅದು ಬಹಳ ಮುಖ್ಯವಾದ ವಿಷಯವಾಗಿದೆ. ಜನಸಂಖ್ಯೆಯಲ್ಲಿ ಹೆಚ್ಚಳವು, ಆಹಾರ ಅಭಾವವಿರುವಂಥ ಹಿಂದುಳಿದ ರಾಷ್ಟ್ರಗಳಲ್ಲಿ ಮರಣ ಪ್ರಮಾಣವು ಇಳಿಮುಖವಾಗಿದ್ದು ಜನನ ಪ್ರಮಾಣವು ಹೆಚ್ಚಾಗಿದೆ. ಜನನ ಪ್ರಮಾಣವನ್ನು ನಯಂತ್ರಿಸದಿದ್ದಲ್ಲಿ ದುರ್ದೆಸೆ ಹೆಚ್ಚುತ್ತದೆ ಮತ್ತು ದುರ್ದೆಸೆಯನ್ನು ತಡೆಯಲು ಮತ್ತು ಮೂಲ ಜೀವನ ನಿರ್ವಹಣೆಯ ಮಟ್ಟಗಳನ್ನು ಪೂರೈಸಲು ಜನನದ ಪ್ರಮಾಣವನ್ನು ನಿಯಂತ್ರಿಸುವುದು ಅತ್ಯಾವಶ್ಯಕ ಮತ್ತು ಆದಷ್ಟು ಬೇಗನೆ ವಿವರಗಳ ಸಮೀಕ್ಷೆಯನ್ನು ನಡೆಸಬೇಕು. ಸಂಶೋಧನೆ, ಸಾರ್ವಜನಿಕ ಶಿಕ್ಷಣ ಮತ್ತು ಉಚಿತ ಗರ್ಭನಿರೋಧಕಗಳನ್ನು ತಯಾರಿಸಲು ಮತ್ತು ವಿತರಿಸಲು ಹೇರಳವಾಗಿ ಹಣವನ್ನು ಖರ್ಚು ಮಾಡಬೇಕು. ಕುಟುಂಬ ಮಿತಿಗೆ ಪ್ರೋತ್ಸಾಹಿಸಲು ಮತ್ತು ಅಂತಿಮವಾಗಿ ಜೀವನದ ಪರಿಮಾಣಕ್ಕಿಂತ ಜೀವನದ ಗುಣಮಟ್ಟಕ್ಕೆ ಉಚಿತ ಸೂಚನೆಗಳನ್ನು ನೀಡಲು ನಾವು ಖರ್ಚು ಮಾಡಿದ್ದೇವೆ.

ವ್ಯಾಸಕ್ಟಮಿಯ ಬಗ್ಗೆ ಒಂದು ಮಾತು, ಪ್ರತಿಯೊಬ್ಬರೂ ವ್ಯಾಸಕ್ಟಮಿಯ ಬಗ್ಗೆ ಮಾತನಾಡುತ್ತಾರೆ. ಅದರ ಅನುಕೂಲಗಳನ್ನು ಅರಿತುಕೊಳ್ಳುವ ವಿಶೇಷ ಸವಲತ್ತು ಶ್ರೀಮಂತ ವರ್ಗದ ಜನರಿಗೆ ಮಾತ್ರ ಇರುತ್ತದೆ. ವಿಶೇಷವಾಗಿ ಬಡ ವರ್ಗಗಳಿಗೆ, ಕಾರ್ಖಾನೆ ಕೆಲಸಗಾರರಿಗೆ ಮತ್ತು ರೈತ ಕಾರ್ಮಿಕರಿಗೆ ಸರಿಯಾದ

ಶಿಕ್ಷಣ ನೀಡಬೇಕು, ಅದರಿಂದ ಅವರು ಈ ಶಸ್ತ್ರಕ್ರಿಯೆಯ ಅವಕಾಶವನ್ನು ಉಪಯೋಗ ಮಾಡಿಕೊಂಡು ಇದರಿಂದ ಪ್ರಯೋಜನ ಪಡೆದುಕೊಳ್ಳಬಹುದು.

ಶಾಲಾ ಆರೋಗ್ಯ ಸೇವೆಯ ಬಗ್ಗೆ ಒಂದು ಮಾತು, ಶಾಲಾ ಆರೋಗ್ಯ ಸೇವೆಯು ಬಹಳ ಅವಶ್ಯವಾದುದು ಹಾಗೂ ನಾನು ಪ್ರತಿಯೊಂದು ಶಾಲೆಯಲ್ಲಿ ಪ್ರತಿಯೊಂದು ಮಗುವನ್ನು ಹುಡುಗ ಅಥವಾ ಹುಡುಗಿ ಯಾರೇ ಆಗಲಿ ಅವರನ್ನು ಪರೀಕ್ಷಿಸಬೇಕು ಮತ್ತು ವೈದ್ಯನಾಗಿ ನಾನು ಮಂಗಳೂರಿನಲ್ಲಿ ಅನೇಕ ಶಾಲೆಗೆ ಹೋಗುವ ಮಕ್ಕಳನ್ನು ಪರೀಕ್ಷಿಸಬೇಕು. ಕೇವಲ ಶೇ. 15ರಿಂದ 20ರಷ್ಟು ವಿದ್ಯಾರ್ಥಿಗಳು ಮಾತ್ರ ಚಿಕ್ಕಪುಟ್ಟ ಖಾಯಿಲೆಗಳಿಂದ ಬಳಲುತ್ತಿದ್ದಾರೆ ಎಂಬುದು ನನ್ನ ಗಮನಕ್ಕೆ ಬಂದಿದೆ. ಇದನ್ನು ಸಹಾ ಸರ್ಕಾರದಿಂದ ಸಣ್ಣ ನೆರವನ್ನು ಪಡೆದುಕೊಂಡು ಮತ್ತು ತಂದೆ-ತಾಯಿಯರಿಗೆ ಸರಿಯಾಗಿ ಸಲಹೆ ನೀಡುವುದರಿಂದ ಸರಿಪಡಿಸಬಹುದು. ಪ್ರತಿ 500 ವಿದ್ಯಾರ್ಥಿಗಳಿಗೆ ಅವರ ಆರೋಗ್ಯವನ್ನು ನೋಡಿಕೊಳ್ಳಲು ಒಬ್ಬ ವೈದ್ಯನನ್ನು ನೇಮಕ ಮಾಡುವುದು ಸಹ ಅಗತ್ಯವಾಗಿದೆ.

ಕಾಲೇಜುಗಳು ಮತ್ತು ಶಿಕ್ಷಣ ಸಂಸ್ಥೆಗಳಲ್ಲಿ ದೈಹಿಕ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಬೇಕು.

ವಂದನೆಗಳು ಸ್ವಾಮಿ,

## ಮೈಸೂರು ಗೇಣಿದಾರಿಕೆ ಮತ್ತು ಕೃಷಿ ಜಮೀನು ಕಾನೂನುಗಳ ಸಮಿತಿ ವರದಿಯ ಮೇಲೆ ಮಾಡಿದ ಭಾಷಣ

**3ನೇ ಮಾರ್ಚ್ 1959**

### ರೈತಾಪಿ ಜನರ ಹಕ್ಕು ಬಾಧ್ಯತೆಗಳ ರಕ್ಷಣೆ

**ಶ್ರೀ ಕೆ ನಾಗಪ್ಪ ಆಳ್ವ (ಪಾಣೆ, ಮಂಗಳೂರು)** : ಅಧ್ಯಕ್ಷರೆ, ಭೂಸುಧಾರಣೆ ದೇಶದಲ್ಲಿ ಇಂದು ಮಹತ್ವದ ಪ್ರಶ್ನೆಯಾಗಿದೆ. ಹಲವು ವರ್ಷಗಳಿಂದ ದೇಶದ ನಾನಾ ಭಾಗಗಳಲ್ಲಿ, ಬೇರೆ ಬೇರೆ ಅಂತಸ್ತುಗಳಲ್ಲಿ ಭೂಸುಧಾರಣೆಯ ಕಾನೂನು ಜಾರಿಗೆ ಬರುತ್ತಾ ಇದೆ. ಜನತೆಯ ಮತ್ತು ಪಕ್ಷದ ಕೇಳಿಕೆಯಿಂದಾಗಿ ಇಂತಹ ಕಾನೂನುಗಳು ಆಗಿರುವಂಥಾದ್ದು ನ್ಯಾಯ ಮತ್ತು ಅಗತ್ಯ. ಕೃಷಿ ಪ್ರಧಾನವಾದ ನಮ್ಮ ದೇಶದಲ್ಲಿ 100ಕ್ಕೆ 75 ಮಂದಿ ಕೃಷಿಕರಾಗಿರುವಾಗ, ದೇಶದ

ಹಿತಸಾಧನೆಯಾಗಬೇಕಿದ್ದರೆ ಅವರ ಅಭಿವೃದ್ಧಿ ಅಗತ್ಯ. ಅವರ ಅಭ್ಯುದಯಕ್ಕೆ ಬೇಕಾದ ಕಾನೂನುಗಳನ್ನು ಮಾಡುವಂಥಾದ್ದು ಇವೊತ್ತು ಸರ್ಕಾರದ ಕರ್ತವ್ಯ. ಅದಕ್ಕನುಸಾರವಾಗಿ ನಮ್ಮ ಪ್ರಾಂತ್ಯದಲ್ಲಿ ಹಲವು ತಿಂಗಳ ಮೊದಲು ಜತ್ತಿ ಸಮಿತಿ ನೇಮಕವಾಗಿ ಆ ಸಮಿತಿಯವರು ಒಂದು ವರದಿಯನ್ನು ಒಪ್ಪಿಸಿದ್ದಾರೆ. ಆದರೆ ಮೊದಲಿನಲ್ಲಿಯೇ ಹೇಳಬೇಕಾಗುತ್ತದೆ, ಇದು ಒಂದು ಅವಸರದ ವರದಿಯಾಗಿದೆ ಎಂದು. ಅಷ್ಟೊಂದು ಸ್ವಲ್ಪ ಸಮಯದಲ್ಲಿ ಹೆಚ್ಚಿನ ಶ್ರಮಪಟ್ಟು ಸಾಧ್ಯವಾದಷ್ಟುಮಟ್ಟಿಗೆ ಜನತೆಯ ಅಭಿಪ್ರಾಯವನ್ನು ಪಡೆದು, ಅವರು ವರದಿಯನ್ನು ಕೊಟ್ಟಿದ್ದಾರೆ. ಅದರಲ್ಲಿ ಹಲವು ವರದಿಗಳು ನಮ್ಮ ಹೆಚ್ಚಿನ ಗಮನವನ್ನು ಸೆಳೆದಿದೆ. ಇದಕ್ಕಾಗಿ ನನ್ನ ಅಭಿನಂದನೆಗಳು.

## ಏಕೀಕೃತ ಕರ್ನಾಟಕದ ಸಮಸ್ಯೆಗಳು

ಆದರೆ ಇಂತಹ ಒಂದು ಮಹತ್ವದ ಪ್ರಶ್ನೆಯನ್ನು ವಿಚಾರಿಸುವಾಗ ನಾವು ಒಂದು ವಿಚಾರವನ್ನು ಗಮನದಲ್ಲಿಡಬೇಕು. ನಮ್ಮ ಮೈಸೂರು ರಾಜ್ಯ ಐದು ಪ್ರದೇಶಗಳನ್ನು ಕೂಡಿಕೊಂಡು ಆಗಿದೆ; ಆಡಳಿತದ ದೃಷ್ಟಿಯಿಂದ ನೋಡಿದರೆ, ಐದು ತರಹದ ಆಡಳಿತಗಳು ಐದು ಕಡೆಯಲ್ಲಿವೆ. ಈ ಐದು ಕಡೆಗಳಲ್ಲಿ ಸಾಗುವಳಿ ಕ್ರಮ, ಭೂಸ್ವತ್ತು, ಪ್ರತ್ಯೇಕ ಪ್ರತ್ಯೇಕವಾಗಿದೆ, ಒಂದೇ ಕಾನೂನು ಒಂದೇ ಇಡೀಯ ಪ್ರಾಂತ್ಯಕ್ಕೆ ಬರುವುದು ಅಗತ್ಯ ಮತ್ತು ಸಾಧ್ಯ ಎಂಬುದಾಗಿ ವರದಿಯಲ್ಲಿ ತೋರಿಸಿಕೊಟ್ಟಿದ್ದಾರೆ. ಅದನ್ನು ನಾನು ಒಪ್ಪುವುದಿಲ್ಲ. ಭೂಸ್ವತ್ತು ಹಲವು ವರ್ಷಗಳಲ್ಲಿ ಹಲವು ತರಹದ ಆಡಳಿತಕ್ಕೆ ಒಳಪಟ್ಟು ನಮ್ಮ ಜನರ– ಮುಖ್ಯವಾಗಿ ರೈತಾಪಿ ಜನರ ಸ್ಥಿತಿಗತಿಗಳು ಬದಲಾಯಿಸಿದೆ. ಇದು ಸೇಲ್ಸ್ ಟ್ಯಾಕ್ಸ್ ಅಥವಾ ಮೋಟಾರು ಟ್ಯಾಕ್ಸ್ ತರಹದಲ್ಲಿ ಸಮಾನತೆ ತರುವಂತಹುದಲ್ಲ. ಕೃಷಿಕರ ಜೀವನ ಇವೊತ್ತು ಆಯಾ ಪ್ರದೇಶದ ಸ್ಥಿತಿಗತಿಗಳನ್ನು ಹೊಂದಿಕೊಂಡು ಇದೆ. ಹೆಚ್ಚು ಸಮಯವಿಲ್ಲದ್ದರಿಂದ ನಾನು ಕೆಲವು ವಿಚಾರಗಳನ್ನು ಮಾತ್ರ ಇಲ್ಲಿ ಹೇಳುವವನಿದ್ದೇನೆ. ಒಂದು ಜೊತೆ ಎತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎರಡು ಎಕರೆ ಜಮೀನು ಸಾಗುವಳಿ ಮಾಡುವ ಹಾಗಿದ್ದರೆ, ಮೈಸೂರು ಪ್ರದೇಶದಲ್ಲಿ ನಾಲ್ಕರಿಂದ ಆರು ಎಕರೆ ಭೂಮಿಯನ್ನು ಮಾಡಬಹುದು ಮತ್ತು ಹೈದರಾಬಾದಿನಲ್ಲಿ ಇಪ್ಪತ್ತರಿಂದ ಮೂವತ್ತು ಎಕರೆ ಸಾಗುವಳಿ ಮಾಡಬಹುದು. ಈ ರೀತಿ ಸಾಗುವಳಿ ಅನುಕೂಲ ಅಲ್ಲಿದೆ. ಆಮೇಲೆ ಮಳೆಯ ವಿಚಾರ ನೋಡಿದರೆ, ಆರಂಗುಲದಿಂದ ನಾನೂರು ಅಂಗುಲಗಳವರೆಗೆ ಬೇರೆ ಬೇರೆ ಕಡೆಗಳಲ್ಲಿ ಬರುವುದು ನಮಗೆ ಗೊತ್ತಿದೆ. ಇದರ ಮೇಲೆ ಅತಿವೃಷ್ಟಿ ಮತ್ತು ಅನಾವೃಷ್ಟಿಯ ವಿಚಾರ ನಮ್ಮ ಪ್ರದೇಶದಲ್ಲಿದೆ. ಎರಡು ವರ್ಷಕ್ಕೊಮ್ಮೆ, ಮೂರು

ವರ್ಷಕ್ಕೊಮ್ಮೆ ಮಳೆ ಬಾರದೆ ಕೆಲವು ಜಿಲ್ಲೆಗಳಲ್ಲಿ ಬರಗಾಲ ಬರುತ್ತಿರುವುದು ಕಾಣುತ್ತಾ ಇದೆ.

## ಭೂಮಿ ಹಕ್ಕಿಗೆ ಏಕರೂಪದ ಕಾನೂನು

ಮುಖ್ಯವಾಗಿ ಇವೊತ್ತಿನ ದಿವಸ ನಾನು ಹೇಳುವಂಥ ವಿಚಾರವೆಂದರೆ, ರೈತ ಕಷ್ಟವಲ್ಲಿದ್ದಾನೆ; ಕಷ್ಟದಲ್ಲಿ ಬಿದ್ದಿದ್ದಾನೆ. ಸರ್ಕಾರದ ಸಹಾಯ ಬೇಕಾದ ರೀತಿಯಲ್ಲಿ ಅವನಿಗೆ ಸಿಕ್ಕುತ್ತಿಲ್ಲ. ಅಷ್ಟು ಮಾತ್ರವೇ ಅಲ್ಲ, ಹತ್ತರಲ್ಲಿ ಐದು ಜನ ರೈತರ ಸ್ಥಿತಿಯನ್ನು ನೋಡಿದರೆ ಅವರು ಸಾಲದಲ್ಲಿ ಮುಳುಗಿ ಹೋಗಿದ್ದಾರೆ. ಅದರಂತೆಯೇ ಇವೊತ್ತು ರೈತನ ಸಾಗುವಳಿ ಕ್ರಮಕೂಡ ಹಾಳಾಗಿದೆ. ನಮ್ಮ ಜಿಲ್ಲೆಯ ಮಟ್ಟಿಗೆ ಹೇಳುವುದಾದರೆ, ಕೆಲವು ವಿಚಾರಗಳನ್ನು ಹೇಳುವುದು ಅಗತ್ಯ. ಅಲ್ಲಿ ಸರಾಸರಿ ಒಂದು ಲೆಕ್ಕ ನೋಡಿದರೆ, ಕೋ-ಅಪರೇಟಿವ್ ಸೊಸೈಟಿಯು ಮುಖಾಂತರ ನಾಲ್ಕರಿಂದ ಎಂಟು ಪರ್ಸೆಂಟಿನವರೆಗೆ ಮಾತ್ರ ಸಹಾಯ ಸಿಕ್ಕುತ್ತದೆ. ಭೂ-ಬ್ಯಾಂಕುಗಳ ಲಕ್ಷಣ ನೋಡಿದರೆ ಅಲ್ಲಿ ಭೂ ಮಾಲೀಕರು ಇದ್ದಾರೆ. ಇವೊತ್ತು ಧೈರ್ಯವಾಗಿ ಹೇಳಬಲ್ಲೆ- ಭೂ ಮಾಲೀಕರು ಎನಿಸಿಕೊಳ್ಳುವವರಲ್ಲಿ ಹತ್ತಕ್ಕೆ ಒಂಬತ್ತು ಜನ ಸಾಲದಿಂದ ನರಳುತ್ತಾ ಇದ್ದಾರೆ. ಒಂದು ತರಹದ ಅಭಿಮಾನದಿಂದ ಜೀವನ ಮಾಡಬೇಕೆಂದು ಅವರಿಗೆ ಇದ್ದರೂ ಕೂಡ ಅವರ ಸ್ಥಿತಿ ನಿಜವಾಗಿಯೂ ಒಳ್ಳೆಯದಾಗಿಲ್ಲ. ಇವರ ವಿಷಯದಲ್ಲಿ, ನಮ್ಮ ಜಿಲ್ಲೆಯಲ್ಲಿ ಹಲವು ಕೆಲವು ವರ್ಷಗಳ ಮುಂಚೆ, ನಾವು ಸರ್ಕಾರದ ಮುಂದೆ ಗೇಣಿ, ಕೃತ್ಯದ ಹಕ್ಕು ಮತ್ತು ಶಾಶ್ವತವಾದ ಹಕ್ಕುಗಳ ವಿಚಾರದಲ್ಲಿ ನಾವು ಕೇಳಿಕೊಂಡ ಮೇರೆಗೆ, ಅಲ್ಲಿ 1956ನೇ ಇಸವಿಯಲ್ಲಿ ಮದ್ರಾಸ್ ಟೆನೆನ್ಸಿ ಆಕ್ಟ್ ಎಂಬ ಅರ್ಧ ಕಾನೂನು ಬಂದಿತ್ತು. ಮೊದಲೇ ಹೇಳಿದಂತೆ ಬೇರೆ ಬೇರೆ ವಲಯಗಳಲ್ಲಿ ಬೇರೆ ಬೇರೆ ಅಂತಸ್ತುಗಳಲ್ಲಿ ಈ ಕಾನೂನು ರೂಢಿಗತ ಬಂದಿದೆ. ಶಾಶ್ವತವಾದ ಹಕ್ಕು, ಕೃತ್ಯದ ಹಕ್ಕು, ನ್ಯಾಯವಾದ ಗೇಣಿ ಎಂಬ ವಿಚಾರದಲ್ಲಿ ಕೇಳಿಕೆ ಇತ್ತು. ಕಾನೂನು ಬರುವುದು ನ್ಯಾಯವೆಂದು ಒಪ್ಪುತ್ತೇನೆ. ಈ ಜಸ್ತಿ ಸಮಿತಿಯ ವರದಿಯಲ್ಲಿ ಒಂದು ತಪ್ಪು ಇದೆ. ಈ ಜಿಲ್ಲೆಯಲ್ಲಿ ನೂರಕ್ಕೆ ಎಪ್ಪತ್ತೈದು ಜನ ಅಳಿಯ ಸಂತಾನದವರು ಇರುವಾಗ ಅವರ ಪ್ರಸ್ತಾಪವನ್ನೇ ಮಾಡಿಲ್ಲ. ನಾನು ಎಲ್ಲ ಜನರ ಪ್ರತಿನಿಧಿಯಾದ್ದರಿಂದ, ಎಲ್ಲರ ಪರವಾಗಿ ಮಾತನಾಡುತ್ತಿದ್ದೇನೆ.

## ದ.ಕ. ಜಿಲ್ಲೆಯ ಗೇಣಿದಾರರ ಸಮಸ್ಯೆಗಳು ಹಾಗೂ ಪರಿಹಾರ

ಈ ವಿಷಯದಲ್ಲಿ ನಾನು ಜಸ್ಟಿಯವರ ಕೂಡ ಮತ್ತು ಬಾಕಿ ಸದಸ್ಯರ ಕೂಡ ಹೇಳಿದ್ದೇನೆ. ಇದಕ್ಕೆ ಬೇಕಾದ ತಿದ್ದುಪಡಿ ಮಾಡುವಂಥಾದ್ದು ಅಗತ್ಯ ಎಂಬುದಾಗಿ ಅವರು ಒಪ್ಪಿದ್ದಾರೆ. ಅಷ್ಟು ಮಾತ್ರವಲ್ಲ, ಈ ವರದಿಯನ್ನು ನಾವು ಕೊಟ್ಟಿದ್ದೇವೆ. ವರದಿ ಕೊಟ್ಟಕೂಡಲೇ ನಮ್ಮ ಅಭಿಪ್ರಾಯವೇ ಆಗಬೇಕೆಂಬುದಾಗಿ ಹಟ ಇಲ್ಲ. ನ್ಯಾಯವಾದ ಒಂದು ಕಾನೂನು ಬರುವುದಕ್ಕೆ ಎಲ್ಲರ ಅಭಿಪ್ರಾಯ ಅಗತ್ಯ ಎಂಬುದಾಗಿ ಅವರು ಒಪ್ಪಿಕೊಂಡಿದ್ದಾರೆ. ಇದು ಬಹಳ ಸಂತೋಷದ ವಿಚಾರ. ನಾನು ಆಡಳಿತ ಸಂಸ್ಥಾನದ ವಿಷಯವಾಗಿ ಕೆಲವು ಮಾತುಗಳನ್ನು ಹೇಳುವುದು ಅಗತ್ಯವೆಂದು ಕಾಣುತ್ತದೆ. ಇದು ಎಲ್ಲರಿಗೂ ಸಾಗುವಂಥಾದ್ದು. ಇದರಲ್ಲಿ ಯಜಮಾನನ ಸ್ಥಾನ ಬಹಳ ದೊಡ್ಡದು. ಆದರಲ್ಲಿ ಲೈಫ್ ಎಸ್ಟೇಟನ ಒಂದು ಬಹಳ ಕಷ್ಟದ ಸ್ಥಿತಿ ಹೇಳದೇ ವಿಧಿ ಇಲ್ಲ. ಗಂಡಸರಿಗೆ ಕುಟುಂಬದ ಆಸ್ತಿಯಲ್ಲಿ ಲೈಫ್ ಎಸ್ಟೇಟ್ ಇರುವುದರಿಂದ ಜೀವನಾಂಶದ ಹಕ್ಕು ಬರುವಂಥಾದ್ದು ಇಲ್ಲ. ಒಬ್ಬ ಯಜಮಾನನ ಸ್ವಾಧೀನದಲ್ಲಿ ದೊಡ್ಡದಾದ ಆಸ್ತಿ ಇರುವಾಗ – ಒಂದೊಂದು ಕುಟುಂಬದಲ್ಲಿ ನಾನು ಹೇಳಬಲ್ಲೆ– ಸಣ್ಣ ಕುಟುಂಬದಿಂದ ದೊಡ್ಡ ಕುಟುಂಬ ಎಂದರೆ 400ರವರೆಗೂ ಮೆಂಬರ್ಸ್ ಇದ್ದಾರೆ. ಈ ಕುಟುಂಬಗಳ ವ್ಯಾಜ್ಯ ಈಗ ಫೆಡರಲ್ ಕೋರ್ಟಿನಲ್ಲಿ ಇದೆ. ಇದರಲ್ಲಿ ಯಜಮಾನ ಸ್ವಲ್ಪ ಮಟ್ಟಿನ ಭೂಮಿಯನ್ನು ತನ್ನ ಸ್ವಂತ ಸಾಗುವಳಿಗೆ ಇಟ್ಟುಕೊಂಡು ಬಾಕಿಯದನ್ನು ಗೇಣಿಗೆ ಕೊಡುವಂಥಾದ್ದೇ ಹೊರತು ಹಿರಿಯ ಮೆಂಬರಿಗೆ ಸಾಗುವಳಿಗೆ ಕೊಡುವುದಿಲ್ಲ. ಅವರ ಸ್ವಾಧೀನ ಮಾಡಿದರೆ ತನಗೆ ಅದರಲ್ಲಿ ಬೇಕಾದ್ದು ಸಿಕ್ಕುವುದಿಲ್ಲ, ಗೇಣಿಗೆ ಕೊಟ್ಟದ್ದೇ ಆದರೆ ಅದೆಲ್ಲ ತನ್ನ ಹಿಡಿತದಲ್ಲೇ ಇದ್ದು ಒಕ್ಕಲಿಗನಿಂದ ಗೇಣಿ ಬರುತ್ತದೆ ಎಂಬುದಾಗಿ ಅಲ್ಲೆಲ್ಲಾ ಗೇಣಿ ವ್ಯವಸ್ಥೆಯಲ್ಲೇ ಹೆಚ್ಚಿನ ಭೂಮಿ ಇರಲಿಕ್ಕೆ ಕಾರಣವಾಗಿದೆ. ಅದೂ ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 100ಕ್ಕೆ 65 ಜನ ಗೇಣಿದಾರರಾಗಲಿಕ್ಕೆ ಅದು ಒಂದು ಮುಖ್ಯ ಅಂಶ ಎಂದು ಹೇಳಬಯಸುತ್ತೇನೆ. ಅದರ ಮೇಲೆ 1948 ರಲ್ಲಿ ಒಂದು ತಿದ್ದುಪಡಿ ಬಂದು, ಆ ತಿದ್ದುಪಡಿಯಲ್ಲಿ Right for division ಅಂತಾಗಿ ಅದರ ಮೇಲೆ ಒಂದು ದೊಡ್ಡ ಕಷ್ಟ ಬಂದಿದೆ. ಯಾವುದೇ ಒಂದು ಕಾನೂನು ಅಥವಾ ಮಸೂದೆ ಬರಲಿ ನಮ್ಮ ಪ್ರದೇಶದಲ್ಲಿ ನೋಡಿದರೆ ಅದರಿಂದ ವೈಮನಸ್ಯ ಹೆಚ್ಚುತ್ತದೆ, ಕೋರ್ಟಿನಲ್ಲಿ ವ್ಯಾಜ್ಯ ಹೆಚ್ಚುತ್ತದೆ. ಮುಂದೆ ಈ ವಿಷಯವಾಗಿ ಬರುವ ಬಿಲ್‌ನ್ನು ಜನತೆಯಲ್ಲಿ ವೈಮನಸ್ಯ ಉಂಟಾಗದ ಹಾಗೆ ಒಂದು ಶಾಂತತೆ ಉಂಟಾಗುವಂತೆ ವ್ಯಾಜ್ಯಗಳು ಕಡಿಮೆಯಾಗುವಂತೆ ಮಾಡಲು ನಾವು ಆಲೋಚನೆ

ಮಾಡುವುದು ಅಗತ್ಯವಾಗಿದೆ. ಅದರಿಂದಾಗಿ ಅನೇಕ ವ್ಯಾಜ್ಯಗಳು ಇದ್ದು 1956ರಲ್ಲಿ ಹಿಂದೂ ಕೋಡ್ ಸೆಕ್ಷನ್ ಆಕ್ಟಿನಲ್ಲಿ ಅಳಿಯ ಸಂತಾನದ ಆಕ್ಟ್‌ನ್ನು ಜೋಡಿಸಿದರು. ಅದರಿಂದಾಗಿ ಮತ್ತೆ ಪುನಃ ಅನೇಕ ವ್ಯಾಜ್ಯಗಳು ಪ್ರಾರಂಭವಾಗಿವೆ. ಅನೇಕ ವ್ಯಾಜ್ಯಗಳು ಕೋರ್ಟಿನಲ್ಲಿ ಇದ್ದು ಅನೇಕ ಆಸ್ತಿಗಳು ರಿಸೀವರ್ಸ್ ಕಡೆ ಹೋಗಿ ಎಷ್ಟು ಮೆಂಬರ್ಸ್‌ಗೆ ಎಷ್ಟು ಕೊಡಬೇಕು ಎಂಬ ಅಂಶಗಳನ್ನು ಲೆಕ್ಕ ಮಾಡುತ್ತಾ ಇದ್ದಾರೆ. ನಿಜವಾಗಿಯೂ ಉಳುವವನಿಗೇ ಹಕ್ಕು ಬರುವಾಗ, ಅಂತಹ ಭೂಮಿಯ ಗೇಣಿದಾರರಿಗೆ ಬರುವಾಗ, ನಿಜವಾದ ಕೃಷಿಕನಿಗೆ ಆ ಹಕ್ಕು ಬರುವ ಸಮಯದಲ್ಲಿ ಅವನ ಪಾಲಿಗೆ ಬರುವಂತ ಭೂಮಿಯನ್ನು ಸ್ವಾಧೀನಪಡಿಸಿಕೊಂಡು ಅವನು ಅದರಲ್ಲಿ ತನ್ನ ಜೀವನವನ್ನು ಮಾಡುವಂತಹ ಹಕ್ಕನ್ನು ಯಾವ ಕಾನೂನಾದರೂ ಅದರಲ್ಲಿ ಸ್ಥಿರಪಡಿಸುವಂಥಾದ್ದು ಅಗತ್ಯ. ಇದನ್ನು ಒತ್ತಿ ಹೇಳುತ್ತಾ ಇದ್ದೇನೆ. ಆ ಹಕ್ಕು ಸ್ಥಾಪನೆಗೆ ಯಾವ ರೀತಿ ಕಾನೂನಾಗಬೇಕೋ ಆ ರೀತಿ ಆಗುವಂಥಾದ್ದು ಅಗತ್ಯವಾಗಿದೆ. ಈ ಹೊತ್ತು ಅದನ್ನು ಪ್ಲಾನಿಂಗ್ ಕಮಿಷನ್ ಅವರು ಅಭಿಪ್ರಾಯ ಪಟ್ಟಿದ್ದಾರೆ. ಅವರ ಮಟ್ಟಿಗೆ ಮಾತ್ರವಲ್ಲ ಅಥವಾ ಇದು ಒಂದು ಓಟು ಪಡೆಯುವ ಡಿವೈಸು ಎಂಬ ಜನರ ಮಾತು ಇದೆ. ಅದಕ್ಕೆ ಈ ಒಂದು ಕಾನೂನನ್ನು ತರುವಂಥಾದ್ದಲ್ಲ. ಇದನ್ನು ನಾವು ದೇಶದ ಅಭಿವೃದ್ಧಿಗಾಗಿ, ರೈತಾಪಿ ಜನರ ಅಭಿವೃದ್ಧಿಗಾಗಿ ಮತ್ತು ದೇಶದ ಭದ್ರತೆಗಾಗಿ ಯೋಚನೆ ಮಾಡುವಂಥಾದ್ದು ಅಗತ್ಯವಾಗಿದೆ. ಬಡತನವನ್ನು ಹೋಗಲಾಡಿಸಿ, ಜೀವನದ ಮಟ್ಟವನ್ನು ಮೇಲಕ್ಕೆ ಏರಿಸುವಂಥ ಭೂಸುಧಾರಣೆಯನ್ನು ಮಾಡುವಂಥಾದ್ದು ಬಹಳ ಅಗತ್ಯ ಇದೆ. ನಿಜವಾಗಿ ನೋಡಿದರೆ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ pressure on land ಯಾವ ರೀತಿ ಇದೆ ಎಂದರೆ, ಕೆಲವು ಕಡೆಯಲ್ಲಿ ರೈತಾಪಿ ಜನರು ಹೆಚ್ಚಾಗಿದ್ದಾರೆ. ಭೂಮಿ ಬಹಳ ಕಡಿಮೆ ಇದೆ. ಕೆಲವು ಕಡೆಗಳಲ್ಲಿ ಒಂದು ಎಕರೆ, ಅರ್ಧ ಎಕರೆ, ಒಂದೂವರೆ ಎಕರೆಯನ್ನು ಸಾಗುವಳಿ ಮಾಡಿ ಎಷ್ಟೋ ತರಹದಲ್ಲಿ ಜನರು ಕಷ್ಟಪಡುತ್ತಿದ್ದಾರೆ.

**ಶ್ರೀ ಜೆ.ಹೆಚ್. ಶಂಸುದ್ದೀನ್ (ಹೊನ್ನಾವರ):** ಕೆಲವು ಸ್ಥಳಗಳಲ್ಲಿ ದುಬಾರಿ ಬಾಡಿಗೆ ಇದೆಯೇ?

**ಶ್ರೀ ಡಾ|| ಕೆ. ನಾಗಪ್ಪ ಆಳ್ವ:** ನಾನು ಮಾನ್ಯ ಸದಸ್ಯರ ಮಾತನ್ನು ಒಪ್ಪುವುದಿಲ್ಲ. ದುಬಾರಿ ಬಾಡಿಗೆ ಇಲ್ಲ. ಕೆಲವು ಸ್ಥಳಗಳಲ್ಲಿ ಬಾಡಿಗೆ ಬಹಳ ದುಬಾರಿ ಎನ್ನುವುದನ್ನು ನಾನು ಒಪ್ಪಿಕೊಳ್ಳುತ್ತೇನೆ. ಇದೇ ಸಂದರ್ಭದಲ್ಲಿ ಒಂದು ವಿಷಯವನ್ನು ಮಾತ್ರ ನಾನು ಹೇಳುತ್ತೇನೆ. ಎಷ್ಟೋ ಕಾಲದಿಂದ, ನಾನು ಧೈರ್ಯವಾಗಿ ಹೇಳಬಲ್ಲೆ, 100ರಲ್ಲಿ 80, 90ರಷ್ಟು ಜನ ಅನೇಕ ಕಾಲದಿಂದ ಭೂಮಿಯನ್ನು ಸಾಗುವಳಿ

ಮಾಡುತ್ತಾ ಇದ್ದಾರೆ. ಇದಕ್ಕಾಗಿ ನನ್ನ ಒಂದು ಸೂಚನೆ ಏನೆಂದರೆ ಈ ಕೃಷಿಯ ವ್ಯವಸ್ಥೆ, ಜನರ ಕ್ರಮ ಇದನ್ನೆಲ್ಲಾ ನೋಡಿಕೊಂಡು ದಕ್ಷಿಣ ಕನ್ನಡ, ಉತ್ತರ ಕನ್ನಡ, ಕೊಡಗು ಇದನ್ನು ಒಂದಾಗಿ, ಹಳೆಯ ಮೈಸೂರಿನ ಜಿಲ್ಲೆಗಳನ್ನು ಒಂದಾಗಿ, ಬೊಂಬಾಯಿ, ಹೈದರಾಬಾದು ಆರು ಜಿಲ್ಲೆಗಳನ್ನು ಒಂದಾಗಿ ಈ ರೀತಿ ಮೂರು ವಲಯಗಳನ್ನು ಮಾಡಿ, ಯಾವ ರೀತಿಯಲ್ಲಿ ಯಾವುದು ಬೇರೆ ಬೇರೆ ತರಹದಲ್ಲಿ ಜನರ ಮೆಚ್ಚಿಕೆಯನ್ನು ಪಡೆಯುವಂಥ ಕಾನೂನು ಮಾಡಬಹುದು ಎಂಬುದನ್ನು ಆಲೋಚನೆ ಮಾಡುವಂಥಾದ್ದು ಬಹಳ ಅಗತ್ಯವಾಗಿದೆ. ಆ ಮೇಲೆ ಹಿಡುವಳಿಯ ವಿಷಯದಲ್ಲಿ ಬೇಸಿಕ್ ಹೋಲ್ಡಿಂಗ್ ಅಥವಾ ಕನಿಷ್ಠ ಹೋಲ್ಡಿಂಗ್ 400 ಫ್ಯಾಮಿಲಿ, ಹೋಲ್ಡಿಂಗ್ 1,200, ಆಮೇಲೆ ಸೀಲಿಂಗ್ 3,600, 5,400 ಈ ರೀತಿ ಇದೆ. ತಲೆವಾರು ಉತ್ಪನ್ನ 281 ಮತ್ತು ಒಬ್ಬ ಕ್ಲರ್ಕಿನ ಸಂಬಳ 60 ಎಂಬುದಾಗಿ ಅದಕ್ಕೆ ಹೋಲಿಸಿದ್ದಾರೆ. ನಾನು ಹೇಳುವುದಾದರೆ, ಅದಕ್ಕೆ ಹೋಲಿಸಿದ್ದು ಎಷ್ಟಕ್ಕೂ ಸರಿಯಲ್ಲ. ನಾವು ಎಲ್ಲೆಲ್ಲಿ ನೋಡಿದರೂ ಈ ರೈತಾಪಿ ಜನರ ಬೆಳವಣಿಗೆಗೆ ಅದು ಎಲ್ಲೆಲ್ಲಿ ಸಾಧ್ಯ ಉಂಟೋ ಅಲ್ಲೆಲ್ಲ ಕೊಡಬೇಕು. ಆ ರೀತಿ ನೋಡಿದರೆ ನಮ್ಮ ಹೋಲ್ಡಿಂಗ್ ಎನ್ನುವುದು ಇಮ್ಮಡಿಯಾಗಬೇಕು ಎಂಬ ಒಂದು ನನ್ನ ಅಭಿಪ್ರಾಯವನ್ನು ನಾನು ಕೊಡುತ್ತೇನೆ.

## ಕೃಷಿ ಕ್ಷೇತ್ರಕ್ಕೆ ಸೀಲಿಂಗ್ ಬೇಡ

ಈ ಸೀಲಿಂಗ್ ಎನ್ನುವುದು ಒಂದು ಬಹಳ ಮಹತ್ವದ ಪ್ರಶ್ನೆ. ಬೇರೆ ಕ್ಷೇತ್ರಕ್ಕೆ ಈ ಸೀಲಿಂಗ್ ಇಲ್ಲದೇ ಇರುವಾಗ ಕೃಷಿ ಕ್ಷೇತ್ರಕ್ಕೆ ಮಾತ್ರ ಸೀಲಿಂಗ್ ಇಟ್ಟಿರುವುದರಲ್ಲಿ ಯಾವ ತರಹ ಪರಿಣಾಮವಾದೀತು ಎಂಬುದನ್ನು ಹೇಳುವುದು ಕಷ್ಟ. ಜತ್ತಿ ಸಮಿತಿಯವರೂ ಕೂಡ ಬೇರೆ ಕ್ಷೇತ್ರಕ್ಕೂ ಸೀಲಿಂಗ್ ಹಾಕುವುದು ಅಗತ್ಯ ಎಂಬುದಾಗಿ ಒಂದು ಸೂಚನೆಯನ್ನು ಕೊಟ್ಟಿದ್ದಾರೆ. ಇದರಲ್ಲಿ ಬೇಸಾಯಗಾರರೇ ಭೂಮಾಲೀಕರು. ಎಂದರೆ peasant proprietorship ಇರಬೇಕೆಂದು ಹೇಳುತ್ತಾರೆ. ಚೈನಾ ಇಂಡೋನೇಷ್ಯಾದಲ್ಲಿ ಏನು ಪದ್ಧತಿ ಇದೆ ಎಂಬುದನ್ನು ನೋಡಿದರೆ ಈ ಬೇಸಾಯಗಾರ ಭೂಮಾಲೀಕರಿಗೆ ಯಾವ ತರಹದ ಒಂದು ಸೀಲಿಂಗ್ ಎಂಬುದೂ ಕೂಡ ಅಲ್ಲಿಲ್ಲ. ಅವರು ಎಷ್ಟು ಬೇಕಾದರೂ ಕೃಷಿ ಮಾಡುವವರು ಮಾಡಬಹುದು. ಅದಕ್ಕೆ ಬೇಕಾದ ಪ್ರೋತ್ಸಾಹ ಕೊಡುತ್ತಾರೆ.

ಸ್ವಾಮಿ, ನನ್ನ ಅಭಿಪ್ರಾಯದಲ್ಲಿ, ದೇಶದ ಉತ್ಪತ್ತಿಯಲ್ಲಿ ಅರ್ಧ ಭಾಗ ರೈತರಿಂದ ಹಳ್ಳಿಗಳಲ್ಲಿರುವ ಜನರಿಂದ, ಬಾಕಿ ಅರ್ಧ ಭಾಗ ವ್ಯಾಪಾರಸ್ಥರಿಂದ

ಬರುತ್ತದೆ ಎಂದಿರುವಾಗ, ಇಲ್ಲಿ ಒಂದು ಪ್ರತ್ಯೇಕವಾದ ಕ್ಲಾಸ್ ಅಥವಾ ವರ್ಗವನ್ನೇ ತಯಾರು ಮಾಡಿದ ಹಾಗಾಗುತ್ತದೆ. ಒಂದು ಕಡೆ, ಸೋಶಿಯಲಿಸ್ಟಿಕ್ ಪ್ಯಾಟರ್ನ್ ಆಫ್ ಸೊಸೈಟಿ ತಯಾರು ಮಾಡುವುದು. ಮತ್ತೊಂದು ಕಡೆ ಕ್ಯಾಪಿಟಲಿಸ್ಟಿಕ್ ಪ್ಯಾಟರ್ನ್ ತಯಾರಾಗುವ ಸಂಭವವಿದೆ. ಆದುದರಿಂದ, ಸೀಲಿಂಗ್‌ನ್ನು ಎಲ್ಲಕ್ಕೂ ಗೊತ್ತುಮಾಡಬೇಕೆಂದು ನನ್ನ ಅಭಿಪ್ರಾಯ. ಸೀಲಿಂಗ್ ಆದಷ್ಟು ಕೆಳಮಟ್ಟದ್ದಾಗಬೇಕು. ಇದೇ ಸಂದರ್ಭದಲ್ಲಿ ಒಂದು ವಿಷಯವನ್ನು ಹೇಳಬೇಕಾಗಿದೆ. ಅದೇನೆಂದರೆ, ಕಾಫಿ, ತೆಂಗು ಮತ್ತು ಅಡಿಕೆ ತೋಟಗಳ ವಿಷಯ. ಇವುಗಳಲ್ಲಿ ಹಲವು ವರ್ಷಗಳ ಶ್ರಮವಿದೆ. ಇವುಗಳಿಗೆ ಸೀಲಿಂಗ್ ಹಾಕುವುದು ಸರಿಯಲ್ಲ ಎಂದು ನನ್ನ ಅಭಿಪ್ರಾಯ. Resumption ಅಥವಾ ಸ್ವಾಧೀನಪಡಿಸಿಕೊಳ್ಳುವ ಸಂದರ್ಭದಲ್ಲಿ, ವ್ಯವಸಾಯವೇ ಜೀವನೋಪಾಯವಾಗಿದ್ದರೆ ಸ್ವಾಧೀನಪಡಿಸಿಕೊಳ್ಳಬಹುದು, ಜೀವನಕ್ಕೆ ಬೇರೆ ಮಾರ್ಗವಿದ್ದರೆ ಸ್ವಾಧೀನಪಡಿಸಿಕೊಳ್ಳುವಹಾಗಿಲ್ಲ ಎಂದು ಹೇಳಿದ್ದಾರೆ. ಕೃಷಿಯಿಂದ ಮಾತ್ರ ಜೀವನ ಮಾಡಬೇಕು, ಬೇರೆ ರೀತಿ ಮಾಡಬಾರದು ಎಂದು ಹೇಳುವುದರಲ್ಲಿ ಅಷ್ಟು ನ್ಯಾಯವಿಲ್ಲವೆಂದು ನಾನು ಭಾವಿಸುತ್ತೇನೆ. ವಕೀಲ ಯಾವಾಗಲೂ ವಕೀಲನೇ ಆಗಿರಬೇಕು, ಉಪಾಧ್ಯಾಯ ಯಾವಾಗಲೂ ಉಪಾಧ್ಯಾಯನೇ ಆಗಿರಬೇಕು ಎಂದು ಹೇಳಿದ ಹಾಗಾಗುತ್ತದೆ. ಹೀಗೆ watertight compartment ಮಾಡುವುದು ಸರಿಯಲ್ಲ. ಯಾರಿಗೆ ವ್ಯವಸಾಯ ಮಾಡುವ ಅವಕಾಶವಿದೆಯೋ ಅವರಿಗೆ ಕೊಡಬೇಕು. ಭೂಮಾಲೀಕರಿಗೆ ನ್ಯಾಯವಾದ ರೀತಿಯಲ್ಲಿ ತಮ್ಮ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವ ಹಕ್ಕಿರಬೇಕೆಂದು ನಾನು ಸೂಚನೆ ಮಾಡುತ್ತೇನೆ.

## ಸಣ್ಣ ಹಿಡುವಳಿಗಾರರಿಗೆ ಸರ್ಕಾರದ ಸಹಾಯ

ನಾನು ಹೆಚ್ಚು ವಿವರಗಳಿಗೆ ಹೋಗುವುದಿಲ್ಲ. ಬೇಸಿಕ್ ಹೋಲ್ಡಿಂಗ್ ಅಥವಾ ಫ್ಯಾಮಿಲಿ ಹೋಲ್ಡಿಂಗ್ ಬಿಟ್ಟು ವಶಪಡಿಸಿಕೊಳ್ಳಬಹುದೆಂದು ಹೇಳಿದ್ದಾರೆ. ಇದು ಅರ್ಥವಾಗದ ರೀತಿಯಲ್ಲಿದೆ. ನಾನು ಹೇಳುವುದಾದರೆ, ಒಬ್ಬ ಕೃಷಿಕ ಎಷ್ಟೇ ಕಾಲದಿಂದ ವ್ಯವಸಾಯದಲ್ಲಿರಲಿ, ಅವನು ಭೂಮಿಯನ್ನು ಸಾಗುವಳಿ ಮಾಡಿಕೊಂಡು ಜೀವನ ನಡೆಸುವುದನ್ನು ಬಿಟ್ಟು ಬೇರೆ ಕೆಲಸ ಮಾಡಿ ಜೀವನ ಮಾಡಬೇಕೆಂದು ಇಚ್ಛಿಸಿದರೆ, ಅವನಿಗೆ ಸರ್ಕಾರ ಬೇರೆ ವೃತ್ತಿಯನ್ನೊದಗಿಸುವುದು ಒಳ್ಳೆಯದು. ಸಣ್ಣ ಒಕ್ಕಲುಗಳು ಅಥವಾ ಸಣ್ಣ ಸಣ್ಣ ಹಿಡುವಳಿದಾರರ ವಿಷಯದಲ್ಲಿ ಯಾವ ರೀತಿ ಸರ್ಕಾರ ಸಹಾಯ ಸಹಕಾರಗಳನ್ನು ಕೊಡಲು ಸಾಧ್ಯವೋ ಅದನ್ನು ಕೊಡಬೇಕು. ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ ಕೊಟ್ಟು ಇವರಿಗೆ ಈ ಮೂಲಕ ಸಹಾಯ

ಕೊಡುವುದು ಅಗತ್ಯ. ಹೀಗೆ ಮಾಡದಿದ್ದರೆ, ಒಂದು ವರ್ಗದ ಅಭಿವೃದ್ಧಿ ಕುಂಠಿತವಾಗಿ, ಪ್ರತ್ಯೇಕ ವರ್ಗ ನಿರ್ಮಾಣವಾಗುತ್ತದೆ. ಆದುದರಿಂದ ಸಣ್ಣ ಹಿಡುವಳಿದಾರರಿಗೆ ಸರ್ಕಾರ ಸಹಾಯ ಕೊಡುವ ಅಗತ್ಯವಿದೆ ಇದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಬೇಕೆಂದು ಸೂಚಿಸುತ್ತೇನೆ.

## ಭೂ-ಮಾಲೀಕರಿಗೆ ಸೂಕ್ತ ಪರಿಹಾರ

ಇನ್ನು ಭೂಮಾಲೀಕರಿಗೆ ಕೊಡಬೇಕಾದ ಪರಿಹಾರದ ವಿಷಯ. ನನ್ನ ಮಟ್ಟಿಗೆ ಹೇಳುವುದಾದರೆ, ಇಲ್ಲಿ ಸೂಚಿಸಿರುವ ಪರಿಹಾರ ಕಡಿಮೆಯಾಗಿದೆ. ಗೇಣಿಯ 15ರಷ್ಟು ಹಣವನ್ನು ಆಯಾ ಸ್ಥಳದ ಪರಿಸ್ಥಿತಿಯನ್ನು ನೋಡಿಕೊಂಡು ಕೊಡಬಹುದೆಂದು ಸೂಚಿಸಿದ್ದಾರೆ. ಅಲ್ಲದೆ ಸಣ್ಣ ಭೂಮಾಲೀಕರಿಗೆ ಆಗಲೇ ಕೊಡಬೇಕು, ದೊಡ್ಡವರಿಗೆ ಕಂತುಗಳಲ್ಲಿ ಕೊಡಬೇಕು ಎಂದು ತಿಳಿಸಿದ್ದಾರೆ. ಅವರವರಿಗೆ ಬೇಕಾದ ಕೈಗಾರಿಕೆಗಳನ್ನೋ ಅಥವಾ ವೃತ್ತಿಗಳನ್ನೋ ಮಾಡಿಕೊಳ್ಳಲು ಅವರಿಗೆ ಅನುಕೂಲವಾಗುವಂತೆ ಪರಿಹಾರ ದ್ರವ್ಯಗಳನ್ನು ಕೊಡಬೇಕೆಂದು ನಾನು ಸೂಚಿಸುತ್ತೇನೆ.

## ಉಳುವವನೆ ಭೂ-ಮಾಲೀಕ

ಭೂಮಾಲೀಕ, ಗೇಣಿದಾರ ಎನ್ನುವ ಸಂದರ್ಭದಲ್ಲಿ ಭೂ ವ್ಯವಸಾಯ ಮಾಡುವವನೇ ಭೂಮಿಗೆ ಒಡೆಯ ಎನ್ನುವ ತತ್ವವನ್ನು ಒಪ್ಪುತ್ತೇನೆ. ಆದರೆ ಸಧ್ಯಕ್ಕೆ ಇದರ ಕಾರ್ಯಾಚರಣೆ ಸಾಧ್ಯವಿಲ್ಲ. ಈ ಒಂದು ಮಾತನ್ನು ಪದೇ ಪದೇ ಹೇಳುತ್ತಿದ್ದರೆ, ಇದರಿಂದ ವೈಮನಸ್ಯಕ್ಕೆ ಕಾರಣವಾಗುತ್ತದೆ. ಗೇಣಿಯನ್ನು ಉತ್ಪತ್ತಿಯಲ್ಲಿ ಎಷ್ಟು ಭಾಗವೆಂಬುದನ್ನು ನಿಗದಿ ಮಾಡಿರುವ ವಿಷಯ ಬೇರೆ. ಇದನ್ನು ಪ್ರತಿ ವರ್ಷವೂ ಲೆಕ್ಕ ಮಾಡಿರುವುದು ಎಷ್ಟಕ್ಕೂ ಸರಿಯಲ್ಲ. ಹೀಗೆ ಮಾಡಿದರೆ ಅನೇಕ ತೊಂದರೆಗಳು ಬರುತ್ತವೆ. ಆದುದರಿಂದ ನ್ಯಾಯವಾದ ಗೇಣಿಯನ್ನು ಸೂಚನೆ ಮಾಡಬೇಕು. ನನ್ನ ಅನುಭವದಿಂದ ಹೇಳುವುದಾದರೆ, ಸರಾಸರಿ ವಾರ್ಷಿಕ ಒಟ್ಟು ಉತ್ಪತ್ತಿಯಲ್ಲಿ ಮೂರನೆಯ ಒಂದು ಪಾಲು ಗೇಣಿ ಎಂದು ನಿಶ್ಚಯ ಮಾಡಿದರೆ ಹೆಚ್ಚುಮಟ್ಟಿನ ಸಮಾಧಾನಕರವಾಗುತ್ತದೆಯೆಂದು ಹೇಳಬಯಸುತ್ತೇನೆ. ಗೇಣಿಯ ವಿಷಯವಲ್ಲಿ ಅನೇಕ ರೀತಿಯ ಕಷ್ಟಗಳೂ ಮನಃಕ್ಲೇಶಗಳೂ ಬಂದಿವೆ. ಅನೇಕ ರೀತಿಯ ಅಪಪ್ರಚಾರಗಳೂ ನಡೆದಿವೆ. ಗೇಣಿ ಚೀಟಿ ರಿಜಿಸ್ಟರ್ ಆಗಬೇಕು. ರಶೀದಿ ಕೊಡದಿದ್ದರೆ ಅಂಥವರಿಗೆ ಕಠಿಣವಾದ ಶಿಕ್ಷೆ ಕೊಡುವ ಅಗತ್ಯವಿದೆ. ಇದಕ್ಕೆ ಸೂಕ್ತ ತಿದ್ದುಪಡಿಯನ್ನೂ ವಿವರಣೆಯನ್ನೂ ಈ ಬಗ್ಗೆ ಮಾಡುವ ಮಸೂದೆಯಲ್ಲಿ ಸೇರಿಸುವ

ಅಗತ್ಯವಿದೆ. Absentee Landlords ಇಲ್ಲದಂತೆ ಮಾಡಬೇಕೆಂಬ ಸಲಹೆ ಇದೆ. ಕೃಷಿಕೂಲಿಗಾರರರಿಗೆ ವರ್ಷದ 365 ದಿವಸಗಳಲ್ಲಿ ಕೆಲವು ಕಡೆ 100 ದಿವಸ, ಇನ್ನು ಕೆಲವು ಕಡೆ 200 ದಿವಸ ಮಾತ್ರ ಕೆಲಸವಿರುತ್ತದೆ. ಮಿಕ್ಕ ದಿವಸಗಳಲ್ಲಿ ಕೆಲಸವಿರುವುದಿಲ್ಲ. ಆದಕಾರಣ ಇವರಿಗೆ ಈ ಕಾಲದಲ್ಲಿ ಕೆಲಸವನ್ನೊದಗಿಸಲು ಗುಡಿ ಕೈಗಾರಿಕೆ ಏರ್ಪಾಡು ಮಾಡಬೇಕು. ಈ ವರ್ಗದಲ್ಲಿ ಹರಿಜನರೇ ವಿಶೇಷವಾಗಿದ್ದಾರೆ. ನಮ್ಮ ಕಡೆಗಳಲ್ಲಿ ಕೃಷಿಕೂಲಿಗಾರರಲ್ಲಿ ಹರಿಜನರೇ ಹೆಚ್ಚುಮಂದಿ ಇದ್ದಾರೆ. ಒಳ್ಳೆಯ ನುರಿತ ಕೆಲಸಗಾರರು ಹರಿಜನರು. ಇವರಿಗೆ ಸೂಕ್ತ ರೀತಿಯಲ್ಲಿ ಪ್ರೋತ್ಸಾಹ ಕೊಡಬೇಕು. ನಮ್ಮ ಜಿಲ್ಲೆಯಲ್ಲಿ ಯಾವ ರೀತಿ ಕೊಡಬಹುದು, ಬೇರೆ ಜಿಲ್ಲೆಗಳಲ್ಲಿ ಯಾವ ರೀತಿ ಕೊಡಬಹುದು ಎಂಬುದನ್ನು ಆಯಾ ಸ್ಥಳದ ಪರಿಸ್ಥಿತಿಯನ್ನು ನೋಡಿ ಕೆಲಸ ಮಾಡಬೇಕೆಂದು ಹೇಳುತ್ತೇನೆ.

## ಸರ್ವಜನ ಹಿತ ಕಾಪಾಡುವ ಕಾನೂನು ಬರಲಿ

ಮತ್ತೊಂದು ವಿಷಯದಲ್ಲಿ ನನ್ನ ಅಭಿಪ್ರಾಯ ಹೇಳಬೇಕಾಗಿದೆ. ಧರ್ಮ ಸಂಸ್ಥೆಗಳ ಭೂಮಿಯನ್ನೆಲ್ಲಾ ಸಂಪೂರ್ಣವಾಗಿ ಸ್ವಾಧೀನಪಡಿಸಿಕೊಂಡು ಅದರಿಂದ ಬರುವ ಹಣದಿಂದ ಆ ಸಂಸ್ಥೆ ಕೆಲಸ ಕಾರ್ಯಗಳನ್ನೂ ವ್ಯವಹಾರಗಳನ್ನೂ ನಡೆಸಿಕೊಂಡು ಬರಬೇಕಾದರೆ, ಇದನ್ನು ನಾನು ಎಂದಿಗೂ ಒಪ್ಪುವುದಿಲ್ಲ. ಇದು ನ್ಯಾಯವಲ್ಲವೆಂದು ಹೇಳುತ್ತೇನೆ. ಆದರೆ ಈ ಸಂಸ್ಥೆಗಳ ಒಕ್ಕಲುಗಳಿಗೆ, ಸಂಬಂಧಪಟ್ಟ ಗೇಣಿದಾರರುಗಳಿಗೆ, ಈ ಕಾನೂನಿಂದ ಎಷ್ಟು ರೀತಿಯ ಅನುಕೂಲತೆಗಳು ಸಿಕ್ಕುತ್ತವೆಯೋ ಆ ರೀತಿಯ ಎಲ್ಲ ಅನುಕೂಲತೆಗಳೂ ಸಂಪೂರ್ಣವಾಗಿ ಸಿಗಬೇಕೆಂದು ಸೂಚಿಸುತ್ತೇನೆ. ಇಂಥ ಸಂಸ್ಥೆಗಳಲ್ಲಿ ಹಣ ಸರಿಯಾಗಿ ಉಪಯೋಗ ಆಗುವಂತೆ ಅದಕ್ಕೆ ಬೇಕಾದ ಕ್ರಮವನ್ನು ಸರ್ಕಾರ ತೆಗೆದುಕೊಳ್ಳುವುದು ಸೂಕ್ತವೆಂದು ನಾನು ಹೇಳಬಯಸುತ್ತೇನೆ. ನಮ್ಮ ರಾಜ್ಯದಲ್ಲಿ ಒಂದೊಂದು ಪ್ರದೇಶದಲ್ಲಿ ಒಂದೊಂದು ತರಹದ ಕಾನೂನು ಜಾರಿಯಲ್ಲಿರುವುದರಿಂದ ಎಲ್ಲವನ್ನು ಸಮನ್ವಯಗೊಳಿಸುವುದು ಒಂದು ದೊಡ್ಡ ಪ್ರಶ್ನೆಯಾಗಿದೆ. ಒಕ್ಕಲೆಬ್ಬಿಸಿ ಬಿಡುವಂತಾಗುವ ನಿಜ ಸ್ಥಿತಿಯನ್ನು ತಿಳಿದುಕೊಳ್ಳಬೇಕಾಗಿದೆ. ನಿಜವಾಗಿ ಕೃಷಿ ಮಾಡುವವರಿಗೆ ಕೃಷಿಗೆ ಬೇಕಾದ ಸವಲತ್ತು ಭೂಮಿ ಸಿಗದೇ ಇದ್ದರೆ, ಅಂಥವರಿಗೆ ಅವಶ್ಯವಾಗಿ ಅವುಗಳನ್ನು ಒದಗಿಸಬೇಕು. ನಮ್ಮ ಜಿಲ್ಲೆಯಲ್ಲಿ ಸಾಗುವಳಿ ಭೂಮಿ 6,39,339 ಎಕರೆಯಷ್ಟಿದೆ. ಸಾಗುವಳಿ ಯೋಗ್ಯ ಬಂಜರು ಜಮೀನು 1,76,847 ಎಕರೆ ಇದೆ. ಸಾಗುವಳಿ ಯೋಗ್ಯ ಬಂಜರು ಜಮೀನು ಯಾವ ರೀತಿ ಸಾಗುವಳಿ ಎಂಬುದನ್ನು ಸರ್ಕಾರ ಆಲೋಚನೆ

ಮಾಡಬೇಕು. ಬಂಜರು ಬಿದ್ದ ಭೂಮಿ 71 ಸಾವಿರ ಎಕರೆಗಳಷ್ಟು ಇದೆ. ಇದಕ್ಕಾಗಿ ಸರ್ಕಾರ ಒಂದು ದೊಡ್ಡ ಯೋಜನೆಯನ್ನು ತಯಾರಿಸಬೇಕು. ಕೃಷಿ ಕೆಲಸಗಾರರಿಗೆ, ಹರಿಜನರಿಗೆ ಸಾಧ್ಯವಿರುವ ಎಲ್ಲಾ ಸಹಾಯ ಸಹಕಾರ ಒದಗಿಸಿಕೊಡಬೇಕು. ಈ ಸಭೆಯ ಮುಂದೆ ಒಂದು ಮಸೂದೆ ಕಾನೂನನ್ನು ತಂದು ಎಲ್ಲ ಅಂಶಗಳನ್ನು ಕೂಲಂಕುಷವಾಗಿ ಚರ್ಚಿಸಿ ವಿಮರ್ಶೆ ಮಾಡಲಾಗುವುದು. ಅಲ್ಲದೆ ಅಗತ್ಯವೆಂದು ಕಂಡುಬಂದರೆ ಆ ಮಸೂದೆಯನ್ನು ಸೆಲೆಕ್ಟ್ ಕಮಿಟಿಗೂ ಸಹ ಕಳಿಸಿ ಕೂಲಂಕುಷವಾಗಿ ಈ ವಿಷಯವನ್ನು ಪರಿಶೀಲಿಸಿ ಎಲ್ಲರಿಗೂ ಹಿತವಾಗುವ ಹಾಗೆ ಒಂದು ಕಾನೂನು ಬರುವುದು ಬಹಳ ಅವಶ್ಯಕವಾಗಿದೆ. ಈ ವಿಷಯದಲ್ಲಿ ಸರ್ಕಾರದ ಜವಾಬ್ದಾರಿ ಬಹಳ ಮಹತ್ವವಾದದ್ದು ಎಂದು ಹೇಳಬೇಕಾಗಿದೆ. ಈ ಕಾನೂನು ಪಾಸಾದೊಡನೆ ಹಳ್ಳಿಗಳಲ್ಲಿಯ ರೈತಾಪಿ ಜನರಲ್ಲಿ ಸರಿಯಾದ ಪ್ರಚಾರ ಮಾಡಿ ಯಾವ ರೀತಿ ಅವರು ತಮ್ಮ ಹಕ್ಕು ಬಾದ್ಯತೆಗಳನ್ನು ರಕ್ಷಿಸಿಕೊಳ್ಳಬೇಕು ಎಂಬುದಕ್ಕೆ ಸಹಾಯ ಮಾಡಬೇಕು. ಹಾಗೂ ಕಾನೂನಿನ ರೀತಿ ನೀತಿಗಳನ್ನು ಸವಿಸ್ತಾರವಾಗಿ ತಿಳಿಸುವಂತೆ ಮಾಡಿದರೆ ಜನರಲ್ಲಿ ಒಂದು ಒಳ್ಳೆಯ ಭಾವನೆ ಬರುತ್ತದೆ. ಆದ್ದರಿಂದ ಈ ಕಾನೂನಿನ ಬಗ್ಗೆ ಜನರು ಸುಖಿಯಾಗುವಂತೆ, ಸಂತೋಷ ಉಂಟಾಗುವಂತೆ ಮಾಡಿ ಸುಖೀ ರಾಜ್ಯ ಸ್ಥಾಪನೆಯಾಗುವುದಕ್ಕೆ ಎಲ್ಲರೂ ಸಹಕರಿಸಬೇಕೆಂದು ಕೇಳಿಕೊಂಡು ನನ್ನ ಭಾಷಣವನ್ನು ಮುಗಿಸುತ್ತೇನೆ.

## ಆಯವ್ಯಯ ಅಂದಾಜು–1960

**14ನೇ ಮಾರ್ಚ್ 1960**

### ಆಡಳಿತ ಲೋಪದೋಷಗಳಿಗೆ ವೈದ್ಯರ ಸಲಹಾ ಚಿಕಿತ್ಸೆ

**ಶ್ರೀ ಕೆ. ನಾಗಪ್ಪ ಆಳ್ವ [ಪಾಣೆ, ಮಂಗಳೂರು]** : ಅಧ್ಯಕ್ಷರೇ, ಮೈಸೂರು ರಾಜ್ಯದ ಆಯವ್ಯಯ ಪಟ್ಟಿಯನ್ನು ಸ್ವಾಗತಿಸುತ್ತ ಇದು ಪ್ರಗತಿಪಥದಲ್ಲಿದೆಯೆಂಬುದನ್ನು ಒಪ್ಪಿ ಇದರ ಸಂಬಂಧವಾದ ಲೆಕ್ಕಪತ್ರಗಳು ಒಳ್ಳೆಯ ರೀತಿಯಲ್ಲಿಯೂ ವಿವರ ಪೂರ್ಣವಾಗಿಯೂ ಕೊಡಲ್ಪಟ್ಟಿದೆ ಎಂದು ಹೇಳಬಯಸುತ್ತೇನೆ. ಇದು ಮಾತ್ರವಲ್ಲ, ನಿಜವಾಗಿ ಖೋತಾ ಬಡ್ಜೆಟ್ ಆಗುವುದಾಗಿದ್ದರೂ ಕೂಡ ಉಳಿತಾಯವಾಗಿ ಯೋಜಿಸಲ್ಪಟ್ಟಿದೆ; ಇದಕ್ಕಾಗಿ ಅರ್ಥಮಂತ್ರಿಗಳನ್ನು ನಾನು ಅಭಿನಂದಿಸುತ್ತೇನೆ. ಸುಂದರ ರಾಜ್ಯದ ಸಾರ್ವತ್ರಿಕ ಅಭಿವೃದ್ಧಿಗಾಗಿ ನಾವು ಅನೇಕ ಕೆಲಸಗಳನ್ನು ಮಾಡಿದ್ದೇವೆ. ಜನತೆಯ ಸಹಕಾರ ಪೂರ್ಣವಾಗಿ ನಮಗೆ ಬೇಕೆಂದು ಅರ್ಥ

ಮಂತ್ರಿಗಳು ತಿಳಿಸಿದ್ದಾರೆ. ಈ ಸುಂದರ ರಾಜ್ಯ ಸುಖೀರಾಜ್ಯವಾಗಬೇಕು. ಸುಖ ಸಂತೋಷಗಳಿಂದ ಜನರು ಕೂಡ ಸರ್ಕಾರದ ಕಾರ್ಯಗಳಲ್ಲಿ ಭಾಗವಹಿಸಿ, ಸಹಕಾರ ಕೊಟ್ಟು ದೇಶದ ಅಭಿವೃದ್ಧಿಗಾಗಿ ದುಡಿದರೆ ದೇಶದ ಸರ್ವತೋಮುಖ ಅಭಿವೃದ್ಧಿಯಾದೀತು. ಇದಕ್ಕೆಲ್ಲ ಸಂಸ್ಥಾನದ ಆಡಳಿತ ಒಳ್ಳೆಯ ರೀತಿಯಲ್ಲಿ, ಉತ್ತಮ ರೀತಿಯಲ್ಲಿ ನಡೆಯಬೇಕಾದುದು ಬಹಳ ಅಗತ್ಯ. ನಾನು ಮನಃಪೂರ್ವಕವಾಗಿ ಮನಸ್ಸಾಕ್ಷಿಗನುಸಾರವಾಗಿ, ಮನಬಿಚ್ಚಿ ಹೇಳುವುದಾದರೆ, ನಮ್ಮ ರಾಜ್ಯದಲ್ಲಿ ಮನಸ್ಸಿನ ಮತ್ತು ಶಾರೀರಕ ಸುಖವಿಲ್ಲ; ಇಲ್ಲಿ ಒಂದು ರೋಗ ತಗುಲಿದೆ, ಈ ರೋಗ ಬೆಳೆಯುತ್ತಿದೆ ಎಂದು ನನ್ನ ಭಾವನೆ.

**ಶ್ರೀ ಕಡಿದಾಳ್ ಮಂಜಪ್ಪ :** ಇದನ್ನು ಗುಣಪಡಿಸಲು ಡಾಕ್ಟರಿದ್ದೀರಲ್ಲ ![ನಗು]

**ಶ್ರೀ ಕೆ. ನಾಗಪ್ಪ ಆಳ್ವ :** ಈ ರೋಗಕ್ಕೆ ಯಾವ ರೀತಿ ಚಿಕಿತ್ಸೆ ಮಾಡಬೇಕೆಂದು ನಾವು ಆಲೋಚನೆ ಮಾಡುವುದು ಬಹಳ ಅಗತ್ಯ. ಆಡಳಿತದಲ್ಲಿ ಲೋಪದೋಷಗಳಿವೆ, ನ್ಯೂನತೆಗಳಿವೆ ಎಂಬುದನ್ನು ಒಪ್ಪಿಕೊಳ್ಳುವುದು ಅಗತ್ಯ. ತಪ್ಪನ್ನೊಪ್ಪಿಕೊಳ್ಳುವುದು ಮನುಷ್ಯನ ಧರ್ಮ. ಅದರಂತೆ ಸರ್ಕಾರದವರೂ ಕೂಡ ತಪ್ಪನ್ನೊಪ್ಪಿಕೊಂಡು ಅದನ್ನು ತಿದ್ದಿಕೊಂಡು ಜನತೆಯ ಸೇವೆಯನ್ನು ಮಾಡುವುದು ಬಹಳ ಅಗತ್ಯ.

## ಗಡಿ ವಿವಾದಕ್ಕೆ ನ್ಯಾಯಯುತ ಪರಿಹಾರ

ರಾಜ್ಯದ ಪುನರ್ ವಿಂಗಡಣೆ ಆದನಂತರ ಅನೇಕ ಸಮಸ್ಯೆಗಳು ನಮ್ಮ ಎದುರು ಬಂದುವು. ಅಂಥ ಸಮಸ್ಯೆಗಳು ಅದರಲ್ಲೂ ಮಹತ್ತರ ಸಮಸ್ಯೆ ಎಂದರೆ, ಗಡಿವಿವಾದಗಳು. ಈಕ್ವೇಶನ್–ಆಫ್–ಪೋಸ್ಟ್ಸ್ ಮತ್ತು ಏಕರೀತಿಯ ಕಾನೂನುಗಳು.

ಇದಕ್ಕೆ ಇನ್ನೂ ಪರಿಹಾರ ದೊರೆಯಲಿಲ್ಲ. ಧೈರ್ಯವಾಗಿ ಸರ್ಕಾರ ಕೆಲಸ ಮಾಡಲಿಲ್ಲ. ಗಡಿ ವಿವಾದವನ್ನು ನ್ಯಾಯವಾದ ರೀತಿಯಲ್ಲಿ ಬಗೆಹರಿಸಬೇಕು. ಅದನ್ನು ಬೇಗ ಬಗೆಹರಿಸಬೇಕು. ನ್ಯಾಯವಾದ ಕೇಳಿಕೆಗಳಿಗೆ ಮನ್ನಣೆ ಸಿಕ್ಕಬೇಕು. ಯಾವ ವಿಧವಾದ ಗಡಿಯೇ ಆಗಲಿ, ಅದನ್ನು ಒಳ್ಳೆಯ ರೀತಿಯಲ್ಲಿ ಸಮಾಧಾನದಿಂದ ಚರ್ಚಿಸಿ ಇತ್ಯರ್ಥಗೊಳಿಸಬೇಕು. ನ್ಯಾಯವಾದ ಬೇಡಿಕೆಗೆ ಬೆಲೆ ಕೊಡಬೇಕು. ಕಾಸರಗೋಡಿನ ವಿಷಯವನ್ನು ಪ್ರತ್ಯೇಕವಾಗಿ ಹೇಳಬೇಕಾಗುತ್ತದೆ. ಕಾಸರಗೋಡಿನ ಜನರು ನೊಂದವರಾಗಿ ಬಹಳ ಸಭ್ಯತೆಯಿಂದ ತಮ್ಮ ಕೇಳಿಕೆಯನ್ನು ಜನತೆಯ ಕೇಳಿಕೆಗೆ ಮನ್ನಣೆ ಕೊಟ್ಟು ಸರ್ಕಾರ ತಕ್ಕ ಕಾರ್ಯಕ್ರಮವನ್ನು ತೆಗೆದುಕೊಳ್ಳ ಬೇಕಾಗಿದೆ ಎಂದು ನಾನು ಕೇಳಿಕೊಳ್ಳುತ್ತೇನೆ. ಏಕರೀತಿಯ ಕಾನೂನುಗಳು ಕೆಲವು ಆಗಿವೆ;

ಕೆಲವು ಆಗಿಲ್ಲ. ನನಗೆ ತಿಳಿದಮಟ್ಟಿಗೆ 60–70 ಬಿಲ್ಲುಗಳು ಬಾಕಿ ಇವೆ. ಅಂಥ ಬಿಲ್ಲುಗಳನ್ನು ಆದಷ್ಟು ಬೇಗನೆ ಕಾರ್ಯಗತ ಮಾಡುವುದು ಅಗತ್ಯ. ಸರ್ಕಾರಿ ನೌಕರರ ವಿಚಾರದಲ್ಲಿ ಕೆಲವು ಮಾತುಗಳನ್ನು ಹೇಳುವುದು ನನ್ನ ಕರ್ತವ್ಯ ಎಂದು ಭಾವಿಸುತ್ತೇನೆ. ಸರ್ಕಾರಿ ನೌಕರರು ಇಂಟಿಗ್ರೇಶನ್ ಆಗಿ ಇಂದಿಗೆ ನಾಲ್ಕು ವರ್ಷಗಳಾಗುತ್ತ ಬಂದರೂ ಕೂಡ...

**ಶ್ರೀ ಎನ್. ರಾಚಯ್ಯ :** ಸರ್ಕಾರದವರು ಗಡಿ ಪ್ರಶ್ನೆ ವಿಚಾರದಲ್ಲಿ ಧೈರ್ಯವಾಗಿ ತೀರ್ಮಾನವನ್ನು ತೆಗೆದುಕೊಳ್ಳಲಿಲ್ಲ ಎಂದು ಹೇಳುವಾಗ ನನಗೆ ಜ್ಞಾಪಕ ಬರುತ್ತದೆ. ಈ ಮಾನ್ಯ ಸಭೆ ಸರ್ಕಾರ ತೆಗೆದುಕೊಂಡ ನಿಲುವನ್ನು ಸರಿಯಾಗಿ ಮತ್ತು ಧೈರ್ಯವಾಗಿ ನಿರ್ವಹಿಸಿದೆ ಎಂದು ಹೇಳಿದ್ದಾರೆ.

## ಸರ್ಕಾರಿ ನೌಕರರ ಸ್ಥಿರತೆಯ ಕೊರತೆ

**ಶ್ರೀ ಕೆ. ನಾಗಪ್ಪ ಆಳ್ವ :** ಸರ್ಕಾರಿ ನೌಕರರ ವಿಚಾರದಲ್ಲಿ ಈ ತರಹದ ಒಂದು ಸ್ಥಿರತೆ ಇರದೆ, ಬಹಳ ತೊಂದರೆಯಾಗಿದೆ. ಮೊದಲನೆಯ ತರಗತಿಯ ಸರ್ಕಾರಿ ನೌಕರರ ವಿಚಾರದಲ್ಲಿ ಮಾತ್ರವಲ್ಲ, ಪ್ರಾಂತ್ಯಗಳ ಮುಖ್ಯಾಧಿಕಾರಿಗಳ ವಿಚಾರದಲ್ಲಿಯೂ ಕೂಡ ಸೀನಿಯಾರಿಟಿ ಲಿಸ್ಟ್ ಸ್ಪಷ್ಟವಾಗಿ ಆಗದೆ, ಎಲ್ಲ ತರಹದ ಅನುಕೂಲಗಳು ಆಗದೆ, ಎಲ್ಲೆಲ್ಲಿ ನೋಡಿದರೂ ಸಂಶಯ ಮತ್ತು ಅದರಿಂದಾಗಿ ಜಿಗುಪ್ಸೆ ಉಂಟಾಗಿದೆ ಎಂದು ನನಗೆ ಕಾಣುತ್ತದೆ.

**ಶ್ರೀ ಕಡಿದಾಳ್ ಮಂಜಪ್ಪ:** ನಾನು ಮಾನ್ಯ ಸದಸ್ಯರ ಮಾತನ್ನು ಒಪ್ಪುವುದಿಲ್ಲ.

**ಶ್ರೀ ಕೆ. ನಾಗಪ್ಪ ಆಳ್ವ :** ಈಕ್ವೇಷನ್ಸ್–ಆಫ್ ಪೋಸ್ಟ್ಸ್ ಇತ್ಯರ್ಥವಾಗಿಲ್ಲ. ಕೆಲವು ನೌಕರರ ವಿಷಯದಲ್ಲೂ ಕೂಡ ಸರಿಯಾಗಿ ಯಾರು ಮೇಲೆ, ಯಾರು ಕೆಳಗೆ ಎಂಬುದನ್ನು ಮಾಡದೆ ಇರುವುದರಿಂದ ಅಸ್ಥಿರತೆ ಮಾತ್ರವಲ್ಲ, ಅಸಡ್ಡೆ, ಬೇಸರ, ಸರ್ಕಾರಿ ನೌಕರರಲ್ಲಿ ಬಂದು ಹೋಗಿ ಸಂಸ್ಥೆಯ, ಬಿಕ್ಕಟ್ಟು ನಡೆಯುತ್ತಿದೆ, ಅದರಿಂದಾಗಿ ಕಾಗದಪತ್ರಗಳ ವಿಲೇವಾರಿ ತಡವಾಗುವುದು ಮಾತ್ರವಲ್ಲ, ಮಿಸ್ಸಿಂಗ್ ಆಫ್ ಫೈಲ್ಸ್ ಆಗಿ ಅದು ಒಂದು ರೋಗವಾಗಿ ಕುಳಿತಿದೆ. ಈ ವಿಷಯದಲ್ಲಿ ಸರಿಯಾದ ಕಾರ್ಯಕ್ರಮವನ್ನು ಸರಕಾರದವರು ತೆಗೆದುಕೊಳ್ಳಬೇಕು. ಯಾವ ನೌಕರರು ಎಷ್ಟು ಸಮಯ ಒಂದು ಫೈಲನ್ನು ಡಿಲೇ ಮಾಡುತ್ತಿದ್ದಾರೆ ಎಂದು ಹೇಳಲಿಕ್ಕೆ ತಡವಾಯಿತು. ಯಾವ ಕಾರಣದಿಂದ ಯಾರಿಗೆ ಅನ್ಯಾಯವಾಗಿದೆ

ಎಂಬುದನ್ನು ಸಂಬಂಧಪಟ್ಟ ಮಂತ್ರಿಗಳು ವಿಚಾರಿಸುವುದು ಮಾತ್ರವಲ್ಲ, ಸಾಧಾರಣವಾಗಿ ಮೂರು ತಿಂಗಳುಗಳಿಗೆ ಒಮ್ಮೆ ಈ ವಿಷಯವನ್ನು ಕೂಲಂಕುಷವಾಗಿ ತಿಳಿದು ತಪ್ಪಿತಸ್ಥರಿಗೆ ಶಿಕ್ಷೆಯನ್ನು ಕೊಡಬೇಕಾದುದು ಅಗತ್ಯ. ಒಂದು ವರ್ಷದ ಮುಂಚೆ ಡೆಪ್ಯುಟಿ ಮಿನಿಸ್ಟ್ರರವರು ಕಂಪ್ಲೆಂಟ್ ಮಿನಿಸ್ಟರು ಎಂದು ಮಾಡಿದರು. ಎಲ್ಲೆಲ್ಲಿ ಗ್ರಿವೆನ್‌ಸೆಸ್ ಇದೆ, ಅದನ್ನು ಡೆಪ್ಯುಟಿ ಮಿನಿಸ್ಟರ್ ಅವರ ಮುಖಾಂತರ ತಿಳಿಸಿ, ಪರಿಹಾರವನ್ನು ಹುಡುಕಬೇಕೆಂದು ಮಾಡಿದರು. ನಾನು ಧೈರ್ಯವಾಗಿ ಹೇಳಬಲ್ಲೆ. ಎಷ್ಟೋ ಜನರು ಅವರ ಕಷ್ಟ ಸುಖಗಳನ್ನು ಮಂತ್ರಿಗಳಿಗೆ ತಿಳಿಸಿದರೂ ಅದಕ್ಕೆ ಪರಿಹಾರ ಸಿಕ್ಕಿದ್ದು ಬಹಳ ಕಡಿಮೆ ಎಂದು ನಾನು ಸರಕಾರದವರನ್ನು ಕೇಳಿಕೊಳ್ಳುವುದು, ಮಂತ್ರಿಗಳನ್ನು ಕೇಳಿಕೊಳ್ಳುವುದು ಇಷ್ಟೆ. ತಾವು ಆ ವಿಷಯದಲ್ಲಿ ಕೆಲಸ ಮಾಡಿದ್ದರೆ ಕಷ್ಟಗಳು ಏತಕ್ಕೆ ಪರಿಹಾರವಾಗಿಲ್ಲ? ಯಾವ ತರಹ ಕನ್‌ಸ್ಟ್ರಕ್ಟೀವ್ ಸಜೆಷನ್ಸ್ ಕೊಡುತ್ತೀರ? ಎಂದು ಹೇಳುವುದು ಮಾತ್ರವಲ್ಲ. ಕಂಪ್ಲೈಂಟ್ಸ್ ಪೋರ್ಟ್‌ಪೋಲಿಯೋವನ್ನು ಒಬ್ಬರು ಮಂತ್ರಿಗಳಿಗೆ ಕೊಡುವುದು ಅಗತ್ಯವಿರುತ್ತದೆ. ಈ ತರಹ ಜನರ ಕೇಳಿಕೆ, ಬೇಡಿಕೆ ಕಷ್ಟ ನೋಡಿದರೆ, ಅದನ್ನು ಹೇಳಲಿಕ್ಕೆ ಸಾಧ್ಯವಿಲ್ಲ. ಎಲ್ಲಿ ನೋಡಿದರೂ ಜನರ ಕಷ್ಟ ಎಷ್ಟರಮಟ್ಟಿಗೆ ಆಗಿದೆ ಎಂದರೆ, ಸರ್ಕಾರಕ್ಕೆ ಬೇಕಾದ ಒಬ್ಬ ಎಂ.ಎಲ್.ಎ. ಬಂದು ತಿಳಿಸಿದರೆ, ಆ ಕೆಲಸ ಬೇಗನೆ ಆಗಿ ಹೋಗುತ್ತದೆ. ಅದು ನನಗೆ ತಿಳಿದ ವಿಚಾರ. ಸೆಕ್ರೆಟರಿಗಳಿಗೆ ಅಥವಾ ಬೇರೆ ಸಂಬಂಧಪಟ್ಟ ಅಧಿಕಾರಿಗಳಿಗೆ ಏನಾದರೂ ಮಾಡಿ ಇದನ್ನು ಸುಧಾರಿಸಿ ಕೊಡಿ ಎಂದು ಕೇಳಿದರೆ ನಡೆಯುವಂಥಾದ್ದು ನಡೆಯುತ್ತದೆ. ಇದರಿಂದ ಸರಕಾರಿ ಅಧಿಕಾರಿಗಳ ಮೇಲೆ ಕೆಟ್ಟ ಪರಿಣಾಮ ಉಂಟಾಗುತ್ತದೆ. ಇವೊತ್ತು ಜನತೆಗಾಗಿ ಸರಕಾರವೋ, ಸರಕಾರಕ್ಕಾಗಿ ಜನತೆಯೋ ಎನ್ನುವ ಅಭಿಪ್ರಾಯ ಬರುವ ಹಾಗೆ ಕಾಣುತ್ತದೆ. ಜನರ ಕಷ್ಟ ಸುಖಗಳನ್ನು ತಿಳಿಯುವಷ್ಟು ಸರಕಾರ ಏರ್ಪಾಡು ಮಾಡಬೇಕು.

## ವಾರ್ತಾ ಇಲಾಖೆಯ ವ್ಯಾಪ್ತಿ ವಿಸ್ತರಿಸಿ

ಆಮೇಲೆ ಇದೇ ಸಂದರ್ಭದಲ್ಲಿ ವಾರ್ತಾ ಇಲಾಖೆಯ ವಿಷಯವನ್ನು ಹೇಳಬಯಸುತ್ತೇನೆ. ವಾರ್ತಾ ಇಲಾಖೆಯಲ್ಲಿ ಉತ್ತಮ ಅಧಿಕಾರಿಗಳು ಇದ್ದರೂ ಅವರ ಪ್ರಯೋಜನವನ್ನು ಸರಕಾರ ಪಡೆಯುತ್ತ ಇಲ್ಲ. ವಾರ್ತಾ ಇಲಾಖೆಯು ದೊಡ್ಡ ದೊಡ್ಡ ತಜ್ಞರ ಅಭಿಪ್ರಾಯಗಳನ್ನು ಕೊಡುವುದು ಅಥವಾ ದೊಡ್ಡ ಸಮಾರಂಭಗಳ ಫೋಟೋವನ್ನು ಪಬ್ಲಿಶ್ ಮಾಡುವುದು, ಈ ರೀತಿ ಇರುವುದರಿಂದ ಜನಸಾಮಾನ್ಯರು ವಿದ್ಯೆ ಇಲ್ಲದೆ, ಕೃಷಿಕರ ಏನೊಂದು ವಿಚಾರಗಳು ಮತ್ತು ಅವರ ಕರ್ತವ್ಯಗಳೇನು? ಯಾವ ರೀತಿಯಲ್ಲಿ ಯಾವ ಸರಕಾರಿ ಕೆಲಸಗಳಲ್ಲಿ ಸಹಕರಿಸ

ಬೇಕು? ಎಂಬುದನ್ನು ತಿಳಿಯುವಂತೆ ಮಾಡುತ್ತ ಇಲ್ಲ. ವಾರ್ತಾ ಇಲಾಖೆಯನ್ನು ವಿಸ್ತರಿಸಿ ಅದರ ಮೂಲಕ ಜನಸಾಮಾನ್ಯರಿಗೆ, ಕನ್‌ಸ್ಟ್ರಕ್ಟಿವ್ ಸಜೆಶನ್ಸ್ ಕೊಡುವುದು, ಮತ್ತು ಅವರ ಕಷ್ಟಗಳ ವಿಷಯದಲ್ಲಿ ಯಾವ ತರಹ ಅವರು ಸರಕಾರವನ್ನು ಕೇಳಿಕೊಳ್ಳಬಹುದು, ಅವರ ಕಷ್ಟವನ್ನು ಹೇಗೆ ಪರಿಹರಿಸಬಹುದು ಎಂಬ ವಿಷಯ ಹಳ್ಳಿಯ ಜನಗಳಿಗೆ ತಿಳಿಸುವಂಥಾದ್ದು ಅಗತ್ಯ ಎಂಬುದನ್ನು ನಾನು ಭಾವಿಸುತ್ತೇನೆ. ಆ ರೀತಿಯಲ್ಲಿ ಮಾಡಬೇಕೆಂದು ಸರಕಾರವನ್ನು ಕೇಳಿಕೊಳ್ಳುತ್ತೇನೆ. ಸರಕಾರಿ ನೌಕರರಿಗೆ ಕೆಲಸ ಮಾಡಲು ಉತ್ತೇಜನ ಇರಬೇಕು. ಯಾರಲ್ಲಿ ದಕ್ಷತೆ ಇದೆಯೋ, ಯಾರು ಸರಿಯಾಗಿ ಕೆಲಸ ಮಾಡುತ್ತಾರೋ, ಅವರಿಗೆ ಪ್ರೋತ್ಸಾಹ ಕೊಡಬೇಕು. ಒಳ್ಳೆಯ ತರಹದ ಕೆಲಸ ಮಾಡುವವರಿಗೆ ಬೇಕಾದ ರೀತಿಯಲ್ಲಿ ಪ್ರೋತ್ಸಾಹ ಕೊಡಬೇಕು. ಈಗ ಸರಿಯಾದ ರೀತಿಯಲ್ಲಿ ಕೆಲಸವಾಗುತ್ತ ಇಲ್ಲ. ಪ್ರಮೋಷನ್ಸ್ ಕೂಡ ಇಷ್ಟ ಬಂದ ಹಾಗೆ ಆಗುತ್ತ ಇವೆ. ಅದರಲ್ಲಿ ಒಂದು ಮಾತನ್ನು ಹೇಳಬೇಕಾಗುತ್ತದೆ.

**ಶ್ರೀ ಕಡಿದಾಳ ಮಂಜಪ್ಪ:** ನನಗೆ ಕೆಲವು ನಿದರ್ಶನಗಳು ಬೇಕು.

**ಶ್ರೀ ಕೆ. ನಾಗಪ್ಪ ಆಳ್ವ :** ಇನ್‌ಸ್ಟೆನ್‌ಸಸ್ ಇವೆ, ನಾನು ತಮ್ಮಲ್ಲಿ ಬಂದು ಹೇಳುತ್ತೇನೆ.

**ಶ್ರೀ ಕೆ. ಪಿ. ರೇವಣಸಿದ್ದಪ್ಪ :** ಅವರು ಹೇಳುವುದು ಪಬ್ಲಿಕ್‌ಗೆ ಗೊತ್ತಾಗ ಬೇಕು.

**ಶ್ರೀ ಎನ್.ರಾಚಯ್ಯ :** ತಾವು ಇನ್‌ಸ್ಟೆನ್‌ಸಸ್ ಇದ್ದರೆ ಸಭೆಯಲ್ಲಿ ಹೇಳಿ. ಸುಮ್ಮನೆ ಅಧಿಕಾರಿಗಳಿಗೆ ಇಷ್ಟ ಬಂದ ರೀತಿಯಲ್ಲಿ ಪ್ರಮೋಷನ್ ಕೊಟ್ಟಿದ್ದಾರೆಂದು ಹೇಳುವುದು ಸರಿಯಲ್ಲ. ಇನ್‌ಸ್ಟೆನ್‌ಸಸ್ ಕೊಡಲಿ, ಇಲ್ಲವಾದರೆ ಸುಮ್ಮನೆ ಈ ರೀತಿ ಹೇಳಬಾರದು.

**ಅಧ್ಯಕ್ಷರು :** ಇನ್‌ಸ್ಟೆನ್‌ಸಸ್ ಹಿಂದುಗಡೆ ಕೊಡುತ್ತಾರೆ. ಇಲ್ಲಿ ಬೇಡ.

**ಶ್ರೀ ಕೆ. ನಾಗಪ್ಪ ಆಳ್ವ :** ಒಂದು ವಿಷಯ ನನ್ನ ಗಮನಕ್ಕೆ ಬರುತ್ತಿದೆ. ಅಂದು ಗೋರ್‌ವಾಲಾ ರಿಪೋರ್ಟ್ ಮೇಲೆ ಮಾತನಾಡಲು ಸಂದರ್ಭ ಸಿಕ್ಕಲಿಲ್ಲ. ನಮ್ಮ ಮೈಸೂರಿನ ಮುಖ್ಯ ಕಾರ್ಯದರ್ಶಿಗಳಾಗಿದ್ದ ಶ್ರೀ ಪಿ.ವಿ.ಆರ್.ರಾವ್ ಅವರ ವಿಷಯವಾಗಿ ಅನೇಕ ತರಹದ ಟೀಕೆಗಳು ಬಂತು. ತಡೆಯಲಾರದ ರೀತಿಯಲ್ಲಿ ಟೀಕೆ ಮಾಡಿದರು. ಅದನ್ನು ಎಷ್ಟಕ್ಕೂ ಖಂಡಿತ ಒಪ್ಪಲಾರೆ. ಅವರ ವಿಷಯದಲ್ಲಿ ನನ್ನ ಅಭಿಮಾನವುಂಟು. ಏಕೆಂದರೆ ಅವರು ಒಳ್ಳೆಯ ರೀತಿಯಲ್ಲಿ ಕೆಲಸ ಮಾಡಿದರು. ಅವರು ದಿವಸಕ್ಕೆ 12 ಘಂಟೆ ಕೆಲಸ ಮಾಡಿದ್ದಾರೆ. ಇದು ನನ್ನ ಅನುಭವ. ನಾನು ಎಂ.ಎಲ್.ಎ. ಆಗಿ ಇದ್ದವನು. ಅನೇಕ ವಿಚಾರಗಳು ನನಗೆ ಗೊತ್ತಿವೆ.

**ಶ್ರೀ ಸಿ.ಎಂ. ಆರ್ಮುಗಂ:** ಈಗ ನಡೆಯುತ್ತಿರುವುದು ಗೋರ್‌ವಾಲ್ಲಾ ವರದಿಯ ಮೇಲಿನ ಚರ್ಚೆಯೇ?

**ಮಾನ್ಯ ಸಭಾಧ್ಯಕ್ಷರು:** ಅವರು ಏನೋ ಹೇಳಬೇಕೆಂದಿದ್ದಾರೆ... ಎಂದರೆ ಅವರು ಆಡಳಿತಕ್ಕಾಗಿ ಏನೆಲ್ಲ ಮಾಡಿದ್ದಾರೆ– ಇತ್ಯಾದಿ ಅವನ್ನು ಅವರು ಹೇಳುತ್ತಿದ್ದಾರೆ.

**ಶ್ರೀ ಕೆ. ನಾಗಪ್ಪ ಆಳ್ವ :** ಕೇರಳ ರಾಜ್ಯದಲ್ಲಿ ಅವರು ಮಾಡಿದ ಕೆಲಸ ಎಲ್ಲರ ಮೆಚ್ಚುಗೆಯನ್ನು ಪಡೆದುದು ಮಾತ್ರವಲ್ಲ, ಧೈರ್ಯದಿಂದ ಅವರು ಕೆಲಸ ಮಾಡುತ್ತ ಇದ್ದರು. ಇಲ್ಲಿಂದ ಮಾತ್ರ ಓಡಿಸಿದ್ದಾರೆ. ಅಂಥ ದಕ್ಷರಿಗೆ ಇಲ್ಲಿ ಸ್ಥಾನ ಸಿಕ್ಕುವುದಿಲ್ಲ. ಬೇರೆ ಬೇರೆ ಕಾರಣಗಳಿಂದ....

**ಶ್ರೀ ಕಡಿದಾಳ್ ಮಂಜಪ್ಪ:** ಇದು ಸರಿಯಲ್ಲ. ಮಾನ್ಯರೇ, ನಾವು ಅವರನ್ನು ನಮ್ಮ ಇಚ್ಛೆಯಂತೆ ಕಳುಹಿಸಿಲ್ಲ. ಇನ್ನೊಂದು ಕಡೆ ಭಾರತ ಸರ್ಕಾರಕ್ಕೆ ಅವರು ಬೇಕಾಗಿದ್ದರು.

## ಡಿಪಾರ್ಟ್‌ಮೆಂಟಲ್ ಮ್ಯಾನುಯಲ್‌ಗಳು ಬೇಕು

**ಶ್ರೀ ಕೆ. ನಾಗಪ್ಪ ಆಳ್ವ :** ನಾನು ಹೇಳುವುದು ಇಷ್ಟೆ. ಅಂಥ ದಕ್ಷರನ್ನು ಇಲ್ಲಿ ಉಳಿಸಿಕೊಳ್ಳಬೇಕು. ಅಂಥ ದಕ್ಷರನ್ನು ಬೇರೆ ಕಡೆಯಿಂದ ತಂದೂ ಕೂಡ ನಮ್ಮ ಆಡಳಿತವನ್ನು ಸುಗಮವಾಗಿ ಒಳ್ಳೆಯ ರೀತಿಯಿಂದ ನಡೆಸಿಕೊಳ್ಳುವುದಕ್ಕೆ ಪ್ರಯತ್ನ ಮಾಡಬೇಕೆಂದು ನನ್ನ ಸೂಚನೆ.

ಸರ್ಕಾರದ ಆಡಳಿತಕ್ಕೆ ಅನುಕೂಲವಾಗುವಂಥ ಒಂದು ಡಿಪಾರ್ಟ್‌ಮೆಂಟಲ್ ಮ್ಯಾನುಯಲ್ ಎಂದು ಮಾಡುವುದು ಬಹಳ ಅಗತ್ಯ. ಪಿ.ಡಬ್ಲ್ಯೂ.ಡಿ.ಯಲ್ಲಿ ಡಿಪಾರ್ಟ್‌ಮೆಂಟಲ್ ಮ್ಯಾನ್ಯುಯಲ್ ಮಾಡಿದ್ದಾರೆ. ಅದು ಎಷ್ಟರಮಟ್ಟಿಗೆ ಸರಿಯಾಗಿದೆ ಎಂದು ಹೇಳಲು ನನಗೆ ಗೊತ್ತಿಲ್ಲ. ಅದರಲ್ಲಿ ತಪ್ಪು–ಒಪ್ಪು, ನೀತಿ–ನಿಯಮ, ಸಮಾನ ದೃಷ್ಟಿಯಿಂದ ಕೆಲಸವಾಗುವುದು ಮಾತ್ರವಲ್ಲ, ಒಂದು ಕೆಲಸದ ವಿಧಾನ ಯಾವ ರೀತಿಯಲ್ಲಿ ಇರಬೇಕು, ಯಾವ ರೀತಿ ತ್ವರಿತದಲ್ಲಿ ಕೆಲಸವಾಗಬೇಕು ಮತ್ತು ರೂಲ್ಸ್, ರೆಗ್ಯುಲೇಶನ್ಸ್ ಯಾವ ರೀತಿಯಲ್ಲಿ ಮಾಡಬೇಕು ಎಂಬುವನ್ನು ವಿಚಾರ ಮಾಡಿ, ಪ್ರಜಾಪ್ರಭುತ್ವ ತತ್ವಕ್ಕನುಗುಣವಾಗಿ, ಸಮಾಜ ಬೆಳೆಯುವಂತೆ ಡಿಪಾರ್ಟ್‌ಮೆಂಟಲ್ ಮ್ಯಾನ್ಯುಯಲ್ ತಯಾರು ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

## ಸಚಿವರ ಪ್ರವಾಸ–ಸರ್ಕಾರಿ ನೌಕರ ಬಳಕೆ

ಇನ್ನೊಂದು ಮಂತ್ರಿಗಳ ಪ್ರವಾಸದ ವಿಷಯ. ಮಂತ್ರಿಗಳ ಪ್ರವಾಸ ಬಹಳ ಹೆಚ್ಚಾಗುತ್ತಾ ಇದೆ. ಹೊಸ ಮೈಸೂರು ಪ್ರಾಂತ್ಯದ 19 ಜಿಲ್ಲೆಗಳಲ್ಲಿ ಕೆಲವು ಜಿಲ್ಲೆಗಳಿಗೆ ತಿಂಗಳಿಗೆ ಒಂದು ಸಲ ಎರಡು ಸಲ ಹೋದದ್ದು ಉಂಟು. ಅಷ್ಟು ಮಾತ್ರವಲ್ಲ....

**ಅಧ್ಯಕ್ಷರು :** ಕೆಲಸ ಇದ್ದ ಕಡೆ ಹೋಗುತ್ತಾರೆ.

**ಶ್ರೀ ಕೆ. ನಾಗಪ್ಪ ಆಳ್ವ :** ಎಲ್ಲಿ ಇದೆ ಮತ್ತು ಎಷ್ಟು ಕೆಲಸ ಇದೆ ಎಂಬುದನ್ನು ದಯವಿಟ್ಟು ಆಲೋಚನೆ ಮಾಡಬೇಕು. ಒಂದು ಶಂಕುಸ್ಥಾಪನೆಯಾಗಬೇಕಾದರೆ ಮಂತ್ರಿಗಳು ಹೋಗಬೇಕೆ? ಬೇರೆಯವರಿಂದ ಆ ಕೆಲಸ ನಡೆಯಲಿಕ್ಕಿಲ್ಲವೆ? ಪ್ರತಿಯೊಂದು ಕಾರ್ಯಕ್ಕೂ ಮಂತ್ರಿಗಳೇ ಬೇಕೇ? ಅಷ್ಟು ಮಾತ್ರವಲ್ಲ, ನಾನು ತಿಳಿದು ಹೇಳುವಂಥಾದ್ದು ಒಂದು ಕಡೆಯಲ್ಲಿ ಮಂತ್ರಿಗಳು ಶಂಕುಸ್ಥಾಪನೆ ಮಾಡುವಂಥ ಸಂದರ್ಭದಲ್ಲಿ ಫೋಟೋಗ್ರಾಫರ್ ಇರಲಿಲ್ಲವೆಂದು ಹೇಳಿ, ಅಲ್ಲಿಯ ನೌಕರರನ್ನು ಬಹಳ ತರಹದಲ್ಲಿ ಜೋರು ಮಾಡಿ ಮಾತನಾಡಿದ್ದಾರೆ. ಮತ್ತೊಂದು ಕಡೆಯಲ್ಲಿ ಮಂತ್ರಿಗಳು ಕಲೆಕ್ಟರ್‌ರು ಮತ್ತು ಪೊಲೀಸ್ ಸೂಪರಿಂಟೆಂಡೆಂಟರು ತಮ್ಮ ಜೊತೆಯಲ್ಲಿ ಬರಲಿಲ್ಲವೆಂದು ಜೋರು ಮಾಡಿದ್ದಾರೆ. ನಾನು ಹೇಳುವುದು ಇಷ್ಟು...

**ಶ್ರೀ ಜಿ. ಎಂ. ಚಿನ್ನಸ್ವಾಮಿ :** ಯಾವ ಮಂತ್ರಿಗಳು ಎಂದು ತಾವು ಹೇಳಲಿಲ್ಲ.

**ಶ್ರೀ ಕೆ. ನಾಗಪ್ಪ ಆಳ್ವ :** ಅದನ್ನು ದಯವಿಟ್ಟು ಕೇಳಬೇಡಿ. ಮಂತ್ರಿಗಳ ಪ್ರವಾಸದಿಂದ ಸರ್ಕಾರಿ ನೌಕರರ ಕೆಲಸಕ್ಕೆ ಕುಂದು ಬಾರದ ರೀತಿಯಲ್ಲಿ ಪ್ರವಾಸ ಮಾಡಬಹುದು.

**ಶ್ರೀ ಬಿ. ಕೆ. ನಾಗೂರ್ :** ಮಂತ್ರಿಗಳೋ? ಉಪ ಮಂತ್ರಿಗಳೋ?

**ಶ್ರೀ ಕೆ. ನಾಗಪ್ಪ ಆಳ್ವ :** ಎಲ್ಲರನ್ನೂ ಮಂತ್ರಿಗಳೆಂದೇ ಭಾವಿಸುತ್ತೇನೆ. ಇರಲಿ... ಅವರಿಗೆ ಅಷ್ಟಾದರೂ ಪ್ರಾಮುಖ್ಯತೆ ಕೊಡೋಣ. ಈ ರೀತಿ ಮಂತ್ರಿಗಳ ಪ್ರವಾಸದಿಂದ ಏನಾಗುತ್ತದೆ ಎಂದರೆ, ಒಂದು ತರಹದ ಅಸಡ್ಡೆ ಬರುತ್ತದೆ. ಮಂತ್ರಿಗಳು ಬರುವುದು ಹೋಗುವುದು ಅಷ್ಟು ಮಾತ್ರವಲ್ಲ, ಒಂದು ದುಃಖದ ಸಂಗತಿ ಏನೆಂದರೆ, ಗ್ರೂಪಿಸಂ...ಇದು ಕ್ಯಾನ್ಸರ್‌ರೋಗದಂತೆ ಪರಿಣಮಿಸಿದೆ. ಸರ್ಕಾರಕ್ಕೆ ಒಂದು ದೃಷ್ಟಿಯಿಂದ ಎಲ್ಲರೂ ಸರಿಸಮಾನರು. ಎಲ್ಲರಿಗೂ ಸಿಕ್ಕಬೇಕಾದ ಗೌರವ ಸಿಕ್ಕಬೇಕು. ರಾಜ್ಯದ ಆಡಳಿತ ಪಕ್ಷದವರಾಗಲಿ, ಎದುರು ಪಕ್ಷದವರಾಗಲಿ, ಸ್ವತಂತ್ರರೇ ಆಗಿರಲಿ, ಎಲ್ಲರಿಗೂ ಅವರ ಯೋಗ್ಯತೆಗನುಗುಣವಾಗಿ ಸ್ಥಾನಮಾನ ಸಿಕ್ಕಲೇಬೇಕು. ಈಗ

ಅದು ಆಗುತ್ತಾ ಇಲ್ಲ. ಎಲ್ಲ ಕಡೆಗಳಲ್ಲಿಯೂ ಆ ರೀತಿ ಆಗುತ್ತಿದೆ ಎಂದು ಹೇಳುವುದಿಲ್ಲ. ಕೆಲವು ಕಡೆಗಳಲ್ಲಿ ಆಗುತ್ತಿದೆ.

**ಶ್ರೀ ಸಿ.ಎಂ. ಆರ್ಮುಗಂ:** ಸರ್ಕಾರವು ಸಮಾನ ಗೌರವ ನೀಡಬೇಕು ಎಂದು ಅವರು ಸಲಹೆ ನೀಡುತ್ತಿದ್ದಾರೆ. ಎಂಪಿಸಿಸಿಯ ಉಪಾಧ್ಯಕ್ಷರಾಗಿದ್ದು ಅವರು ಎಲ್ಲ ಸರ್ಕಾರದ ಯಂತ್ರಗಳನ್ನು ಉಪಯೋಗಿಸಿದ್ದಾರೆ. ಇದು ಹೇಗೆ?

**ಶ್ರೀ ಕೆ. ನಾಗಪ್ಪ ಆಳ್ವ :** ನಾನು ಒಬ್ಬ ಸಾಮಾನ್ಯ ಸದಸ್ಯನಾಗಿ, ಇವೊತ್ತು ಭಾಷಣ ಮಾಡುತ್ತ ಇದ್ದೇನೆ. ನಾನು ಮಂತ್ರಿಗಳನ್ನು ಕೇಳುವುದು ಇಷ್ಟೆ. ಇದಕ್ಕೆ ಒಂದು ಮಿತಿ ಇದೆ. ಎಲ್ಲಿ ಅವರು ಹೋಗುವಂಥ ಅಗತ್ಯ ಇದೆ. ಅವನ್ನು ಅವರು ಉಪಯೋಗಿಸಿಕೊಳ್ಳಲಿ. ಅಧಿವೇಶನ ಇದ್ದ ಸಮಯದಲ್ಲಿ ಬಿಟ್ಟು ಬಾಕಿ ತಿಂಗಳುಗಳಲ್ಲಿ ಒಟ್ಟು ವರ್ಷದಲ್ಲಿ ಎಷ್ಟು ದಿವಸಗಳು ಅವರು ಪ್ರವಾಸ ಮಾಡಬಹುದು. ಮಾಡಿದರೆ ಒಳ್ಳೆಯದು, ಅದರಿಂದ ಜನತೆಯ ಮೇಲೆ ಒಳ್ಳೆಯ ಪರಿಣಾಮ, ಜನತೆಯ ಪ್ರೀತಿ ವಿಶ್ವಾಸ ಗಳಿಸಬಹುದು ಎಂಬುದನ್ನು ತಿಳಿದುಕೊಂಡು ಮಂತ್ರಿಗಳು ಪ್ರವಾಸ ಮಾಡಲಿ. ಅದರಿಂದಾಗಿ ಸಂಸ್ಥೆಗೆ ಮತ್ತು ಸರ್ಕಾರಕ್ಕೆ ಬೆಲೆ ಬರಲಿ ಎಂಬುದಾಗಿ ನಾನು ಪ್ರಾರ್ಥನೆ ಮಾಡುತ್ತೇನೆ. ಪೊಲೀಸ್ ಡಿಪಾರ್ಟ್‌ಮೆಂಟ್‌ನ ರೀ–ಆರ್ಗನೈಸೇಶನ್ ಆಗುತ್ತದೆ ಎಂದು ನಾನು ಕೇಳಿದ್ದೇನೆ. ಇದು ಬಹಳ ಅಗತ್ಯ. ಆದಷ್ಟು ಬೇಗ ಆಗಬೇಕು. ಅದನ್ನು ಇಲ್ಲಿ ಸ್ಪಷ್ಟವಾಗಿ ಹೇಳಬಯಸುತ್ತೇನೆ. ಪ್ರೊಹಿಬಿಶನ್ ಅಧಿಕಾರವನ್ನು ಪೋಲೀಸ್ ಡಿಪಾರ್ಟಮೆಂಟ್‌ಗೆ ಕೊಟ್ಟು, ಈ ಹೊತ್ತು ಜನರ ಸೇವಕರಂತೆ ಪೋಲೀಸರು ಯಾರಿದ್ದಾರೆ, ಅವರು ಒಂದು ವಿಧದಲ್ಲಿ ವೈರಿಗಳಾಗಿ ಪರಿಣಮಿಸಬೇಕಾಗಿ ಬರುತ್ತದೆ. ಆದುದರಿಂದ ಪೊಲೀಸ್ ಡಿಪಾರ್ಟ್‌ಮೆಂಟ್‌ನಿಂದ ಈ ಅಧಿಕಾರವನ್ನು ದಯಪಟ್ಟು ತೆಗೆಯಿರಿ. ಅದಕ್ಕೆ ಬೇಕಾದರೆ ಬೇರೆ ಒಂದು ಡಿಪಾರ್ಟ್‌ಮೆಂಟ್‌ನ್ನು ನೇಮಕ ಮಾಡಿ.

## ವಿಶ್ವಾಸ ಕುಂದುತ್ತಿರುವ ಪೊಲೀಸ್ ವ್ಯವಸ್ಥೆ

ನಮ್ಮ ದೇಶಕ್ಕೆ ಸ್ವರಾಜ್ಯ ದೊರೆಯಿತು. ಪೊಲೀಸ್ ಅಧಿಕಾರಿಗಳ ಮೇಲೆ, ನೌಕರರ ಮೇಲೆ, ಜನರಿಗೆ ವಿಶ್ವಾಸವಿತ್ತು. ಆದರೆ ಪೊಲೀಸರಿಗೆ ಅಧಿಕಾರ ಕೊಟ್ಟಮೇಲೆ, ಹೀನಸ್ಥಿತಿಗೆ ಬಂದಿದೆ. ನಮ್ಮ ಜಿಲ್ಲೆಯಲ್ಲಿ ನಮ್ಮ ಕ್ಷೇತ್ರದಲ್ಲಿ ತಿರುಗಾಡಿ ನೋಡಿದರೆ ಅನುಭವ ಬರುತ್ತದೆ. ಪ್ರೊಹಿಬಿಷನ್ ಕಾನೂನು ಇದ್ದರೂ ಸಹ ಪ್ರತಿಯೊಬ್ಬನೂ ಪೊಲೀಸರಿಗೆ 15 ರೂ.ಗಳನ್ನು ಕೊಟ್ಟರೆ ಯಾವ ರೀತಿಯಾಗಿ ಅವನು ಕೆಲಸ ಮಾಡಬಹುದು ಎನ್ನುವುದು ಗೊತ್ತಾಗುತ್ತದೆ. ಮನೆಯಲ್ಲಿಯೇ ಸಾರಾಯಿ ತಯಾರು

ಮಾಡುತ್ತಾನೆ. ಪೋಲೀಸ್ ಸ್ಟೇಶನ್‌ಗೆ ತಿಂಗಳಿಗೆ ಮೂರು ರೂಪಾಯಿ ಕೊಟ್ಟರೆ ಈ ಉದ್ಯೋಗವನ್ನು ಅವನು ಮನೆಯಲ್ಲಿ ನಡೆಸಬಹುದು. ಇದಕ್ಕೆ ಬೇಕಾದ ರುಜುವಾತನ್ನು ನಾನು ಕೊಡಬಲ್ಲೆನು. ಆದುದರಿಂದ ಇದು ಪ್ರೊಹಿಬಿಶನ್ ಹಾಸ್ಯಾಸ್ಪದವಾಗಿದೆ. ಇದನ್ನು ಸರಿಯಾದ ರೀತಿಯಲ್ಲಿ ಜಾರಿಗೆ ತರಬೇಕೆಂದು ನಾನು ಹೇಳಬಯಸುತ್ತೇನೆ.

## ಸರಕಾರಿ ಬಸ್ ದರ ಹೆಚ್ಚಳಕ್ಕೆ ಮಿತಿ ಇರಲಿ

ಇನ್ನು ಸರಕಾರಿ ಬಸ್ ವಿಚಾರ ಹೇಳುತ್ತೇನೆ. ಸರಕಾರಕ್ಕೆ ಹಣ ಒದಗಿಸಿಕೊಡುವ ರೀತಿಯಲ್ಲಿ ಕೆಲಸ ಮಾಡಬೇಕಾಗಿ ಇದೆ. ಸರಕಾರಕ್ಕೆ ಎಲ್ಲಿಂದ ಹಣ ಬರಬೇಕು ಎಂಬುದನ್ನು ಯಾಚನೆ ಮಾಡಬೇಕು. ಇವೊತ್ತಿನ ದಿವಸ ಎಲ್ಲೆಲ್ಲಿ ನೋಡಿದರೂ ಸರಕಾರ ಟ್ಯಾಕ್ಸ್ ಹಾಕಿದ್ದಾರೆ. ಬೇರೆ ರೀತಿಯಲ್ಲಿ ಜನರಿಂದ ಹಣವನ್ನು ಪಡೆಯುವಾಗ್ಗೆ ಮಧ್ಯಮ ವರ್ಗದ ಜನರಿಗೆ, ಹಿಂದುಳಿದವರಿಗೆ ತೊಂದರೆಯಾಗುತ್ತಿದೆ. ಮಧ್ಯಮ ವರ್ಗದ ನೌಕರರ ಸಂಬಳ ಕಡಿಮೆಯಾಗಿದೆ ಎಂದು ಅವರಿಗೆ ಐದು ರೂಪಾಯಿ ಸಂಬಳ ಜಾಸ್ತಿ ಮಾಡಿದ್ದುದು ಸಂತೋಷದ ಸಂಗತಿ. ಆದರೆ, ಆಹಾರ ಸಾಮಾಗ್ರಿ ಬೆಲೆ ದಿನ ದಿನಕ್ಕೆ ಏರುತ್ತಲೇ ಇದೆ. ಇದನ್ನು ಒಂದು ಮಟ್ಟಕ್ಕೆ ತರಲು ಸರಕಾರಕ್ಕೆ ಸಾಧ್ಯವಿದೆಯೇ ಎಂಬುದನ್ನು ಪರಿಶೀಲಿಸಿ ಅದಕ್ಕೆ ಬೇಕಾದ ಕ್ರಮ ಸರಕಾರ ತೆಗೆದುಕೊಳ್ಳಬೇಕು.

**ಶ್ರೀ ಟಿ. ಮರಿಯಪ್ಪ**:– ಮದ್ರಾಸು, ಬೊಂಬಾಯಿನಲ್ಲಿ ತಲಾ ತೆರಿಗೆಯು ಮೊದಲು ಇದ್ದುದಕ್ಕಿಂತ ಕಡಿಮೆಯಾಗಿದೆ.

**ಶ್ರೀ ಕೆ. ನಾಗಪ್ಪ ಆಳ್ವ**:– ನಾನು ಹೇಳುವುದೇನೆಂದರೆ, ಮಧ್ಯಮ ವರ್ಗದ ಜನರಿಗೆ ಎಲ್ಲ ತರಹದ ಸೌಲಭ್ಯಗಳನ್ನು ಕೊಡಬೇಕು. ಈಗ ಬಸ್ ರೇಟು ಜಾಸ್ತಿ ಮಾಡಲಾಗಿದೆ. ಇವರ ಪರಿಣಾಮ ಏನಾಗುತ್ತದೆ ಎನ್ನುವುದನ್ನು ಆಲೋಚನೆ ಮಾಡಿದ್ದೀರಾ ? ಜನತೆಯ ಮೇಲೆ ಎಷ್ಟು ಭಾರ ಹೆಚ್ಚಿಗೆ ಬೀಳುತ್ತೆ ಎಂಬುದನ್ನು ಆಲೋಚನೆ ಮಾಡಬೇಕು. ಮಧ್ಯಮ ವರ್ಗದ ಜನರು ಕಷ್ಟದಲ್ಲಿ ನರಳುತ್ತಿದ್ದಾರೆ, ಅವರಿಗೆ ಸಹಾಯ ಸೌಕರ್ಯ ಒದಗಿಸಿ ಕೊಡಬೇಕಾಗಿದೆ, ಈ ರೀತಿಯಾಗಿ ಮಾಡಬೇಕೆಂದು ಹೇಳಬಯಸುತ್ತೇನೆ.

## ಹಿಂದುಳಿದ ವರ್ಗಗಳ ಏಳಿಗೆ

ಆ ಮೇಲೆ ಸಮಾಜ ಕಲ್ಯಾಣ ಎಂಬುದು ಬಹಳ ಒಳ್ಳೆಯ ಶಬ್ದ. ಸೋಶಿಯಲ್ ವೆಲ್‌ಫೇರ್ ಅಂದರೆ ಸಮಾಜ ಕಲ್ಯಾಣವಾಗಬೇಕು. ಹಿಂದುಳಿದವರು ಮುಂದಕ್ಕೆ ಬರಬೇಕು. ಅವರ ಏಳಿಗೆಯಾಗಬೇಕೆಂಬ ಅಭಿಪ್ರಾಯವನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ಇದರಲ್ಲಿ ಎಷ್ಟರಮಟ್ಟಿಗೆ ಕಲ್ಯಾಣವಾಗುತ್ತ ಇದೆಯೆಂದರೆ, ಸಮಾನವಾದ ಅವಕಾಶ ಎಲ್ಲರಿಗೂ ದೊರೆಯುತ್ತ ಇಲ್ಲ. ಹಿಂದುಳಿದವರಿಗೆ ಸಮಾನ ಅವಕಾಶ ಕೊಟ್ಟು ಅವರು ಸತ್‌ಪ್ರಜೆಗಳಾಗಿ ಬಾಳಬೇಕು. ಇದರಿಂದ ಪ್ರಜಾಪ್ರಭುತ್ವ ಬೆಳೆದು ಪ್ರಕಾಶಮಾನವಾಗಬೇಕು. ಆದರೆ ಈ ಕೆಲಸ ಸುಗಮವಾಗಿ ಸಾಗುತ್ತ ಇಲ್ಲ. ಈ ಸಮಾಜ ಕಲ್ಯಾಣ ಇಲಾಖೆಯನ್ನು ಗಟ್ಟಿಮುಟ್ಟಾದ ವ್ಯಕ್ತಿಯಾಗಿರುವ ಶ್ರೀ ರಾಚಯ್ಯನವರಿಗೆ ಕೊಟ್ಟಿದ್ದಾರೆ. ಈ ಮಂತ್ರಿಗಳಿಗೆ ಮೂರು ಪೋರ್ಟ್‌ಪೋಲಿಯೋಗಳು ಇವೆ. ಬಹಳ ಜವಾಬ್ದಾರಿಯುಳ್ಳ ಕಷ್ಟಕರವಾದ ಪ್ರೊಹಿಬಿಶನ್ ಇವರ ಹತ್ತಿರ ಇದೆ. ಅಗ್ರಿಕಲ್ಚರ್‌ನಲ್ಲಿ ಅನಿಮಲ್ ಹಸ್ಬೆಂಡರಿ ಮತ್ತು ಫಿಶರಿಶ್ ಇವುಗಳಿಂದ ಕೂಡಿದ ಇಲಾಖೆಯೂ ಇದೆ. ಈ ಒಬ್ಬ ಮಂತ್ರಿಗೆ ಈ ಮೂರು ಇಲಾಖೆಗಳನ್ನು ಒಪ್ಪಿಸಿರತಕ್ಕದ್ದು ಸರಿಯುಲ್ಲ. ಈ ಮೂರು ಪೋರ್ಟ್‌ಪೋಲಿಯೋ ಕೆಲಸವನ್ನು ಅವರು ಹೇಗೆ ಮಾಡಬಲ್ಲರು? ಈ ಸೋಶಿಯಲ್ ವೆಲ್‌ಫೇರ್ ಕೆಲಸ ನೋಡುವುದು ಅವರಿಗೆ ಹೇಗೆ ಸಾಧ್ಯ? ಆದುದರಿಂದ ಮುಖ್ಯಮಂತ್ರಿಗಳು ಪೋರ್ಟ್‌ಪೋಲಿಯೋಗಳನ್ನು ಸರಿಯಾಗಿ ಹಂಚಿ, ಮಂತ್ರಿಗಳು ಸರಿಯಾದ, ನ್ಯಾಯವಾದ ರೀತಿಯಲ್ಲಿ ದೇಶದ ಹಿತದೃಷ್ಟಿಯಿಂದ ಮನಸ್ಸಿಗೆ ಸಾಕ್ಷಿಯಾಗಿ ಕೆಲಸ ಮಾಡುವಂತೆ ಆಸ್ಪದ ಕೊಡಿ ಎಂದು ಕೇಳಿಕೊಳ್ಳುತ್ತೇನೆ.

ಇನ್ನೊಂದು ವಿಚಾರವನ್ನು ಹೇಳಬೇಕಾಗಿದೆ. ನಮ್ಮ ದೇಶ ಪ್ರಗತಿದಾಯಕವಾಗ ಬೇಕೆಂದು ಅದನ್ನು ಹೇಗೆ ಸಾಧಿಸಬೇಕು ಎನ್ನುವುದನ್ನು ಪರಿಶೀಲಿಸಿ ಸಲಹೆ ಸೂಚನೆಗಳನ್ನು ಕೊಡುವುದಕ್ಕಾಗಿ, ಅನೇಕ ಕಮಿಟಿಗಳನ್ನು ನೇಮಕ ಮಾಡಲಾಗುತ್ತಿದೆ. ಈ ಕಮಿಟಿಗಳ ಸದಸ್ಯರುಗಳ ನೇಮಕ ಮಾಡುವಾಗ, ಅದರಲ್ಲಿ ಒಂದು ರೀತಿ ನೀತಿ ಇರಬೇಕು. ಯಾರು ಯಾರನ್ನೋ, ಯಾವ ಯಾವುದೋ ಕಮಿಟಿಗೆ ನೇಮಕ ಮಾಡಿಬಿಟ್ಟರೆ ಅದು ಸರಿಯಾಗಿ ಆಗುವುದಿಲ್ಲವೆಂದು ತಿಳಿಸಲಾಗಿದೆ. ಇವನ್ನು ಸರಿಪಡಿಸಬೇಕು.

## ಮಲೆನಾಡು ಅಭಿವೃದ್ಧಿಗಾಗಿ ಪ್ರತ್ಯೇಕ ಮಂಡಲಿ

ಈಗ ಮಲೆನಾಡು ಡೆವಲಪ್‌ಮೆಂಟ್ ಬೋರ್ಡ್ ಎಂಬ ಒಂದು ಕಮಿಟಿ ಇದೆ. ಇನ್ನು ಅದು ಹೋಗುತ್ತದೆ ಎಂದು ಕೇಳಿದ್ದೇನೆ. ಈ ಮಲೆನಾಡು ಪ್ರದೇಶ ನಮ್ಮ ಜಿಲ್ಲೆಯ ಒಂದು ಭಾಗವಾಗಿದೆ. ಈ ಪ್ರದೇಶದಲ್ಲಿ ಇನ್ನೂ ಬಹಳ ಕೆಲಸವಾಗ ಬೇಕಾಗಿದೆ. ಆದುದರಿಂದ ಮಲೆನಾಡು ಅಭಿವೃದ್ಧಿಗಾಗಿ ಒಂದು ಪ್ರತ್ಯೇಕ ಪೋರ್ಟ್‌ಫೋಲಿಯೋವನ್ನು ಮಾಡುವುದು ಒಳ್ಳೆಯದು ಎಂದು ನಾನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಈ ವಿಚಾರವನ್ನು ಮುಖ್ಯಮಂತ್ರಿಗಳಿಗೂ ಸಹ ನಾನು ಹೇಳಿದ್ದೇನೆ. ಈ ಮಲೆನಾಡು ಅಭಿವೃದ್ಧಿ ಮಂಡಲವು ರಚಿತವಾದ ಮೇಲೆ, ಎಷ್ಟೋ ಸಹಾಯವಾಗಿದೆ. ಅದು ಅನೇಕ ಕೆಲಸಗಳನ್ನು ಮಾಡಿದೆ. ಇನ್ನೂ ಅನೇಕ ಕೆಲಸಗಳು ಆಗಬೇಕಾಗಿದೆ. ಈ ಎಲ್ಲ ಕೆಲಸಗಳನ್ನು ಸರಕಾರ ಯಾವ ರೀತಿ ಮಾಡುತ್ತದೆ ಎಂಬುದು ನನಗೆ ಗೊತ್ತಿಲ್ಲ. ಇಂಥ ಒಂದು ಬೋರ್ಡ್‌ನಲ್ಲಿ ಈ ವಿಷಯ ತಿಳಿದವರನ್ನು ಈ ಇಲಾಖೆಯ ಅಧಿಕಾರಿಗಳನ್ನು ಇಂಥ ಪ್ರದೇಶದಲ್ಲಿ ಯೋಗ್ಯತೆ ಇರತಕ್ಕಂಥವರನ್ನು ನೇಮಕ ಮಾಡಿದರೆ ಸರಿಯಾಗುತ್ತದೆ. ಹೀಗೆ ಮಾಡದೆ ತಮಗೆ ಬೇಕಾದ ಜನರನ್ನು ಅಲ್ಲಿ ಹಾಕಿದ್ದು ಕಂಡುಬಂದಿದೆ. ಒಳ್ಳೆಯ ರೀತಿಯಲ್ಲಿ ಈ ಕೆಲಸ ನಡೆಯುವ ಹಾಗೆ ಮಾಡಬೇಕು. ಹಾಗೆಯೇ ಯೋಗ್ಯ ಜನರನ್ನು ಅದರ ಸದಸ್ಯರನ್ನಾಗಿ ಮಾಡಬೇಕೆಂದು ಹೇಳಬಯಸುತ್ತೇನೆ.

ಒಟ್ಟಿನಲ್ಲಿ ಸರಕಾರದ ಕೆಲಸವು ದೇವರು ಮೆಚ್ಚುವ ಕೆಲಸವಾಗಲಿ. ಅದಕ್ಕೆ ತಕ್ಕ ಬುದ್ಧಿಯನ್ನು ಪರಮಾತ್ಮನು ಎಲ್ಲರಿಗೂ ಕೊಡಲಿ ಎಂದು ಪ್ರಾರ್ಥನೆ ಮಾಡಿ. ಇಷ್ಟು ಮಾತನಾಡಲು ಅವಕಾಶ ಕೊಟ್ಟ ಮಾನ್ಯ ಅಧ್ಯಕ್ಷರಿಗೆ ವಂದಿಸುತ್ತೇನೆ.

## ಆಯವ್ಯಯ ಬೇಡಿಕೆಗಳ ಚರ್ಚೆ

**5ನೇ ಏಪ್ರಿಲ್ 1960**

ಸಾರ್ವಜನಿಕ ಆರೋಗ್ಯ ಮತ್ತು ಗ್ರಾಮೀಣಾಭಿವೃದ್ಧಿ ಇಲಾಖೆಗಳ ಬೇಡಿಕೆಗಳ ಮೇಲೆ ನಡೆದ ಚರ್ಚೆಯಲ್ಲಿ ಭಾಗವಹಿಸುತ್ತಾ, ಶ್ರೀ ನಾಗಪ್ಪ ಆಳ್ವರವರು ಖಾಯಿಲೆಯನ್ನು ತಡೆಗಟ್ಟುವುದು, ನಿವಾರಿಸುವುದು ಮತ್ತು ಉತ್ತಮ ಆರೋಗ್ಯ ಕಾಪಾಡಿಕೊಳ್ಳುವುದು ಮುಖ್ಯ ತತ್ವವೆಂದು ಅಭಿಪ್ರಾಯಪಟ್ಟರು. ಜನಸಂಖ್ಯೆ ನಿಯಂತ್ರಣವು ಬಹಳ ಮುಖ್ಯ. ಸಾರ್ವಜನಿಕರ ಜೀವನ ಮಟ್ಟವನ್ನು ಉತ್ತಮಪಡಿಸುವುದರ ಜೊತೆಗೆ ಸುರಕ್ಷಿತ ಕುಡಿಯುವ ನೀರು, ಒಳಚರಂಡಿ ವ್ಯವಸ್ಥೆ

ಒದಗಿಸಿಕೊಡುವುದು ಮತ್ತು ಕಲಬೆರಕೆ ಆಹಾರ ಪದಾರ್ಥಗಳ ಸರಬರಾಜನ್ನು ನಿಯಂತ್ರಿಸಬೇಕೆಂದು ಕರೆ ನೀಡಿದರು. ಎರಡನೆ ಪಂಚವಾರ್ಷಿಕ ಯೋಜನೆಯಲ್ಲಿ 594 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಲು ನಿಗದಿತ ಗುರಿಯಾಗಿದ್ದರೂ ಈಗ ಇರುವ ಬೇಡಿಕೆಗೆ ಹೆಚ್ಚುವರಿಯಾಗಿ ವಾರ್ಷಿಕ 50 ಲಕ್ಷ ರೂಪಾಯಿಗಳನ್ನು ಈ ಬೇಡಿಕೆಗೆ ಸೇರಿಸಬೇಕೆಂದು ಆಗ್ರಹಿಸಿದರು.

## ಸಾರ್ವಜನಿಕ ಆರೋಗ್ಯ ಉತ್ತಮಗೊಳಿಸುವಿಕೆ ಹಾಗೂ ಜನಜೀವನ ಮಟ್ಟ ಸುಧಾರಣೆ

*** ಕೆ. ನಾಗಪ್ಪ ಆಳ್ವ:**

– ಸ್ವಾಮಿ ಮಾನ್ಯ ಸಭಾಧ್ಯಕ್ಷರೆ, ವೈದ್ಯಕೀಯ, ಜನಾರೋಗ್ಯ ಮತ್ತು ಗ್ರಾಮೀಣಾಭಿವೃದ್ಧಿಯ ಬೇಡಿಕೆಗೆ ನಾನು ಬೆಂಬಲಿಸುತ್ತೇನೆ. ನಾವು ಪ್ರಜಾ ಕಲ್ಯಾಣ ರಾಜ್ಯವನ್ನು ಕಟ್ಟಲು ಶ್ರಮಿಸುತ್ತಿದ್ದೇವೆ. ಅಂಥ ಸಂದರ್ಭದಲ್ಲಿ ಜನರ ಆರೋಗ್ಯವು ಅತ್ಯುತ್ತಮವಾಗಿರಬೇಕು. ಇದರ ಮುಖ್ಯ ತತ್ವಗಳೆಂದರೆ – ರೋಗಗಳನ್ನು ತಡೆಗಟ್ಟುವುದು, ರೋಗಗಳನ್ನು ಗುಣಪಡಿಸುವುದು ಮತ್ತು ಉತ್ತಮ ಆರೋಗ್ಯವನ್ನು ಕಾಪಾಡಿಕೊಳ್ಳುವುದು. ನಮ್ಮ ದೇಶದಲ್ಲಿ ಜೀವಿತದ ಅವಧಿಯು ಗಣನೀಯ ಪ್ರಮಾಣದಲ್ಲಿ ಹೆಚ್ಚಿದೆ. ಜನಸಂಖ್ಯೆಯ ಪ್ರಮಾಣ ಬಹು ಎತ್ತರಕ್ಕೆ ಬೆಳೆಯುತ್ತಿದೆ. ಮರಣ ನಿಯಂತ್ರಣ ಸ್ವಲ್ಪಮಟ್ಟಿಗೆ ಇದೆ ಹಾಗೂ ಆ ಜನನ ನಿಯಂತ್ರಣವನ್ನು ಸರಿದೂಗಿಸುವುದು, ತುಂಬಾ ತುಂಬಾನೆ ಅವಶ್ಯವಾಗಿದೆ. ಜನರ ಜೀವನ ಸ್ಥಿತಿಗತಿಗಳು ಸುಧಾರಿಸಬೇಕು. ರಾಜ್ಯದಲ್ಲೆಡೆ ಸಂರಕ್ಷಿತ ನೀರು ಇರಬೇಕು. ಒಳಚರಂಡಿ ಯೋಜನೆಗಳು ಎಲ್ಲೆಡೆ ನಿಖರವಾಗಿರಬೇಕು ಮತ್ತು ದೇಶದ ಎಲ್ಲ ಭಾಗಗಳಲ್ಲಿ ಕಲಬೆರಕೆ ಇಲ್ಲದ ಆಹಾರ ಪದಾರ್ಥಗಳು ಜನರಿಗೆ ದೊರೆಯುವಂತೆ ಮಾಡಬೇಕು. ನಿವಾರಣಾ ಕ್ರಮಗಳಿಗೆ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಬೇಕು. ಅದನ್ನು ನೀಡಲಾಗುತ್ತಿದೆ. ಆದರೆ, ಈ ಎಲ್ಲ ಅಂಶಗಳನ್ನು ನಾವು ಪರಿಗಣಿಸಿದ ನಂತರ ಸರ್ಕಾರಿ ಯಂತ್ರಗಳು, ಈ ದಿನಗಳಲ್ಲಿ ಅಗತ್ಯವಿರುವಷ್ಟು ವೇಗವಾಗಿ ಚಲಿಸುತ್ತಿಲ್ಲವೆಂದು ಅನಿವಾರ್ಯವಾಗಿ ನಾನು ಹೇಳಬೇಕಾಗಿದೆ. ಈ ದಿನಗಳು ಏಳಿಗೆಯ ದಿನಗಳು. ಎರಡನೆ ಪಂಚವಾರ್ಷಿಕ ಯೋಜನೆಯಲ್ಲಿ ನಾವು 294 ಲಕ್ಷ ರೂ.ಗಳನ್ನು ಖರ್ಚು ಮಾಡಬೇಕಾಗುತ್ತದೆ. ಎಂದರೆ, ನಾವು 51 ಲಕ್ಷ ರೂ.ಗಳನ್ನು ಖರ್ಚು ಮಾಡುತ್ತಿಲ್ಲ. ಆದರೆ, ಈಗಿರುವ ಬೇಡಿಕೆಗಳಿಗೆ ಕನಿಷ್ಠ 50 ಲಕ್ಷ ರೂಪಾಯಿಗೂ ಹೆಚ್ಚು ಮೊತ್ತವನ್ನು ಸೇರಿಸಬೇಕೆಂದು ಭಾವಿಸುತ್ತೇನೆ.

ಆಸ್ಪತ್ರೆಗಳ ದುಸ್ಥಿತಿಯ ಬಗ್ಗೆ ಅತೃಪ್ತಿ ವ್ಯಕ್ತಪಡಿಸುತ್ತಾ, ಜಿಲ್ಲಾ ಮತ್ತು ನಗರ ಆಸ್ಪತ್ರೆಗಳಲ್ಲಿ ತಜ್ಞ ವೈದ್ಯರುಗಳನ್ನು ಒದಗಿಸಬೇಕೆಂದು ಸಲಹೆ ನೀಡಿದರು. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ದಾದಿಯರು ಮತ್ತು ಕಿರಿಯ ವೈದ್ಯರುಗಳು ರೋಗಿಗಳ ಕುರಿತಾಗಿ ಹೊಂದಿರುವ ನಿರ್ಲಕ್ಷ್ಯ ಮನೋಭಾವವನ್ನು ಖಂಡಿಸುತ್ತಾ, ಆಸ್ಪತ್ರೆಗಳಲ್ಲಿ 'ಸನ್ನಡತಾ ಸಪ್ತಾಹ'ವನ್ನು ಪ್ರತಿವರ್ಷವೂ ಆಚರಿಸಬೇಕೆಂದರು. ಪ್ರಸ್ತುತ ಕಟ್ಟಡವನ್ನು ವಿಸ್ತರಿಸಿ ರೋಗಿಗಳಿಗೆ ಮತ್ತು ಸಿರ್ಬಂದಿಗೆ ಹೆಚ್ಚಿನ ಅನುಕೂಲತೆಗಳನ್ನು ಒದಗಿಸಿಕೊಡಬೇಕೆಂದು ತಿಳಿಸಿದರು.

## ತಜ್ಞ ವೈದ್ಯರುಗಳ ನೇಮಕ ರೋಗಿಗಳಿಗೆ ಹೆಚ್ಚಿನ ಅನುಕೂಲ ಕಲ್ಪಿಸಲು ಕ್ರಮ

ನಾನು ಈಗ ಆಸ್ಪತ್ರೆಗಳ ವಿಷಯಕ್ಕೆ ಬರುತ್ತೇನೆ. ಆಸ್ಪತ್ರೆಗಳ ಪರಿಸ್ಥಿತಿ ತೃಪ್ತಿದಾಯಕವಾಗಿ ಇಲ್ಲವೇ ಇಲ್ಲ. ನಗರ ಮತ್ತು ಜಿಲ್ಲಾ ಆಸ್ಪತ್ರೆಗಳಲ್ಲಿ ನಮಗೆ ಎಲ್ಲ ಬಗೆಯ ತಜ್ಞರ ವಿಭಾಗಗಳು ಬೇಕು. ಅನೇಕ ಆಸ್ಪತ್ರೆಗಳಲ್ಲಿ, ತಜ್ಞರ ವಿಭಾಗಗಳಲ್ಲಿ ನಾವು ಗುಣಮಟ್ಟವಿರುವಂಥ ಆಸ್ಪತ್ರೆಯ ಬಗೆಗೆ ಮಾತನಾಡುವುದಾದರೆ, ಬೌರಿಂಗ್ ಆಸ್ಪತ್ರೆಯಲ್ಲಿ ಕೆಲವೇ ಕೆಲವು ತಜ್ಞ ವಿಭಾಗಗಳಿವೆ. 'ಕ್ಷ' ಕಿರಣ ವಿಭಾಗದಲ್ಲಿ ಯಂತ್ರವು ಬಹಳ ಹಳೆಯದಾಗಿದ್ದು, ಅದರ ಕೊಳವೆ ತೆರೆದುಕೊಂಡಿದೆ ಮತ್ತು ನಮ್ಮಲ್ಲಿ ಸಾಕಷ್ಟು ತಂತ್ರಜ್ಞರಿಲ್ಲವೆಂಬುದನ್ನು ಕೇಳಿ ನಿಮಗೆ ಆಶ್ಚರ್ಯವಾಗಬಹುದು.

ವಿಕ್ಟೋರಿಯಾ ಆಸ್ಪತ್ರೆಯ ಬಗ್ಗೆ ಕೆಲವು ಸಂಗತಿಗಳನ್ನು ಇಲ್ಲಿ ಹೇಳಲಾಯಿತು. ಸ್ವಲ್ಪಮಟ್ಟಿಗೆ ನಾನು ಅವುಗಳನ್ನು ಒಪ್ಪುತ್ತೇನೆ. ಅದು ಕಟ್ಟಡಕ್ಕೆ ಸಂಬಂಧಪಟ್ಟಿದೆ.

ಆಸ್ಪತ್ರೆಗೆ ಹೋಗುವಂಥ ಬಂಧು-ಬಳಗಗಳಿಗೆ ಅವರು ತಮ್ಮ ರೋಗಿಗಳನ್ನು ಕಂಡುಹಿಡಿಯುವುದು ಕಷ್ಟ. ಅದೊಂದು ಥರಾ ಮಾರುಕಟ್ಟೆ ಇದ್ದಂತೆ ಇದೆ. ಈ ಸಂಬಂಧದಲ್ಲಿ ಇಲ್ಲಿ ವೈದ್ಯರುಗಳ ಸರಿಯಾದ ಹಂಚಿಕೆ ಇಲ್ಲ. ಸರಿಯಾದ ಕೆಲಸದ ಹಂಚಿಕೆ ಮತ್ತು ಜವಾಬ್ದಾರಿ ಇರಬೇಕು. ಕೆಲವು ಆಸ್ಪತ್ರೆಗಳಲ್ಲಿ, ಅನೇಕ ವೈದ್ಯರುಗಳಿದ್ದಾರೆ. ವಿಕ್ಟೋರಿಯಾ ಆಸ್ಪತ್ರೆಯಲ್ಲಿ, ವಿವಿಧ ಪ್ರವರ್ಗಗಳಲ್ಲಿ 80ರಿಂದ 90 ವೈದ್ಯರುಗಳಿದ್ದಾರೆ. ಒಂದು ವಿಷಯದಲ್ಲಿ ನಾನು ಶ್ರೀ ರೇವಣ ಸಿದ್ದಪ್ಪನವರ ಮಾತನ್ನು ಒಪ್ಪಿಕೊಳ್ಳುತ್ತೇನೆ. ಅಲ್ಲಿನ ವಾತಾವರಣ ಅಷ್ಟೇನೂ ಹಿತಕರವಾಗಿಲ್ಲ. ಏಕೆಂದರೆ, ದಾದಿಯರು ಅಥವಾ ಕಿರಿಯ ವೈದ್ಯರುಗಳು ಆದರ ಉಪಚಾರ ಮತ್ತು ಸೌಜನ್ಯದಿಂದ ವರ್ತಿಸುವುದಿಲ್ಲವೆಂಬುದು ನನ್ನ ಅನುಭವಕ್ಕೂ ಕೂಡ

ಬಂದಿದೆ. ಎಲ್ಲರೂ ಹೀಗೆ ಇದ್ದಾರೆಂದು ನಾನು ಹೇಳಬಿಚ್ಛಿಸುವುದಿಲ್ಲ. ಅವರಲ್ಲಿ ಕೆಲವರಿಗೆ ಕೆಲವೊಂದು ರೀತಿನೀತಿಗಳನ್ನು ಹೇಳಿಕೊಡಬೇಕಾಗುತ್ತದೆ ಹಾಗೂ ಪ್ರತಿವರ್ಷವೂ ಸನ್ನಡತೆ ಸಪ್ತಾಹವನ್ನು ಏರ್ಪಡಿಸಬೇಕೆಂದು ನಾನು ಸೂಚಿಸಬಯಸುತ್ತೇನೆ. ವಿಕ್ಟೋರಿಯಾ ಆಸ್ಪತ್ರೆಯಲ್ಲಿ, ಎಲ್ಲ ಕಡೆ ಕಟ್ಟಡದ ವಿಸ್ತರಣೆ ಕಾರ್ಯ ಹೇಗೆಂದರೆ ಹಾಗೆ ನಡೆಯುತ್ತಿದೆ. ಅದಕ್ಕೆ ಪ್ರತ್ಯೇಕವಾದ ನಕ್ಷೆ ಇರಬೇಕು. ಇನ್ನುಮುಂದೆ ಈಗಿರುವ ಕಟ್ಟಡಕ್ಕೆ ವಿಸ್ತರಣೆ ಮತ್ತು ಸುಧಾರಣೆ ಕಾರ್ಯ ತ್ವರಿತಗತಿಯಲ್ಲಿ ನಡೆಯಬೇಕು ಮತ್ತು ರೋಗಿಗಳಿಗೆ ಆಸ್ಪತ್ರೆಗಳನ್ನು ಸಮೃದ್ಧಿಯನ್ನು ನೀಡುವಂತಹ ಸ್ಥಳವನ್ನಾಗಿ ಮಾಡಬೇಕು ಮತ್ತು ಆಸ್ಪತ್ರೆಗೆ ಸಂದರ್ಶಕರು ಸುಲಭವಾಗಿ ಪ್ರವೇಶಿಸುವುದಕ್ಕೆ ಅವಕಾಶ ಕಲ್ಪಿಸಬೇಕು.

ನಾನು ಈ ಹಿಂದೆ ಹೇಳಿದ ಹಾಗೆ ಜನಸಂಖ್ಯೆ ತೀವ್ರಗತಿಯಲ್ಲಿ ಹೆಚ್ಚುತ್ತಿದೆ. ಈ ನಗರದಲ್ಲಿ ಜನಸಂಖ್ಯೆಯ ಬಗ್ಗೆ ನಮಗೆ ತಿಳಿದಿದೆ. ಕಳೆದ ಬಾರಿ ನಾನು ಮಲ್ಲೇಶ್ವರದ ಆಸ್ಪತ್ರೆಯನ್ನು ಕೂಡಲೇ ಕಾರ್ಯಾರಂಭ ಮಾಡಬೇಕೆಂದು ಸಲಹೆ ನೀಡಿದ್ದೆ, ಸ್ವಲ್ಪ ಹಣವು ಮಂಜೂರಾಗಿದ್ದು, ಆದರೆ ಕೆಲಸ ಮಾತ್ರ ತೃಪ್ತಿಕರವಾಗುವಷ್ಟರಮಟ್ಟಿಗೆ ಪ್ರಗತಿ ಹೊಂದಲಿಲ್ಲ ಎಂಬುದು ನನಗೆ ಗೊತ್ತು. ಈ ಸಂಬಂಧದಲ್ಲಿ ನಾನು, ಆಸ್ಪತ್ರೆ ಸೌಲಭ್ಯಗಳು ತೃಪ್ತಿದಾಯಕವಾಗಿಲ್ಲವೇ ಇಲ್ಲವೆಂದು ಹೇಳಬಯಸುತ್ತೇನೆ. ಕಟ್ಟಡಗಳನ್ನು ನಿರ್ಮಿಸಲಾಗುತ್ತಿದೆ ಎಂಬುದು ನನಗೆ ಗೊತ್ತು, ಆದರೆ, ಅದಷ್ಟೇ ಸಾಲದು. ಮೈಸೂರಿನಲ್ಲಿ ಹೆಸರು ಮಾಡಿರುವಂಥ ಆಸ್ಪತ್ರೆ ಇಲ್ಲ ಎಂಬುದನ್ನೂ ಸಹ ನಾನು ಇಲ್ಲಿ ಹೇಳಬಹುದು.

ಹುಬ್ಬಳ್ಳಿ ವೈದ್ಯಕೀಯ ಮಹಾ ವಿದ್ಯಾಲಯಕ್ಕೆ ಸುಮಾರು ಒಂದು ಕೋಟಿ ಖರ್ಚುಗಳಾಗಿದ್ದರೂ ಅನೇಕ ವಿಭಾಗಗಳಲ್ಲಿ ಪರಿಣಿತ ಉಪನ್ಯಾಸಕರುಗಳ ಕೊರತೆ ನೀಗಿಲ್ಲವೆಂದು ವಿಷಾದಿಸಿದರು. ವಿದ್ಯಾರ್ಥಿನಿಲಯಗಳ ಪರಿಸ್ಥಿತಿಯನ್ನು ಉತ್ತಮಪಡಿಸಲು ಸರಕಾರ ಗಮನಹರಿಸಬೇಕೆಂದು ಒತ್ತಾಯಿಸಿದರು.

**ಹುಬ್ಬಳ್ಳಿ ವೈದ್ಯಕೀಯ ಕಾಲೇಜಿನಲ್ಲಿ**
**ಪರಿಣಿತ ಉಪನ್ಯಾಸಕರ ಕೊರತೆ**
**ಗ್ರಾಮೀಣ ವೈದ್ಯ ಸೇವೆಗೆ ಹೆಚ್ಚಿನ ಭತ್ಯೆ**

ಯೋಜನೆಯ ಅನುಸಾರ, ಹುಬ್ಬಳ್ಳಿ ವೈದ್ಯಕೀಯ ಕಾಲೇಜಿನ ವೆಚ್ಚ 1.5 ಕೋಟಿ ರೂ.ಗಳು ಸುಮಾರು 1 ಕೋಟಿ ರೂ.ಗಳನ್ನು ಖರ್ಚು ಮಾಡಲಾಗಿದ್ದು, ಕೆಲಸ ಕಾರ್ಯಗಳು ತೃಪ್ತಿದಾಯಕವಾಗಿ ಮುಂದುವರಿದಿಲ್ಲ. ಹಾಗೆಯೇ ಪೂರ್ಣ

ಪ್ರಮಾಣದ ವೈದ್ಯಕೀಯ ಶಾಸ್ತ್ರವಿಲ್ಲ ಮತ್ತು ವೈದ್ಯಕೀಯ ನ್ಯಾಯಶಾಸ್ತ್ರದ ಪ್ರಾಧ್ಯಾಪಕರಿಲ್ಲ, ಜೀವ ರಸಾಯನ ಶಾಸ್ತ್ರ ಅರ್ಹ ರೀಡರುಗಳಿಲ್ಲ. ಪ್ರಯೋಗಶಾಲೆಯಾಗಲಿ ಅಥವಾ ನಿವಾರಕ ಔಷಧ ವಿಭಾಗವಾಗಲಿ ಮತ್ತು ರೋಗನಿಧಾನಶಾಸ್ತ್ರದ ವಿಭಾಗವಾಗಲಿ ಇಲ್ಲ. ಅತ್ಯಂತ ಆಶ್ಚರ್ಯಕರ ಸಂಗತಿ ಎಂದರೆ, ಸೂಲಗಿತ್ತಿ ವಿಭಾಗವಿದ್ದು ಅಲ್ಲಿ ಯಾವುದೇ ಸಾಧನಸಲಕರಣೆಗಳಿಲ್ಲ ಮತ್ತು ಪ್ರಸೂತಿ ಸೌಲಭ್ಯಗಳಿಲ್ಲದೆ ಎಲ್ಲವೂ ನಡೆಯುತ್ತವೆ ಎಂಬುದು ಸುತ್ತಮುತ್ತಲೂ ಗಮನಿಸಿದಾಗ, ಮಕ್ಕಳ / ಶಿಶುರೋಗಗಳ ಬಗ್ಗೆ ತೀವ್ರ ನಿರ್ಲಕ್ಷತೆ ಇರುವುದನ್ನು ನೀವು ಕಾಣಬಹುದು. ಈ ಸಂಬಂಧದಲ್ಲಿ ಬೌರಿಂಗ್ ಆಸ್ಪತ್ರೆಯಲ್ಲಿ, ಮಕ್ಕಳ ವಿಭಾಗ ಅಂತಾ ಏನೋ ಒಂದು ಇದ್ದಂತೆ ನನಗೆ ನೆನಪು. ಅದು ಬಹುಮಟ್ಟಿಗೆ ಸುಧಾರಣೆ ಆಗಬೇಕಾಗಿದೆ ಮತ್ತು ನಮಗೆ ತಜ್ಞರು ಬೇಕಾಗಿದ್ದಾರೆ. ಅರಿವಳಿಕೆಗಳನ್ನು ನೀಡುವಲ್ಲಿ ಅರ್ಹರಾದ ಸಿಬ್ಬಂದಿ ಇಲ್ಲ ಎನ್ನುವಂತಹದೂ ಇವೆ ಮತ್ತು ರೇಡಿಯಾಲಜಿಯಲ್ಲಿ ಸರಿಯಾದ ತಂತ್ರಜ್ಞರಿಲ್ಲ.

(ಶ್ರೀ ಕೆ. ಪುಟ್ಟಸ್ವಾಮಿ ಸಭಾಧ್ಯಕ್ಷರಿಗೆ)

**ಮಾನ್ಯ ಸಭಾಪತಿ:** ಮತ್ತೆ ಅಲ್ಲಿ ದೊರೆಯುವ ಸೌಲಭ್ಯಗಳೇನು?

**ಶ್ರೀ ಕೆ. ನಾಗಪ್ಪ ಆಳ್ವ:** ಈ ಬಗ್ಗೆ ಸರ್ಕಾರ ಗಮನಹರಿಸಿದರೆ ಒಳ್ಳೆಯದು. ವಿದ್ಯಾರ್ಥಿನಿಲಯದ ಕಟ್ಟಡಗಳನ್ನು ಪ್ರಾರಂಭಿಸಿ, ಅದನ್ನು ಚೆನ್ನಾಗಿ ತಿಳಿದಿರುವ ಕಾರಣಗಳಿಗಾಗಿಯೇ ಅದನ್ನು ತಡೆಯಲಾಯಿತು. ಈಗ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವಸತಿ ನಿಲಯಗಳಿಂದ ಆಹಾರ ದೊರೆಯುತ್ತಿಲ್ಲ. ಆದಷ್ಟು ಸುಧಾರಣೆಯಾಗಬೇಕೆಂದು ಮಾತ್ರ ನಾನು ಸೂಚಿಸುತ್ತಿದ್ದೇನೆ. ಇತ್ತೀಚಿನ ದಿನಗಳಲ್ಲಿ ಸರ್ಕಾರವು ನಡೆಸುವಂಥ ಎಲ್ಲ ವಿದ್ಯಾರ್ಥಿ ನಿಲಯಗಳಲ್ಲಿ ಡಿವೈಡಿಂಗ್ ಮೆಸ್ ಪದ್ಧತಿಗೆ ವ್ಯವಸ್ಥೆ ಮಾಡಬೇಕು.

ನಾನು ಈಗ ವೈದ್ಯರುಗಳ ವೇತನದ ಬಗ್ಗೆ ಕೆಲವು ಮಾತುಗಳನ್ನು ಆಡಲಿಚ್ಛಿಸುತ್ತೇನೆ. ಬಡ್ತಿ ಮುಂತಾದ ವಿಷಯಗಳ ಬಗ್ಗೆ ನನಗೆ ಒಂದಿಷ್ಟು ಸಮಾಧಾನ ಇಲ್ಲ. ಘನತೆವೆತ್ತ ವಿಧಾನಸಭೆಯೇ ಅದರ ಬಗ್ಗೆ ತೃಪ್ತಿ ವ್ಯಕ್ತಪಡಿಸುವುದಿಲ್ಲ. ನಾವು ಮುಂಬಯಿ ಮತ್ತು ಮದರಾಸ್‌ಗಳಿಂದ ವಿಶೇಷವಾಗಿ ಈ ವಿಷಯಗಳಲ್ಲಿ ಅನೇಕ ಒಳ್ಳೆಯ ಸಂಗತಿಗಳನ್ನು ಅರಿತುಕೊಂಡಿದ್ದೇವೆ. ಅವರು ಎಲ್.ಎಂ.ಪಿ.ಗೆ ಕನಿಷ್ಠ ವೇತನ 150 ರೂ.ಗಳು ಮತ್ತು ಎಂಬಿಬಿಎಸ್‌ಗೆ 250 ರೂ.ಗಳನ್ನು ನೀಡುವುದು. ನಿಜವಾಗಲೂ ಸಂತೋಷದ ವಿಷಯವೆ. ಗ್ರಾಮೀಣ ಪ್ರದೇಶಗಳಿಗೆ ಹೋಗುವವರಿಗೆ ಯಾವುದಾದರೂ ಪ್ರೋತ್ಸಾಹಕಗಳನ್ನು ನೀಡಲಾಗುತ್ತವೆ ಎಂಬ ಮಾತುಗಳು ಕೇವಲ ತಂತ್ರ. ಅದು ಯಾವ ರೀತಿಯ ಪ್ರೋತ್ಸಾಹ? ಅವರು ಐದು ವರ್ಷಗಳವರೆಗೆ

ಗ್ರಾಮೀಣ ಪ್ರದೇಶಗಳಲ್ಲಿ ಸೇವೆ ಸಲ್ಲಿಸಿದ ನಂತರ ಅವರಿಗೆ ಬಡ್ತಿ ಸಿಗುತ್ತದೆ ಮತ್ತು ಸಂಬಳದಲ್ಲಿ ಸ್ವಲ್ಪ ಹೆಚ್ಚಳ ಉಂಟಾಗುತ್ತದೆ ಎಂಬುದೆ? ನಾವು ವೈದ್ಯರುಗಳನ್ನು ಪ್ರೋತ್ಸಾಹಿಸುವಂಥ ರೀತಿ ಇದಲ್ಲ. ವಾಸ್ತವವಾಗಿ ವೈದ್ಯರುಗಳಿಗೆ ಏನೂ ಕೊರತೆಯಿಲ್ಲ. ನಾವು ಅವರಿಂದ ನಿರೀಕ್ಷಿಸುವಂಥ ಗುಣಮಟ್ಟವನ್ನು ಕಾಪಾಡಿಕೊಳ್ಳಬೇಕಾದರೆ ನಾವು ಅವರಿಗೆ ಒಳ್ಳೆಯ ಜೀವನ ನಡೆಸಲು ಸರಿಯಾದ ಸೌಲಭ್ಯಗಳನ್ನು ಮತ್ತು ಸರಿಯಾದ ವೇತನವನ್ನು ನೀಡಿದರೆ. ಅವರು ಗ್ರಾಮೀಣ ಪ್ರದೇಶಗಳಿಗೆ ಹೋದಾಗ ಅವರಿಗೆ ಒಳ್ಳೆ ಸಂಬಳ ಕೊಟ್ಟರೆ, ಈ ವೈದ್ಯರುಗಳಿಂದ ನಾವು ಉತ್ತಮ ಕೆಲಸವನ್ನು ನಿರೀಕ್ಷಿಸುವ ಹಕ್ಕನ್ನು ಹೊಂದಿರುತ್ತೇವೆ.

ಪ್ರತಿ ಜಿಲ್ಲಾ ಆಸ್ಪತ್ರೆಯಲ್ಲಿ 'ರಕ್ತ ನಿಧಿ' ಸ್ಥಾಪಿಸಲು ತುರ್ತು ಸಮಯದಲ್ಲಿ ರಕ್ತದ ಬೇಡಿಕೆಯನ್ನು ಪೂರೈಸಿಕೊಡುವಂತೆ ಸರಕಾರವು ಕ್ರಮ ಜರುಗಿಸಬೇಕೆಂದು ಆಗ್ರಹಿಸಿದರು.

ಎಕ್ಸ್-ರೇ ಘಟಕದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗೆ ಆಕರ್ಷಕ ಸಂಬಳ ನೀಡಿ ವೆನ್‌ಲಾಕ್ ಆಸ್ಪತ್ರೆಯಲ್ಲಿರುವ ಎಕ್ಸ್-ರೇ ಉಪಕರಣವನ್ನು ಉಪಯೋಗಿಸದಿರಲು ಕಾರಣವೇನೆಂದು ಪ್ರಶ್ನಿಸಿದರು.

ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಎಂ.ಬಿ.ಬಿ.ಎಸ್. ಕಂಡೆನ್ಸ್ಡ ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಎಂ.ಬಿ.ಬಿ.ಎಸ್. ಕಂಡೆನ್ಸ್ಡ ಕೋರ್ಸ್‌ನ್ನು ಪ್ರಾರಂಭಿಸಲು ಸೂಚಿಸಿದರು.

ಭಾರತದ ವೈದ್ಯಕೀಯ ಮಂಡಳಿಯ ನಿಯಮಾನುಸಾರ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಸಿಬ್ಬಂದಿಯನ್ನು ಹಾಗೂ ಉಪಕರಣಗಳನ್ನು ಒದಗಿಸಲು ಸಲಹೆ ಮಾಡಿದರು.

## ವೈದ್ಯಕೀಯ ತಾಂತ್ರಿಕ ಸೌಲಭ್ಯಗಳ ಕೊರತೆ

ಮತ್ತೆ, ಮಾನ್ಯರೆ, ರಕ್ತ ನಿಧಿಯೊಂದರದು ಬೇಕೋದಿಲ್ಲ. ಹೌದು, ಒಂದು ಇದೆ. ಅದು ಹೆಸರಿಗೆ ಮಾತ್ರ. ನಾನು ನನ್ನ ಹಿಂದೆ ಮಾಡಿದ ಭಾಷಣದಲ್ಲಿ ಕಣ್ಣಿನ ಬ್ಯಾಂಕನ್ನು ಸ್ಥಾಪಿಸುವುದರ ಬಗ್ಗೆಯೂ ಸೂಚಿಸಿದ್ದೆ. ಜಿಲ್ಲಾ ಆಸ್ಪತ್ರೆಗಳಿಗೂ ಸಹ ನಾನು ರಕ್ತನಿಧಿ ಸ್ಥಾಪಿಸುವಂತೆ ಸೂಚಿಸಿದ್ದೆ. ಆಂಧ್ರ ಮತ್ತು ತಮಿಳುನಾಡು ರಾಜ್ಯಗಳಲ್ಲಿ ಮತ್ತು ಮುಂಬಯಿಯಲ್ಲಿಯೂ, ನಾವು ರಕ್ತನಿಧಿ ನಿರ್ದೇಶಕರನ್ನು ಹೊಂದಿರುತ್ತೇವೆ. ಈ ಯೂನಿಟ್‌ಗಳನ್ನು ಆದಷ್ಟು ಬೇಗನೆ ಪೂರ್ಣಗೊಳಿಸಬೇಕು. ಏಕೆಂದರೆ, ಶಸ್ತ್ರಚಿಕಿತ್ಸೆಯ

ತುರ್ತು ಸಮಯಗಳಲ್ಲಿ ಮತ್ತು ವಿಶೇಷವಾಗಿ ಹೆರಿಗೆ ಸಂದರ್ಭಗಳಲ್ಲಿ ಅವರ ಅವಶ್ಯಕತೆ ಬಹಳ ಮುಖ್ಯವಾಗಿದೆ.

'ಕ್ಷ' ಕಿರಣ ಘಟಕಗಳ ಕುರಿತು ನಾನು ಒಂದೆರಡು ಅಂಶಗಳನ್ನು ಸೂಚಿಸುತ್ತೇನೆ. ನೀವು ಸಾಕಷ್ಟು ತಂತ್ರಜ್ಞರನ್ನು ಹಾಗೂ ವೈದ್ಯರನ್ನು ಹೊಂದಿಲ್ಲ. 'ಕ್ಷ' ಕಿರಣ ಕೆಲಸವು ಸ್ವಲ್ಪಮಟ್ಟಿಗೆ ಅಸಹ್ಯಕರವಾದುದೆಂಬ ಕಾರಣದಿಂದ ಹಾಗೂ ಈ ಕೆಲಸವು ಆರೋಗ್ಯಕ್ಕೆ ಅಪಾಯಕರವಾದುದಾಗಿರುವುದೆಂಬ ಭಯವೂ ಸಹ ಇರುವ ಕಾರಣದಿಂದ ವೈದ್ಯರು 'ಕ್ಷ' ಕಿರಣ ಸ್ಥಾವರದಲ್ಲಿ ಕೆಲಸ ಮಾಡಲು ಸಿದ್ಧರಿರುವುದಿಲ್ಲ ಮತ್ತು ವೈದ್ಯರು ಈ ಅಧ್ಯಯನ ಶಾಖೆಯಲ್ಲಿ ತಜ್ಞರಾಗಲು ಕಾಳಜಿ ತೋರಿಸುವುದಿಲ್ಲ. ಸರ್ಕಾರವು ಈ ಬಗ್ಗೆ ಪರಿಗಣಿಸಿ ಅಂತಹ ಜನರಿಗೆ ಸ್ವಲ್ಪಮಟ್ಟಿಗೆ ಹೆಚ್ಚು ಗಮನ ನೀಡಬೇಕಾದುದು ಹಾಗೂ ಹೆಚ್ಚು ತಂತ್ರಜ್ಞರನ್ನು ಹೊಂದುವುದು ಅಗತ್ಯವಾಗಿದೆ. ಈ ಸಂಬಂಧದಲ್ಲಿ ನಾನು ಹೇಳಲಿಚ್ಛಿಸುವುದೇನೆಂದರೆ ಮಾಪನಾಂಕದ ಕೊರತೆಯಿಂದ, ವೆನ್ ಲಾಕ್ ಆಸ್ಪತ್ರೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಂಥ 'ಕ್ಷ' ಕಿರಣ ಉಪಕರಣಗಳು ನಿಷ್ಕ್ರಿಯವಾಗಿ ಬಿದ್ದಿರುತ್ತವೆ. ಯಾವುದೇ ಮಾಪನಾಂಕವನ್ನು ಮಾಡಿರುವುದಿಲ್ಲ. ಈ ಘಟಕಗಳನ್ನು ಮಾಪನಾಂಕ ಮಾಡಲು ಸೂಕ್ತ ವ್ಯಕ್ತಿಗಳನ್ನು ಪಡೆಯುವಲ್ಲಿ ಇರುವ ತಾಂತ್ರಿಕ ತೊಂದರೆ ಯಾವುದು?

ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಬೋಧನಾ ವೃಂದವನ್ನು ಸೃಷ್ಟಿಸಲು ಆಗ್ರಹಿಸಿದರು. ಬೆಂಗಳೂರಿನಲ್ಲಿರುವ ದಂತ ಮಹಾವಿದ್ಯಾಲಯದಲ್ಲಿ ಕೇಂದ್ರ ಸರ್ಕಾರದಿಂದ ಮಂಜೂರಾದ ಅನುದಾನವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳಬೇಕೆಂದರು.

ಕಲಬೆರಕೆ ಆಹಾರ ಪದಾರ್ಥಗಳ ಮಾರಾಟ ತಡೆಗಟ್ಟಲು ಸರ್ಕಾರವು ಕಠಿಣ ಕ್ರಮ ತೆಗೆದುಕೊಳ್ಳಬೇಕೆಂದು ಆಗ್ರಹಿಸಿದರು

## ಭಾರತೀಯ ವೈದ್ಯಕೀಯ ನಿಯಮಗಳನ್ನು ಪಾಲಿಸಿ

ಈಗ ನಾನು ವೈದ್ಯಕೀಯ ಶಿಕ್ಷಣದ ವಿಷಯಕ್ಕೆ ಬರುತ್ತೇನೆ. ನಾವು ಮೂರು ಕಾಲೇಜುಗಳನ್ನು – ಎರಡು ಸರ್ಕಾರಿ ಕಾಲೇಜುಗಳನ್ನು ಹಾಗೂ ಒಂದು ಖಾಸಗಿ ಕಾಲೇಜನ್ನು ಹೊಂದಿದ್ದೇವೆ. ಇಲ್ಲಿ ಯಾವುದೇ ಸ್ನಾತಕೋತ್ತರ ಶಿಕ್ಷಣ ಇಲ್ಲವೆಂದು ಹೇಳಲಿಕ್ಕೆ ನನಗೆ ನಿಜಕ್ಕೂ ನೋವಾಗುತ್ತದೆ. ಮೈಸೂರು ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಿ 30ಕ್ಕಿಂತ ಹೆಚ್ಚು ವರ್ಷಗಳಾಗಿದ್ದು, ಈ ವರ್ಷವೂ

ಕೂಡ ನಾವು ಎಂ.ಬಿ.ಬಿ.ಎಸ್.ನ ಕಂಡೆನ್ಸ್ಡ್ ಕೋರ್ಸ್‌ಗಳನ್ನು ಪ್ರಾರಂಭಿಸಿದ್ದೇವೆ. ಕೆಲವು ವಿದ್ಯಾರ್ಥಿಗಳು ಸಹ ದಾಖಲಾಗಿದ್ದಾರೆ. ಅನೇಕ ಎಲ್.ಎಂ.ಪಿ.ಗಳು ಅವಕಾಶಕ್ಕಾಗಿ ಕಾಯುತ್ತಿದ್ದಾರೆ ಮತ್ತು ಅವರಿಗೆ ಅವಕಾಶವನ್ನು ನಿರಾಕರಿಸಲಾಗುತ್ತಿದೆ. ಆದಷ್ಟು ಬೇಗ, ಸಾಧ್ಯವಾದರೆ ಮುಂದಿನ ಜೂನ್ ವೇಳೆಗೆ ಬೆಂಗಳೂರಿನಲ್ಲಿ ಕೂಡ ಈ ಕಂಡೆನ್ಸ್ಡ್ ಕೋರ್ಸ್‌ಗಳನ್ನು ಪ್ರಾರಂಭಿಸಬೇಕು.

ವೈದ್ಯಕೀಯ ಶಿಕ್ಷಣಕ್ಕಾಗಿ ಭಾರತೀಯ ವೈದ್ಯಕೀಯ ಪರಿಷತ್ತು ನಿಗದಿಪಡಿಸಿದ ಒಂದು ಮಾನದಂಡವಿದೆ. ಈ ಷರತ್ತುಗಳನ್ನು ಪೂರೈಸಲು, ಈ ಕಾಲೇಜುಗಳನ್ನು ಸಮರ್ಪಕವಾಗಿ ಸಜ್ಜುಗೊಳಿಸಬೇಕು. ಈ ಕಾಲೇಜುಗಳಿಗೆ ಸರಿಯಾದ ಸಿಬ್ಬಂದಿ ವ್ಯವಸ್ಥೆಯನ್ನು ಕಲ್ಪಿಸಬೇಕು ಮತ್ತು ಎಲ್ಲಾ ಬೋಧನಾ ಸಂಸ್ಥೆಗಳಲ್ಲಿ, ಎಲ್ಲಾ ವೈದ್ಯಕೀಯ ವಿಭಾಗಗಳ ತಜ್ಞತೆಯುಳ್ಳ ಘಟಕಗಳಿರಬೇಕು ಮತ್ತು ತಜ್ಞತೆಯುಳ್ಳ ಸಿಬ್ಬಂದಿಗಳಿರಬೇಕು. ಆದರೆ, ನಾವು ಇಂದು ಅಲ್ಲಿ ಏನು ನೋಡ್ತಾ ಇದೀವಿ? ಆದರೆ ಭವಿಷ್ಯ ಅಸಹನೀಯವಾಗಿದೆ. ಎಲ್ಲಿಯೂ ಕೂಡ ನಾವು ಸಾಕಷ್ಟು ಪ್ರಮಾಣದ ಸಿಬ್ಬಂದಿಯನ್ನು ಕಾಣುವುದಿಲ್ಲ. ಈಗಾಗಲೇ ಹುಬ್ಬಳ್ಳಿ ವೈದ್ಯಕೀಯ ಕಾಲೇಜಿನ ಬಗ್ಗೆ ನೀವು ಹೇಳಿದಂತೆ ಸಾಧನಸಲಕರಣೆಗಳೂ ಕೂಡ ತೃಪ್ತಿಕರವಾಗಿರುವುದಿಲ್ಲ. ಏಕೋ ಏನೋ ಇಂಥ ಸಂಗತಿಗಳು ನಡೆಯುತ್ತಲಿವೆ ಮತ್ತು ಶಿಕ್ಷಣದ ಮಾನದಂಡವನ್ನು ಕಾಪಾಡಿಕೊಂಡು ಬರಬೇಕಾದಲ್ಲಿ ಹಾಗೂ ನಾವು ಭಾರತೀಯ ವೈದ್ಯಕೀಯ ಪರಿಷತ್ತು ಅಪೇಕ್ಷಿಸಿದಂಥ ರೀತಿಯಲ್ಲಿ ಈ ಕಾಲೇಜುಗಳನ್ನು ನಡೆಸಿಕೊಂಡು ಹೋಗಬೇಕಾದಲ್ಲಿ ನಾವು ಸರಿಪಡಿಸಿಕೊಳ್ಳಬೇಕಾದಂತಹ ಒಂದು ದೋಷ ಇಲ್ಲಿದೆ. ಏನು ನಡೀತಾ ಇದೆ? ಬೋಧನಾ ವೃಂದವನ್ನು ಹೊಂದಿರುವುದಕ್ಕೆ ಬದಲಾಗಿ, ನಾವು ನಿಯತ ಸೇವೆಗಳಿಂದ ಕೆಲವು ಬೋಧಕರನ್ನು ಪಡೆಯುತ್ತಿದ್ದೇವೆ. ನಾವು ಕೆಲವು ವಿಭಾಗಗಳಲ್ಲಿ ಸಹಾಯಕ ಶಸ್ತ್ರಚಿಕಿತ್ಸಕರಾಗಿ ಅನೇಕ ವರ್ಷಗಳವರೆಗೆ ಕೆಲಸ ಮಾಡಿರುವಂತಹ ಜನರಿಗೆ ಬಡ್ತಿ ನೀಡುತ್ತಿದ್ದೇವೆ ಹಾಗೂ ಅವರನ್ನು ಸಹಾಯಕ ಪ್ರಾಧ್ಯಾಪಕರು. ಹೆಚ್ಚುವರಿ ಪ್ರಾಧ್ಯಾಪಕರು ಮತ್ತು ಎಲ್ಲಾ ತರದ ವಿಷಯಗಳ ಪ್ರಾಧ್ಯಾಪಕರುಗಳನ್ನಾಗಿ ತೆಗೆದುಕೊಳ್ಳಲಾಗಿದೆ. ಇದು ಆಗಬಾರದು. ಕಡ್ಡಾಯವಾಗಿ ಒಂದು ಬೋಧನಾ ವೃಂದವಿರಬೇಕು. ಸಹಜವಾಗಿ ನಮ್ಮ ಅಧಿಕಾರಿಗಳನ್ನು ಪ್ರೋತ್ಸಾಹಿಸೋಣ. ಆದರೆ ಅದೇ ಸಮಯಕ್ಕೆ, ನಾವು ಶಿಕ್ಷಣದಲ್ಲಿ ಗುಣಮಟ್ಟವನ್ನು ಹೊಂದಲು ಬಯಸಿದಾಗ ಕೋಟಾ ಮತ್ತು ಇತರ ಎಲ್ಲಾ ತರದ ಪರಿಗಣನೆಗಳನ್ನು ಇರಲೇಕೂಡದು. ಬೋಧನಾ ವೃಂದವನ್ನು ಸೃಜಿಸಬೇಕು. ನಾವು ಮುಂದಿನ ಅಧ್ಯಯನಕ್ಕಾಗಿ ನಮ್ಮ ಜನರನ್ನು ಕಳುಹಿಸಬೇಕು. ಅವರು ವಿಷಯತಜ್ಞರುಗಳಾಗಿರಬೇಕು ಮತ್ತು ಅವರು ನಮ್ಮ ಮಕ್ಕಳಿಗೆ ಬೋಧಿಸಬೇಕು. ಅದೇ ಸಮಯಕ್ಕೆ, ನಾವು ಅಗತ್ಯಬಿದ್ದಾಗಲೆಲ್ಲಾ ಹೊರಗಿನಿಂದ ಬರುವ ಜನರನ್ನು ಪಡೆಯಲು ಉದಾರಿಯಾಗಿ ಖರ್ಚು ಮಾಡಲು

ಹಾಗೂ ಸಂಶೋಧನೆ ನಡೆಸಲು ಸಿದ್ಧರಿರಬೇಕು. ಏಕೆಂದರೆ, ನಾವು ಪ್ರಾಧ್ಯಾಪಕರುಗಳೆಂದು ಕರೆಸಿಕೊಳ್ಳುವ ಅಪೇಕ್ಷೆಯನ್ನು ಹೊಂದಿರುವಂತಹ ಅಥವಾ ಈ ಕಾಲೇಜುಗಳಲ್ಲಿ ಪ್ರಾಧ್ಯಾಪಕರಾಗಿ ಅಥವಾ ಸಹಾಯಕ ಪ್ರಾಧ್ಯಾಪಕರಾಗಿ ಸಜ್ಜುಗೊಂಡಿರುವಂತಹ ಅಗತ್ಯವಾದ ಸಂಖ್ಯೆಯ ತಜ್ಞರುಗಳನ್ನು ಹೊಂದಿರುವುದಿಲ್ಲವೆಂದು ಸರ್ಕಾರವೂ ಕೂಡ ಇಂದು ತಪ್ಪೊಪ್ಪಿಕೊಂಡಿದೆ.

**ಮಾನ್ಯ ಸಭಾಪತಿ:** ಮಾನ್ಯ ಸದಸ್ಯರು ದಯವಿಟ್ಟು ತಮ್ಮ ಮಾತನ್ನು ಮುಗಿಸಬೇಕು.

**ಮಾನ್ಯ ಸದಸ್ಯರು:** ಮಾನ್ಯರೇ, ಎಷ್ಟೊತ್ತಿನವರೆಗೆ ನಾವು ಇಂದು ಸಭೆ ನಡೆಸುತ್ತೇವೆ?

**ಮಾನ್ಯ ಸಭಾಪತಿ:** ಚರ್ಚೆಗಳು ಸುಮಾರು ಆರು ಗಂಟೆಗೆ ಮುಕ್ತಾಯವಾಗುತ್ತವೆ. ಆನಂತರ ಮಾನ್ಯ ಸಚಿವರು ಉತ್ತರ ನೀಡುತ್ತಾರೆ ಎಂಬುದು ಒಪ್ಪಿತ ವಿಚಾರ.

**ಶ್ರೀ ಕೆ. ನಾಗಪ್ಪ ಆಳ್ವ:** ಇಲ್ಲಿ ಪ್ರಾರಂಭಿಸಲಾಗಿರುವಂಥ ದಂತ ವೈದ್ಯಕೀಯ ಕಾಲೇಜಿನ ಕುರಿತು ಒಂದು ಮಾತು. ಎರಡು ವರ್ಷಗಳ ಹಿಂದೆ ಕಾಲೇಜನ್ನು ಪ್ರಾರಂಭಿಸಲಾಯಿತು ಮತ್ತು ಆ ಕಾಲೇಜಿನಲ್ಲಿ ಈಗ 24 ವಿದ್ಯಾರ್ಥಿಗಳಿದ್ದಾರೆ. ಆ ಕಾಲೇಜಿನಲ್ಲಿ ಒಬ್ಬ ಪ್ರಾಂಶುಪಾಲರು ಮಾತ್ರ ಇದ್ದಾರೆಯೇ ಹೊರತು ಯಾರೇ ಪ್ರಾಧ್ಯಾಪಕರುಗಳಾಗಲಿ ಮತ್ತು ತಂತ್ರಜ್ಞರಾಗಲಿ ಇರುವುದಿಲ್ಲ. ವೆಚ್ಚಗಳ ಶೇಕಡ 75 ರಷ್ಟು ಭಾಗವನ್ನು ಕೇಂದ್ರ ಸರ್ಕಾರವು ಭರಿಸುತ್ತಿದೆ. ಆದರೆ ಹಣವನ್ನು ಅನೇಕ ಔಷಧಿಗಳಿಗೆ ಖರ್ಚು ಮಾಡದೆ ಹಾಗೆ ಉಳಿದಿದೆ. ಔಷಧಿಗಳಿಗಾಗಿ ಮೀಸಲಿರಿಸಲಾದ ಹಣವನ್ನು ಬಳಸಿಕೊಂಡಿರುವುದಿಲ್ಲ ಮತ್ತು ಅದರಲ್ಲಿ ಏನೋ ಅಕ್ರಮ ನಡೆದಿದೆ. ಆಸ್ಪತ್ರೆಯಲ್ಲಿ ಸಾಕಷ್ಟು ಔಷಧಿಗಳು ಇದ್ದವು ಎನ್ನುವುದೇ ಹಣ ಖರ್ಚಾಗದೆ ಉಳಿಯುವುದಕ್ಕೆ ಕಾರಣವಲ್ಲ. ವೈದ್ಯರು ಅವುಗಳಿಗೆ ಯಾವ ರೀತಿಯ ಬೇಡಿಕೆಗಳನ್ನು ಸಲ್ಲಿಸಿದರು ಎನ್ನುವುದೂ ಕಾರಣವಾಗಿದೆ. ನಾನು ದಂತ ವೈದ್ಯಕೀಯ ಕಾಲೇಜು ಮುಂದಿನ ವರ್ಷದಲ್ಲಿ ಪ್ರಾರಂಭವಾಗಬಹುದೆಂಬ ಭರವಸೆಯನ್ನು ಮಾತ್ರ ಇಟ್ಟುಕೊಂಡಿದ್ದೇವೆ. ಈ ಸಂಬಂಧದಲ್ಲಿ, ಡಾ॥ ವಿ.ಆರ್. ನಾಯ್ದು ಅವರನ್ನು ವೈದ್ಯಕೀಯ ಸೇವೆಗಳ ನಿರ್ದೇಶಕರನ್ನಾಗಿ ನೇಮಕ ಮಾಡಿರುವುದು ನನಗೆ ಸಂತೋಷ ತಂದಿದೆ. ಅವರು ವೈದ್ಯಕೀಯ ಶಿಕ್ಷಣದ ಹಾಗೂ ಆಡಳಿತದ ಬಗ್ಗೆಯೂ ಸಹ ಪ್ರಾಧಿಕಾರಿಯಾಗಿರುವರೆಂದು ನಾನು ಹೇಳಬಲ್ಲೆ. ಅವರು ಇನ್ನೂ ನಾಲ್ಕುವರೆ ವರ್ಷಗಳ ಸೇವಾವಧಿಯನ್ನು ಹೊಂದಿದ್ದು, ಅವರು ಭದ್ರತೆ ಮತ್ತು ವಿಶ್ವಾಸದಿಂದ ಕೆಲಸ ಮಾಡಬಲ್ಲರೆಂಬ ಕಾರಣದಿಂದ ನನಗೆ ಸಂತೋಷವಾಗಿದೆ. ಅಧಿಕಾರಿಗಳಿಗೆ

ಬೇಕಾಗಿರುವುದೇನಪ್ಪಾ ಅಂದ್ರೆ, ಅವರು ಯಾವುದೇ ಇಲಾಖೆಗಳಲ್ಲಿ ಕೆಲಸ ಮಾಡುತ್ತಿರಲಿ; ಅಲ್ಲಿ ಅವರಿಗೆ ಸೂಕ್ತ ಮೆಚ್ಚುಗೆ ಮತ್ತು ಸಕಾಲಿಕ ಪ್ರೋತ್ಸಾಹವಿರಬೇಕು.

**ಮಾನ್ಯ ಸಭಾಪತಿ:** ನೀವು ದಯಮಾಡಿ ನಿಮ್ಮ ಮಾತನ್ನು ಮುಗಿಸಬಹುದು.

**ಶ್ರೀ ಕೆ. ನಾಗಪ್ಪ ಆಳ್ವ:** ಮಾಜಿ ಸಭಾಪತಿಗಳು 40ರಿಂದ 45 ನಿಮಿಷಗಳವರೆಗೆ ಕಾಲಾವಕಾಶ ನೀಡಿದ್ದರು; ನೀವು ದಯಮಾಡಿ ನನಗೆ ಹತ್ತು ನಿಮಿಷಗಳ ಹೆಚ್ಚಿನ ಕಾಲಾವಕಾಶ ನೀಡಬೇಕು.

**ಮಾನ್ಯ ಸಭಾಪತಿ:** ನಾನು ಇನ್ನೊಬ್ಬ ಸದಸ್ಯರಿಗೆ ಮಾತನಾಡಲಿಕ್ಕೆ ಅವಕಾಶ ನೀಡಬಹುದಾದ ಹಾಗೆ ದಯಮಾಡಿ ನಿಮ್ಮ ಮಾತನ್ನು ಮುಕ್ತಾಯಗೊಳಿಸಿ.

**ಶ್ರೀ ಕೆ. ನಾಗಪ್ಪ ಆಳ್ವ:** ಆಹಾರ ಪದಾರ್ಥಗಳ ಕಲಬೆರಕೆಗೆ ಸಂಬಂಧಿಸಿದಂತೆ ಹೇಳುವುದಾದರೆ, ನಾನು ಈ ಅಂಶವನ್ನು ಪದೇ ಪದೇ ಒತ್ತಿ ಹೇಳುತ್ತಿದ್ದೇನೆ. ನೂರಕ್ಕೆ ನೂರರಷ್ಟು ವ್ಯಾಪಾರಿಗಳು ಈ ಕಲಬೆರಕೆಯ ಕೃತ್ಯವನ್ನು ಎಸಗುತ್ತಿದ್ದಾರೆಂಬುದನ್ನು ಕೇಳಿ ಕೇಂದ್ರ ಆರೋಗ್ಯ ಸಚಿವರಿಗೂ ಸಹಾ ನೋವಾಯಿತು. ನಮ್ಮ ಆಡಳಿತವು ಕ್ಷೇತ್ರದಲ್ಲಿ ಇವುಗಳನ್ನು ಸಂಶೋಧಿಸುವುದಕ್ಕೆ ಬದಲಾಗಿ, ಈ ವ್ಯಾಪಾರಿಗಳು ಹೇಗೆ ಆಹಾರ ಕಲಬೆರಕೆ ಮಾಡುತ್ತಿದ್ದಾರೆ ಮತ್ತು ಜನರನ್ನು ಹೇಗೆ ಮೂರ್ಖರನ್ನಾಗಿ ಮಾಡುತ್ತಿದ್ದಾರೆ ಎಂಬುದರ ಬಗ್ಗೆ ಸಂಶೋಧನೆ ನಡೆಯುತ್ತಿರುವುದು ನನಗೆ ತಿಳಿದಿದೆ. ಇದು ಜನರಿಗೆ ವಿಷಪ್ರಾಶನ ಮಾಡಿಸುವುದಕ್ಕಿಂತ ಬೇರೇನೂ ಅಲ್ಲ. ಸರ್ಕಾರವು ಈ ವಿಚಾರದಲ್ಲಿ ಅಸಮರ್ಥತೆ ಮತ್ತು ಅಸಹಾಯಕತೆಗಳನ್ನು ತೋರಬಾರದು ಮತ್ತು ಒಪ್ಪಿಕೊಳ್ಳಬಾರದು. ಜನಾರೋಗ್ಯ ಅಧಿನಿಯಮವಿದ್ದಲ್ಲಿ ಅದನ್ನು ಮತ್ತಷ್ಟು ಬಲಪಡಿಸಬೇಕು ಮತ್ತು ಅದನ್ನು ಕಡ್ಡಾಯವಾಗಿ ಜಾರಿಗೊಳಿಸಬೇಕು. ಅಪರಾಧ ಮಾಡಿದವರನ್ನು ನಿಷೇಧದ ಪ್ರಕರಣದಲ್ಲಿ ಕೇವಲ ದಂಡ ವಿಧಿಸದೆ ಅವರನ್ನು ವರ್ಷಗಳಿಗಿಂತ ಕಡಿಮೆಯಲ್ಲದ ಅವಧಿಯವರೆಗೆ ಕಾರಾಗೃಹಗಳಿಗೆ ಕಳುಹಿಸಬೇಕು. ಅಂತಹ ಕಾನೂನನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿದಲ್ಲಿ, ಈ ಕಲಬೆರಕೆ ಪ್ರಕರಣಗಳನ್ನು ನಿಲ್ಲಿಸಬಹುದಾಗಿದೆ. ಇದು ದೇಶದ ಹಿತದೃಷ್ಟಿಯಿಂದ ಅತ್ಯಂತ ಅವಶ್ಯಕವಾಗಿದೆ. ಏಕೆಂದ್ರೆ ಇದರಿಂದ ಜನರ ಜೀವನ ಮಟ್ಟ ಉನ್ನತ ಮಟ್ಟಕ್ಕೆ ಏರುತ್ತದೆ.

ಆಯುರ್ವೇದದ ಕುರಿತು........

**ಮಾನ್ಯ ಸಭಾಪತಿ:** ಕ್ಷಮಿಸಿ, ನೀವು ದಯಮಾಡಿ ನಿಮ್ಮ ಆಸನದಲ್ಲಿ ಕುಳಿತುಕೊಳ್ಳಿ.

# ಆಯವ್ಯಯ ಅಂದಾಜು–1961

**21ನೇ ಮಾರ್ಚ್ 1961**

## ರಾಜ್ಯ ಮತ್ತು ಕ್ಷೇತ್ರದ ಕುರಿತಾದ ಪ್ರಗತಿಪರ ವಿಚಾರಗಳ ಮಂಡನೆ

ಆಯವ್ಯಯವನ್ನು ಸ್ವಾಗತಿಸಿ ಮಾತನಾಡಿದ ಮಾನ್ಯ ಸದಸ್ಯರಾದ ಡಾ॥ ನಾಗಪ್ಪ ಆಳ್ವರವರು, ಅನೇಕ ಕ್ಷೇತ್ರಗಳಲ್ಲಿ ಪ್ರಗತಿಯಾಗಿದ್ದರೂ ಕೆಲವು ಕ್ಷೇತ್ರಗಳಲ್ಲಿ ನಿರೀಕ್ಷಿತ ಮಟ್ಟದಲ್ಲಿ ಪ್ರಗತಿಯಾಗಬೇಕೆಂದು ತಿಳಿಸಿದ ಅವರು, ಪ್ರಾದೇಶಿಕ ಅಸಮತೋಲನವು ಮುಂದುವರಿಯುತ್ತಿರುವ ಕುರಿತಾಗಿ ವಿಷಾದ ವ್ಯಕ್ತಪಡಿಸಿದರು. 3ನೇ ಪಂಚವಾರ್ಷಿಕ ಯೋಜನೆಯಲ್ಲಿ ಆರೋಗ್ಯ ಕ್ಷೇತ್ರಕ್ಕೆ ಮೀಸಲಿಟ್ಟಿರುವ ಹಣ ಕಡಿಮೆಯಾಗಿದೆಯೆಂದು ಸ್ವತಃ ವೈದ್ಯರಾಗಿರುವ ಅವರು ತಿಳಿಸಿದರು. ಜನಸಂಖ್ಯಾ ಸ್ಫೋಟವನ್ನು ನಿಯಂತ್ರಿಸದಿದ್ದರೆ, ದೇಶ ತನ್ನ ಎದುರಿರುವ ಜನಸಂಖ್ಯಾ ನಿಯಂತ್ರಣವನ್ನು ಸಾಧಿಸಲು ಅಸಾಧ್ಯ ಎಂದು ಎಚ್ಚರಿಸಿದರು. ಆಡಳಿತದಲ್ಲಿರುವ ಅನೇಕ ದೋಷಗಳನ್ನು ನಿವಾರಿಸುವ ದಿಸೆಯಲ್ಲಿ ಅಧಿಕಾರಿಗಳು ಕಚೇರಿಯಲ್ಲಿ ಹಾಜರಿದ್ದು, ತಮ್ಮ ದಕ್ಷತೆಯಲ್ಲಿ ಉತ್ತಮಪಡಿಸಿಕೊಳ್ಳಬೇಕೆಂದು ಸಲಹೆ ನೀಡಿದರು.

## ಆಯವ್ಯಯದ ಮೇಲಿನ ಭಾಷಣ

### ವೈದ್ಯಕೀಯ ಶಿಕ್ಷಣದಲ್ಲಿ ಸುಧಾರಣೆ
### ನಿಮ್ಹಾನ್ಸ್ ಸಂಸ್ಥೆಯನ್ನು ರಾಜ್ಯದಲ್ಲಿಯೇ
### ಉಳಿಸಿಕೊಳ್ಳಲು ಸರ್ಕಾರಕ್ಕೆ ಒತ್ತಾಯ

**ಡಾ॥ ಕೆ. ನಾಗಪ್ಪ ಆಳ್ವ (ಪಾಣೆ, ಮಂಗಳೂರು):** ಮಾನ್ಯ ಸಭಾಧ್ಯಕ್ಷರೇ, ನಾನು ಆಯವ್ಯಯವನ್ನು ಸ್ವಾಗತಿಸುತ್ತೇನೆ ಮತ್ತು ಆಯವ್ಯಯದ ಪ್ರಸ್ತಾವನೆಗಳನ್ನು ಬೆಂಬಲಿಸುತ್ತೇನೆ. ಇದೊಂದು ಖೋತಾ (ಕೊರತೆ) ಆಯವ್ಯಯ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಆದರೆ ಇದೊಂದು ಆಶಾದಾಯಕ ಆಯವ್ಯಯ. ಈ ಆಯವ್ಯಯ ವರ್ಷವು ಅನೇಕ ಅಂಶಗಳಿಗೆ ಸಂಬಂಧಿಸಿದಂತೆ ಬಹಳ ಮುಖ್ಯವಾಗಿದೆ. ಇದು ಮೂರನೇ ಪಂಚವಾರ್ಷಿಕ ಯೋಜನೆಯ ಮೊದಲ ವರ್ಷ. ನಾವು ಬೇರೆ ಬೇರೆ ಶೀರ್ಷಿಕೆಗಳ ಮೇಲೆ ಹಣವನ್ನು ಖರ್ಚು ಮಾಡುತ್ತಿದ್ದೇವೆ. ಆದರೆ ಕೆಲವು ವಿಷಯಗಳ ಬಗ್ಗೆ ವಿಶೇಷ ಒತ್ತನ್ನು ನೀಡಬೇಕಾಗಿದೆ. ಆದ್ಯತೆಗಳನ್ನು ಕೂಡ ಅದೇ ರೀತಿ ಹಂಚಬೇಕಾಗಿದೆ. ಸಾಮಾನ್ಯವಾಗಿ ಹೇಳುವುದಾದರೆ, ನಾನು

ಅನೇಕ ನಿಟ್ಟುಗಳಲ್ಲಿ ಪ್ರಗತಿಯಾಗಿದೆ ಎಂಬುದನ್ನು ಒಪ್ಪಿಕೊಳ್ಳಲೇಬೇಕು. ಆದರೆ ನಾವು ವಿಷಯಗಳನ್ನು ಗಂಭೀರವಾಗಿ ತೆಗೆದುಕೊಂಡಿದ್ದಲ್ಲಿ ಮತ್ತು ಆಡಳಿತದ ಮೇಲೆ ದೃಢವಾದ ಹಿಡಿತವನ್ನು ಸಾಧಿಸಿದ್ದಲ್ಲಿ ಮಾತ್ರವೇ ಉತ್ತಮ ಕೆಲಸವನ್ನು ಮಾಡಲಿಕ್ಕಾಗುತ್ತದೆಂಬುದನ್ನೂ ಕೂಡ ನಾನು ಹೇಳಲೇಬೇಕು. ರಾಜ್ಯಗಳ ಪುನರ್ ಸಂಘಟನೆಯು ಅನೇಕ ಸಮಸ್ಯೆಗಳನ್ನು ತಂದೊಡ್ಡಿತೆಂಬುದು ಸತ್ಯ. ಆದರೆ ಕೆಲವು ಪ್ರಮುಖ ಸಮಸ್ಯೆಗಳನ್ನು ಈವರೆಗೆ ಬಗೆಹರಿಸಿಲ್ಲದಿರುವುದು ನಿಜವಾಗಿಯೂ ಅಚ್ಚರಿಯುಂಟುಮಾಡುತ್ತಿದೆ ಮತ್ತು ಸ್ವಲ್ಪಮಟ್ಟಿಗೆ ನಿರಾಶೆಗೊಳಿಸುತ್ತದೆ. ಪ್ರಾದೇಶಿಕ ಅಸಮತೋಲನವು ಭಾರೀ ಪ್ರಮಾಣದಲ್ಲಿ ಮುಂದುವರಿದಿದೆ. ಜೇಷ್ಠತಾ ಪಟ್ಟಿಯ ಅಂತಿಮಗೊಳಿಸುವಿಕೆಯು ವಿಳಂಬವಾಗಿದೆ ಮತ್ತು ಈ ಕಾರಣದಿಂದಾಗಿ, ಕೆಲವು ಅಧಿಕಾರಿಗಳು ಮುಂಬಡ್ತಿ ಪಡೆದಿದ್ದಾರೆ ಹಾಗೂ ಕೆಲವು ಅಧಿಕಾರಿಗಳಿಗೆ ಅನ್ಯಾಯವಾಗಿದೆ. ಬಹುತೇಕ ಅಧಿಕಾರಿಗಳಿಗೆ ನಿರಾಶೆಯಾಗಿದೆ. ಈ ಕುರಿತು ಏಕರೂಪದ ಕಾನೂನುಗಳನ್ನು ಜಾರಿಗೊಳಿಸಿರುವುದಿಲ್ಲ. ಹಾಗಾಗಿ, ಅನೇಕ ಬಿಲ್ಲುಗಳು ಬಾಕಿ ಉಳಿದಿವೆ.

ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ, ಮಾನವ ಸಂಪನ್ಮೂಲಗಳಿಗೆ ಅತಿ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಒಬ್ಬ ವೈದ್ಯನಾಗಿ ನಾನು ಸಂಪೂರ್ಣವಾಗಿ ಅದನ್ನು ಒಪ್ಪಿಕೊಳ್ಳುತ್ತೇನೆ. ಆದರೆ ನಾವು ಆರೋಗ್ಯ ಮತ್ತು ನೈರ್ಮಲ್ಯಕ್ಕಾಗಿ ಮೀಸಲಿರಿಸಲಾದ ಮೊಬಲಗನ್ನು ಗಣನೆಗೆ ತೆಗೆದುಕೊಂಡಲ್ಲಿ, ಅದು ನಿಜವಾಗಿಯೂ ಅತ್ಯಲ್ಪ ಪ್ರಮಾಣದ್ದೆಂಬುದನ್ನು ನಾವು ಕಾಣುತ್ತೇವೆ. ಇದು ಕೇವಲ ಖರ್ಚು ಮಾಡಲು ಉದ್ದೇಶಿಸಲಾದ ಒಟ್ಟು ಮೊಬಲಗಿನ ಹದಿನೈದನೆ ಒಂದು ಭಾಗ ಮಾತ್ರವಾಗಿರುತ್ತದೆ. ಸಾಮಾನ್ಯವಾಗಿ ಹೆಚ್ಚುತ್ತಿರುವ ಜನಸಂಖ್ಯೆಯ ಪ್ರಮಾಣವನ್ನು ಮತ್ತು ನಿರ್ದಿಷ್ಟವಾಗಿ ಇತ್ತೀಚಿನ ಜನಗಣತಿಯ ಅಂಕಿ-ಅಂಶಗಳನ್ನು ಪರಿಗಣಿಸಿದರೆ, ಕಳೆದ ಹತ್ತು ವರ್ಷಗಳ ಅವಧಿಯಲ್ಲಿ ಜನಸಂಖ್ಯೆಯಲ್ಲಿ ಶೇಕಡ 20ರಷ್ಟು ಹೆಚ್ಚಳವಾಗಿದ್ದು ಇದೊಂದು ಅಪಾಯದ ಸೂಚನೆಯಾಗಿದೆ ಎಂಬುದು ತಿಳಿದುಬರುತ್ತದೆ. ನಾವು ಜನಸಂಖ್ಯೆಯ ಬೆಳವಣಿಗೆಯನ್ನು ನಿಯಂತ್ರಿಸದ ಹೊರತು ಮತ್ತು ನಾವು ಸಾಮಾನ್ಯವಾಗಿ ಜನರ ಆರೋಗ್ಯವನ್ನು ಸುಧಾರಿಸದ ಹೊರತು ನಾವು ನಮ್ಮ ಮುಂದೆ ಇಟ್ಟುಕೊಂಡಿರುವಂಥ ಗುರಿಗಳನ್ನು ಸಾಧಿಸಲಿಕ್ಕಾಗುವುದಿಲ್ಲ.

**ಶ್ರೀ ಟಿ. ಮರಿಯಪ್ಪ:** ಆದರೆ, ಮಾನ್ಯ ಸದಸ್ಯರು ಅದೊಂದು ಅತ್ಯಂತ ನಿಧಾನಗತಿಯ ಪ್ರಕ್ರಿಯೆ ಎಂಬುದನ್ನು ಒಪ್ಪಿಕೊಳ್ಳುತ್ತಾರೆ.

**ಡಾ॥ ಕೆ. ನಾಗಪ್ಪ ಆಳ್ವ:** ನಾನು ಯಾವ ವಿಷಯದ ಬಗ್ಗೆ ಒತ್ತಿ ಹೇಳಬೇಕೆಂದಿದ್ದೇನೆಯೋ ಅದೇ ವಿಷಯ ಆಗಿದೆ. ಪ್ರಕ್ರಿಯೆಯನ್ನು ತ್ವರಿತಗೊಳಿಸಬೇಕಾಗಿದೆ. ನಾವು ಕುಟುಂಬ ಯೋಜನೆಯ ಕಡೆಗೆ ಹೆಚ್ಚಿನ ಗಮನವನ್ನು ನೀಡಬೇಕಾಗಿದೆ.

**ಶ್ರೀ ಬಿ.ಎಲ್. ನಾರಾಯಣ ಸ್ವಾಮಿ:** ಕುಟುಂಬ ಯೋಜನೆ ಸಾಮಾನ್ಯ ಆರೋಗ್ಯ ಪರಿಸ್ಥಿತಿಯನ್ನು ಸುಧಾರಿಸುವ ಏಕಮಾತ್ರ ವಿಧಾನವೇ?

**ಶ್ರೀ ಟಿ. ಮರಿಯಪ್ಪ:** ನೀವು ಜನಸಂಖ್ಯೆಯನ್ನು ನಿಯಂತ್ರಿಸಿದಲ್ಲಿ ಹೆಚ್ಚು ಹಣವನ್ನು ಹಾಲಿಯಿರುವ ಜನಸಂಖ್ಯೆಯ ಮೇಲೆ ಖರ್ಚು ಮಾಡಬಹುದಾಗಿದೆ.

**ಶ್ರೀ ಬಿ.ಎಲ್. ನಾರಾಯಣ ಸ್ವಾಮಿ:** ಮಾನ್ಯ ಸದಸ್ಯರು ಸ್ವತಃ ಒಬ್ಬ ವೈದ್ಯರಾಗಿದ್ದಾರೆ. ನಾನು ಅವರ ಅಭಿಪ್ರಾಯ ಕೇಳಬಯಸುತ್ತೇನೆ.

**ಡಾ॥ ಕೆ. ನಾಗಪ್ಪ ಆಳ್ವ:** ಆರೋಗ್ಯಕ್ಕಾಗಿ ಹೆಚ್ಚಿನ ಹಣವನ್ನು ಹಂಚಿಕೆ ಮಾಡಲೇಬೇಕಾಗಿದ್ದು, ಅದು ಪ್ರಥಮ ಆದ್ಯತೆಯನ್ನು ಪಡೆಯಲಿಕ್ಕೆ ಅರ್ಹವಾಗಿರುತ್ತದೆ. ನಾವು ಇತರ ರಾಷ್ಟ್ರಗಳ ಉದಾಹರಣೆಯನ್ನು ನೋಡಿದಲ್ಲಿ, ಅವುಗಳ ಪೈಕಿ ಕೆಲವು ರಾಷ್ಟ್ರಗಳು ಮೊದಲನೇ ಪಂಚವಾರ್ಷಿಕ ಯೋಜನೆಗಾಗಿಯೆ ಮೂರನೇ ಒಂದರಷ್ಟು ಹಣವನ್ನು ಹಂಚಿಕೆ ಮಾಡಿರುವುದನ್ನು ನಾವು ಕಾಣುತ್ತೇವೆ. ನಾವು ಕೇಂದ್ರದಿಂದ ಪಡೆದಿರುವಂತಹ ಮೊಬಲಗುಗಳನ್ನು ಪೂರ್ಣ ಪ್ರಮಾಣದಲ್ಲಿ ಬಳಸಿಕೊಂಡಿಲ್ಲ. ಕೆಲವು ಪ್ರಕರಣಗಳಲ್ಲಿ ಯೋಜನೆಗಳನ್ನು ರೂಪಿಸಿರುವುದಿಲ್ಲ ಎಂಬ ಅಂಶವನ್ನು ಸಹ ನಾನು ಬಹಿರಂಗಪಡಿಸಲಿಚ್ಛಿಸುತ್ತೇನೆ. ನಾನು ಮೂರನೇಯ ಪಂಚವಾರ್ಷಿಕ ಯೋಜನೆಯ ಕರಡಿನಿಂದ ಒಂದು ವಾಕ್ಯವನ್ನು ಉದ್ಧರಿಸಲಿಚ್ಛಿಸುತ್ತೇನೆ.

"ಮೊದಲನೆಯ ಮತ್ತು ಎರಡನೆಯ ಯೋಜನೆಯ ಅವಧಿಗಳಲ್ಲಿ ನಮ್ಮ ರಾಜ್ಯದಲ್ಲಿ ಕೇಂದ್ರದ ವೆಚ್ಚವು ಶ್ಲಾಘನೀಯವಾಗಿರುವುದಿಲ್ಲ."

ಇದು ಒಪ್ಪಿಗೆಯಾದ ವಿಚಾರ. ಕಳೆದ ವಿಶ್ಲೇಷಣೆಯಲ್ಲಿನ ರಾಷ್ಟ್ರೀಯ ಆದ್ಯತೆಯು ಅವಿಭಾಜ್ಯವಾದುದು. ಅದು ನಮಗಾಗಿ ನಮ್ಮ ಸಂಪೂರ್ಣ ಬಲವನ್ನು ಉಪಯೋಗಿಸಿಕೊಳ್ಳಲು ಮತ್ತು ಬೇಡಿಕೆಯನ್ನು ಮಾಡಲು ಸಾಧ್ಯವಿರುವಂಥದ್ದೆಲ್ಲವನ್ನು ಪಡೆಯುವುದಾಗಿದೆ.

ಸಚಿವರ ಸಂಖ್ಯೆಯ ಹೆಚ್ಚಳದ ಬಗ್ಗೆ ಹಾಗೂ ಅವರಿಗೆ ನೀಡಲಾದ ಉಪಲಬ್ಧಿಗಳ ಬಗ್ಗೆ ಸಾಕಷ್ಟು ಟೀಕೆಗಳು ಬಂದಿವೆ. ಸಚಿವರುಗಳು ಪ್ರವಾಸದಲ್ಲೇ

ತಮ್ಮ ಸಮಯವೆಲ್ಲವನ್ನು ಕಳೆಯಬೇಕಾಗಿರುವುದರಿಂದ ಅವರು ತಮ್ಮ ವೇತನದ ರೂಪದಲ್ಲಿ ಬರುವ ಆದಾಯಕ್ಕಿಂತ ಪ್ರವಾಸಗಳಿಂದ ಹೆಚ್ಚು ಆದಾಯವನ್ನು ಪಡೆಯಲೆತ್ನಿಸುತ್ತಾರೆಂಬುದನ್ನು ನಾನು ಖಂಡಿತವಾಗಿಯೂ ಒಪ್ಪಿಕೊಳ್ಳುವುದಿಲ್ಲ. ಇದು ಒಳ್ಳೆಯದಲ್ಲ ಮತ್ತು ನಾವು ಅದನ್ನು ಪ್ರೋತ್ಸಾಹಿಸಬಾರದು. ಆದರೆ ಸಚಿವರುಗಳು ಗೌರವದಿಂದ ಬಾಳಬಹುದಾದ ಹಾಗೆ ಅವರ ವೇತನವನ್ನು 3 ಅಥವಾ 4 ನೂರು ರೂಪಾಯಿಗಳಿಗೆ ಹೆಚ್ಚಿಸಬೇಕಾಗಿರುವುದು ಮತ್ತು ಪದೇ ಪದೇ ಪ್ರವಾಸಗಳನ್ನು ಹಮ್ಮಿಕೊಳ್ಳದಂತೆ ಅವರನ್ನು ತಡೆಯುವುದು ಅಗತ್ಯವೆಂದು ನಾನು ಭಾವಿಸುತ್ತೇನೆ. ಆಡಳಿತವನ್ನು ಅದರ ಅನೇಕ ದುಷ್ಕೃತ್ಯಗಳಿಂದ ಪಾರುಮಾಡಬೇಕಾಗಿದೆ. ಅನೇಕ ಉಪಾಯ ಮಾರ್ಗಗಳಿವೆ. ನಾನು ಅಧಿಕಾರಶಾಹಿಯಲ್ಲಿ ಮತ್ತೊಂದು ನಿಧಾನಗತಿ ಕೆಲಸ ನಿರ್ವಹಣೆಯ ರೋಗವನ್ನು ಪತ್ತೆ ಹಚ್ಚಿದ್ದೇನೆ. ಇಲಾಖೆಗಳ ಮುಖ್ಯಸ್ಥರ ಸಭೆಗಳನ್ನು ಪದೇ ಪದೇ ನಡೆಸುತ್ತಾರೆ. ಕೆಲವು ವೇಳೆ ಸಚಿವರುಗಳು ಇಲಾಖೆಯ ಮುಖ್ಯಸ್ಥರ ಸಭೆಯನ್ನು ಕರೆಯುತ್ತಾರೆ. ಇದರ ಪರಿಣಾಮವಾಗಿ ಕಚೇರಿ ವೇಳೆಯಲ್ಲಿ ಕೆಲಸಕ್ಕೆ ಬಾಧಕವಾಗುತ್ತದೆ. ನಾವು ಕಚೇರಿ ವೇಳೆಯಲ್ಲಿ ತಮ್ಮ ಕಚೇರಿಯಲ್ಲಿ ಇಲಾಖೆಗಳ ಮುಖ್ಯಸ್ಥರುಗಳನ್ನು ನೋಡಲಿಕ್ಕಾಗುವುದಿಲ್ಲ. ನಾನು ಇತ್ತೀಚೆಗೆ ಎರಡು ಕಚೇರಿಗಳಿಗೆ ಭೇಟಿ ನೀಡಿದ್ದೆ ಮತ್ತು ಅಲ್ಲಿ ನನಗೆ ಇಲಾಖೆಯ ಮುಖ್ಯಸ್ಥರಾಗಲಿ ಅಥವಾ ಸಂಬಂಧಪಟ್ಟ ಗುಮಾಸ್ತನಾಗಲಿ ಅಥವಾ ವ್ಯವಸ್ಥಾಪಕನಾಗಲಿ ಇಲ್ಲವೆ ಅಧೀಕ್ಷಕನಾಗಲಿ ಕಂಡುಬರಲಿಲ್ಲ. ಇಲಾಖೆಯ ಮುಖ್ಯಸ್ಥರು ಯಾವಾಗ ವಾಪಸ್ಸು ಬರುವರೆಂಬುದು ಅವರೆಲ್ಲರಿಗೂ ಗೊತ್ತಿರುವುದರಿಂದ ಅವರು ಕೆಲಸಕ್ಕೆ ಚಕ್ಕರ್ ಹೊಡೆದು ಎಲ್ಲಿಯಾದರೂ ಸುತ್ತಾಡಲಿಕ್ಕೆ ಹೋಗಿರುತ್ತಾರೆ. ಇದು ಅಗಾಧ ಪ್ರಮಾಣದಲ್ಲಿ ದಕ್ಷತೆಯನ್ನು ಕುಗ್ಗಿಸಿದೆ. ಒಂದು ವಾರದವರೆಗೆ ಅಥವಾ ಒಂದು ದಿನದವರೆಗೆ ಅಥವಾ ಇತ್ಯಾದಿಯಾಗಿ ಸಮ್ಮೇಳನಗಳು ಮತ್ತು ಆಚರಣೆಗಳು ನಡೆಯುವ ಕಾರಣದಿಂದಾಗಿ ಸಾಕಷ್ಟು ದಿನಗಳು ಕಳೆದುಹೋಗುತ್ತವೆ.

ಮಂಗಳೂರು ಸರ್ವಋತು ಬಂದರಿನ ನಿರ್ಮಾಣಕ್ಕೆ ಸಂಬಂಧಿಸಿದಂತೆ ಅನೇಕ ತಾಂತ್ರಿಕ ತೊಂದರೆಗಳಿರುವುದರಿಂದ ಅವುಗಳನ್ನು ತ್ವರಿತ ಗತಿಯಲ್ಲಿ ನಿವಾರಿಸಲು ಪರಿಣಿತ ಅಧಿಕಾರಿಗಳನ್ನು ನೇಮಿಸಬೇಕೆಂದು ಆಗ್ರಹಿಸಿದರು.

## ಮಂಗಳೂರು ಸರ್ವಋತು ಬಂದರಿನ ನಿರ್ಮಾಣಕ್ಕೆ ಒತ್ತಾಯ

ಆಮೇಲೆ ಮಾನ್ಯರೇ, ಮಂಗಳೂರು ಬಂದರು ಮತ್ತು ಹಾಸನ ಮಂಗಳೂರು ರೈಲು ಮಾರ್ಗದ ಬಗ್ಗೆ ನಾನು ಕೆಲವೇ ಕೆಲವು ಮಾತುಗಳನ್ನು

ಹೇಳಬಯಸುತ್ತೇನೆ. ನಮ್ಮ ಪ್ರಯತ್ನ ಸಾಕಷ್ಟು ಪ್ರಮಾಣದಲ್ಲಿ ನಡೆದಿರುವುದಿಲ್ಲ. ಸಹಜವಾಗಿ ನಮ್ಮ ಮಂತ್ರಿಗಳು ತಮ್ಮದೇ ಆದ ರೀತಿಯಲ್ಲಿ ಒಂದಷ್ಟು ಕೆಲಸ ಮಾಡುತ್ತಿದ್ದಾರೆ. ನಾವು ಇತಿಹಾಸ ಮತ್ತು ಬೇರೆ ರಾಜ್ಯಗಳು ಅಳವಡಿಸಿಕೊಂಡ ಕೆಲವು ವಿಧಾನಗಳನ್ನು ಉದಾಹರಣೆಗೆ ಮದ್ರಾಸ್, ಕಲ್ಕತ್ತಾ ಅಥವಾ ಮುಂಬೈಗಳು ------ ಅಳವಡಿಸಿಕೊಂಡ ಕೆಲವು ವಿಧಾನಗಳನ್ನು ನೋಡಿದಲ್ಲಿ ಅವು ಅಳವಡಿಸಿಕೊಂಡ ವಿಧಾನಗಳು ಭಿನ್ನವಾಗಿರುತ್ತವೆ. ಆ ರಾಜ್ಯಗಳು, ತಾವು ಬಂದರುಗಳು ಮತ್ತು ರೈಲು ಮಾರ್ಗಗಳನ್ನು ಹೊಂದುವಂಥ ತಮ್ಮ ವಿಧಾನಗಳಲ್ಲಿ ಸಾಕಷ್ಟು ಸತತವಾದ ಮತ್ತು ಪಟ್ಟು ಹಿಡಿದು ಮಾಡಿಸುವಂಥ ಪ್ರಯತ್ನವಿದೆ. ಆದರೆ, ಇಲ್ಲಿ ದಕ್ಷಿಣದ ರಾಜ್ಯಗಳನ್ನು ನಿರ್ಲಕ್ಷಿಸಲಾಗುತ್ತಿದೆ. ನಮಗೆ ಹಾಸನ - ಮಂಗಳೂರು ರೈಲು ಮಾರ್ಗವನ್ನು ಮಂಜೂರು ಮಾಡಿಸಿಕೊಳ್ಳಲಿಕ್ಕೆ ಸಾಧ್ಯವಾಗದಿದ್ದರೆ, ನಮಗೆ ಇನ್ನೇನನ್ನು ಪಡೆಯಲಿಕ್ಕೆ ಸಾಧ್ಯವಿದೆ? ಇದು ಸಹಜವಾಗಿ ಈ ಭಾಗಕ್ಕೆ ರೈಲು ಮಾರ್ಗವನ್ನು ಮೂರನೇ ಯೋಜನೆಯಲ್ಲಿ ಸೇರಿಸಬೇಕೆಂಬುದನ್ನು ಪ್ರೋತ್ಸಾಹಿಸುತ್ತಿದೆ. ಆದರೆ ಮಂಗಳೂರು ಬಂದರು ಬಗ್ಗೆ ಯಾವುದಾದರೂ ತಾಂತ್ರಿಕ ಆಕ್ಷೇಪಣೆಗಳಿರುತ್ತವೆ ಮತ್ತು ಉತ್ತರದ ರಾಜ್ಯಗಳ ಕೆಲವು ತಂತ್ರಗಳನ್ನು ಅಳವಡಿಸಿಕೊಳ್ಳುತ್ತಿರುವ ಬಗ್ಗೆ ನನಗೆ ವಿಷಾದವೆನಿಸುತ್ತದೆ ಮತ್ತು ಇದು ವಿಳಂಬ ಮಾಡುತ್ತಿದೆ. ಮಾನ್ಯರೇ, ನಾನು ಕೂಡಲೇ ಒಬ್ಬ ಅಧಿಕಾರಿಯನ್ನು ವಿಶೇಷ ಕರ್ತವ್ಯದ ಮೇಲೆ ಕನಿಷ್ಠ ಆರು ತಿಂಗಳವರೆಗೆ ನೇಮಕ ಮಾಡಬೇಕೆಂದು ಸಲಹೆ ಮಾಡುತ್ತೇನೆ. ಇಂದು ಭಾರತದಲ್ಲಿ ಇಬ್ಬರು ತಜ್ಞರುಗಳಿದ್ದು, ಇವರು ಇಲ್ಲಿಂದ ಉನ್ನತ ಮಟ್ಟದವರೆಗೆ ಈ ಕಾಗದ ಪತ್ರಗಳ ಬಗ್ಗೆ ಅನುಸರಣಾ ಕ್ರಮ ಕೈಗೊಳ್ಳುವ ಮತ್ತು ತೀರ್ಮಾನಗಳನ್ನು ತೆಗೆದುಕೊಳ್ಳುವ ಸ್ಥಾನದಲ್ಲಿದ್ದಾರೆ.

ನಾನು, ಪರಿಸರದ ನೈರ್ಮಲ್ಯ ಮತ್ತು ಜನರ ಆರೋಗ್ಯಕ್ಕೆ ಸಂಬಂಧಿಸಿದ ಪ್ರತಿಯೊಂದು ವಿಷಯದಲ್ಲಿ ಅತ್ಯಂತ ಮಹತ್ವದ್ದಾಗಿರುವಂತಹ ಒಳಚರಂಡಿ ವ್ಯವಸ್ಥೆ ಮತ್ತು ನೀರು ಸರಬರಾಜಿನ ಬಗ್ಗೆ ಒಂದು ಮಾತನ್ನು ಹೇಳಬೇಕಾಗಿದೆ.

**ಶ್ರೀ ಟಿ. ಮರಿಯಪ್ಪ:** ನೀವು ಕಾಗದ ಪತ್ರಗಳ ಬಗ್ಗೆ ಅನುಸರಣಾ ಕ್ರಮ ಕೈಗೊಳ್ಳುವ ವಿಶೇಷ ಅಧಿಕಾರಿಯ ನೇಮಕಾತಿಗೆ ಸಂಬಂಧಿಸಿದಂತೆ ಹೆಚ್ಚು ಸ್ಪಷ್ಟತೆಯನ್ನು ನೀಡಿರುವುದಿಲ್ಲ. ಯಾವ ಕಾಗದಪತ್ರಗಳನ್ನು ಅನುಸರಣೆ ಮಾಡಬೇಕು ಎಂಬುದನ್ನು ಸ್ಪಷ್ಟಪಡಿಸಿರುವುದಿಲ್ಲ. ಅದರ ಘೋಷಣೆಯನ್ನು ಇನ್ನೂ ಮಾಡಬೇಕಾಗಿದೆ ಮತ್ತು ಅದನ್ನು ಇನ್ನೂ ಮಾಡಿರುವುದಿಲ್ಲ.

**ಡಾ॥ ಕೆ. ನಾಗಪ್ಪ ಆಳ್ವ:** ವ್ಯವಹಾರಗಳ ಬಗ್ಗೆ ಅದರಲ್ಲೂ ವಿಶೇಷವಾಗಿ ಮಂಗಳೂರು ಬಂದರು ಟ್ರಸ್ಟ್ ಮಂಡಳಿಯ ವ್ಯವಹಾರಗಳ ಬಗ್ಗೆ ನನಗೆ ಗೊತ್ತಿದೆ. ನಾನು ಎರಡು ವರ್ಷಗಳ ಕಾಲ ಬಂದರು ಟ್ರಸ್ಟ್‌ನ ಸದಸ್ಯನಾಗಿದ್ದೆ ಮತ್ತು ಎಲ್ಲಾ ಹವಾಮಾನದ ಬಂದರಿನ್ನಾಗಿ ಪೂನಾದಲ್ಲಿ ಪ್ರಯೋಗಗಳನ್ನು ನಡೆಸಿರುವುದು ನನಗೆ ಗೊತ್ತಿದೆ. ಅದು ಲಗೂನ್ ಮಾದರಿಯ ಬಂದರಾಗಿರಬೇಕೆ? ಹೇಗೆ? ಎಂಬುದರ ಬಗ್ಗೆ ಕೆಲವು ಭಿನ್ನಾಭಿಪ್ರಾಯಗಳಿವೆ. ನಾನು ಏನು ಹೇಳುತ್ತಿದ್ದೀನಿ ಅಂದ್ರೆ, ವಿಷಯವನ್ನು ಬೆನ್ನತ್ತಿ ಅನುಸರಣೆ ಮಾಡಬಹುದಾದಂತಹ ಕೆಲವು ಅಧಿಕಾರಿಗಳಿದ್ದ ಹೊರತು, ನಿಯತ ರೀತಿಯಲ್ಲಿ ಈ ಕಾರ್ಯವನ್ನು ಸಾಧಿಸುವುದು ಕಷ್ಟವಾಗುತ್ತದೆ. ಈ ವಿಷಯದಲ್ಲಿ ಈ ತರಹ ವಿಳಂಬ ಮಾಡುವುದರಿಂದ ನಮಗೇನೂ ಸಹಾಯವಾಗುವುದಿಲ್ಲ. ನಾವು ಕನಿಷ್ಠಪಕ್ಷ ಈಗಲಾದರೂ ಈ ವಿಷಯವನ್ನು ತ್ವರಿತಗೊಳಿಸಿದರೆ, ಕೆಲವೇ ತಿಂಗಳುಗಳ ಸಮಯದಲ್ಲಿ ಅದನ್ನು ಪಡೆಯಬಹುದೆಂಬ ದೃಢ ವಿಶ್ವಾಸ ನನಗಿದೆ.

ಬೆಂಗಳೂರಿನಲ್ಲಿ ಹೆಚ್ಚುತ್ತಿರುವ ಜನಸಂಖ್ಯೆಯನ್ನು ಗಮನದಲ್ಲಿರಿಸಿಕೊಂಡು ಸಮರ್ಪಕವಾದ ರೀತಿಯಲ್ಲಿ ಕುಡಿಯುವ ನೀರು ಮತ್ತು ಒಳಚರಂಡಿ ವ್ಯವಸ್ಥೆಯನ್ನು ಸಕಾಲದಲ್ಲಿ ಕೈಗೊಳ್ಳಬೇಕಾಗುತ್ತದೆ. ಈಗ ಇರುವ ವ್ಯವಸ್ಥೆಯಿಂದಾಗಿ ಸೊಳ್ಳೆ ಮತ್ತಿತರ ಅನಾರೋಗ್ಯಕರ ಪರಿಸ್ಥಿತಿಯು ನಿರ್ಮಾಣವಾಗಲು ಕಾರಣವಾಗಿದೆ. ಐದನೇ ಪಂಚವಾರ್ಷಿಕ ಯೋಜನೆಯಲ್ಲಿ ಈ ಕುರಿತಾದ ಏರ್ಪಾಡನ್ನು ಕೈಗೊಂಡು ಸಮಸ್ಯೆಯನ್ನು ನಿವಾರಿಸಲು ಒತ್ತಾಯಿಸಿದರು.

## ಬೆಂಗಳೂರು ನಗರಕ್ಕೆ ಕುಡಿಯುವ ನೀರು ಮತ್ತು ಒಳಚರಂಡಿಯ ವ್ಯವಸ್ಥೆಗಾಗಿ ಒತ್ತಾಯ.

ಮಾನ್ಯರೇ, ಒಳಚರಂಡಿ ಮತ್ತು ನೀರು ಸರಬರಾಜು ವ್ಯವಸ್ಥೆಯು ಕಿಂಚಿತ್ತೂ ತೃಪ್ತಿಕರವಾಗಿಲ್ಲ. ನಾನು ಈ ಬೆಂಗಳೂರು ನಗರವನ್ನೇ ಉದಾಹರಣೆಯಾಗಿ ಕೊಡಬಹುದು. ಅದು ನಿಜವಾಗಿಯೂ ಎದೆಗುಂದಿಸುತ್ತಿದೆ. ಅಗಾಧ ಪ್ರಮಾಣದಲ್ಲಿ ಹೆಚ್ಚುತ್ತಿರುವ ಜನಸಂಖ್ಯೆಗೆ ತಕ್ಕಂತೆ ಇಲ್ಲಿ ನಿಮಗೆ ನೀರು ಸಿಗುವುದಿಲ್ಲ. ಲಕ್ಷಾಂತರ ಜನರು ನೀರು ಮತ್ತು ಒಳಚರಂಡಿ ವ್ಯವಸ್ಥೆಯ ಸೌಲಭ್ಯಗಳ ಕೊರತೆಯಿಂದ ನರಳುತ್ತಿದ್ದಾರೆ. ಸೊಳ್ಳೆಗಳ ಉಪಟಳವು ಭಯಂಕರವಾಗಿದೆ. ಈ ಎಲ್ಲಾ ಸಂಗತಿಗಳನ್ನು ನಿಯಂತ್ರಿಸುವುದು ಸಾಧ್ಯವಿಲ್ಲ.

ನಾನು ಇತ್ತೀಚೆಗೆ ನಡೆದ ವಿಚಾರಗೋಷ್ಠಿಯ ನಂತರ ನಮ್ಮ ಸರ್ಕಾರವು ಪ್ರಕಟಿಸಿದಂಥ ಸ್ಮರಣ ಸಂಚಿಕೆಯಿಂದ ಒಂದು ವಾಕ್ಯವನ್ನು ತೆಗೆದುಕೊಂಡು ಇಲ್ಲಿ ಓದಲಿಚ್ಛಿಸುತ್ತೇನೆ. "ಒಳಚರಂಡಿ ವ್ಯವಸ್ಥೆಯ ಸಂಬಂಧದಲ್ಲಿ 126 ಲಕ್ಷ ರೂ.ಗಳ ಒಂದು ಅಂದಾಜು ಮೊಬಲಗನ್ನು ಇತ್ತೀಚೆಗೆ ಸರ್ಕಾರವು ಮಂಜೂರು ಮಾಡಿದೆ. 21 ವರ್ಷಗಳ ಚಳವಳಿಯ ನಂತರ ಇದನ್ನು ಮಂಜೂರು ಮಾಡಲಾಗಿದೆ. ಜನಸಂಖ್ಯೆಯ ಭಾರಿ ಹೆಚ್ಚಳದ ಹಿನ್ನೆಲೆಯಲ್ಲಿ ---- ಬೃಹತ್ ಬೆಂಗಳೂರಿಗಾಗಿ ನೀರು ಸರಬರಾಜಿನ ಒಂದು ದೂರವ್ಯಾಪಿ ಕಾರ್ಯಕ್ರಮದ ಬಗ್ಗೆ ಯೋಚಿಸಬೇಕಾದ ಅಗತ್ಯವಿದೆ. ಈ ಸಂಬಂಧದಲ್ಲಿ, ಅನೇಕ ಪರ್ಯಾಯ ಯೋಜನೆಗಳು ನಮ್ಮ ಸರ್ಕಾರದ ಪರಿಶೀಲನೆಯಲ್ಲಿವೆ ಮತ್ತು ಸುಮಾರು 10 ಕೋಟಿ ರೂಪಾಯಿಗಳ ವೆಚ್ಚಕ್ಕೆ ನಿರೀಕ್ಷಿಸಲಾದ ಒಂದು ಯೋಜನೆಯನ್ನು ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಸೇರಿಸಬೇಕೆಂದು ಉದ್ದೇಶಿಸಲಾಗಿದೆ.

14 ಲಕ್ಷದಷ್ಟಿರುವ ಜನಸಂಖ್ಯೆಗೆ ಕೇವಲ 10 ಕೋಟಿ ರೂಪಾಯಿಗಳ ಈ ಮೊಬಲಗು ಏನೇನೂ ಸಾಲದು! ನಾವು ಸ್ವತಃ ಕೇಂದ್ರ ಸರ್ಕಾರದಿಂದಲೇ ಈ ಒಳಚರಂಡಿ ಮತ್ತು ನೀರು ಸರಬರಾಜು ಯೋಜನೆಗಳಿಗಾಗಿ ಸಾಕಷ್ಟು ಹಣವನ್ನು ಪಡೆಯುತ್ತಿದ್ದೇವೆ ಎಂಬುದು ನಮಗೆ ಗೊತ್ತಿದೆ. ಆದರೆ ಖಚಿತವಾಗಿ ಏನೂ ಇಲ್ಲ. ನಾನು ಇದನ್ನು ಖಚಿತವಾಗಿ ಮುಂದುವರಿಸಿಕೊಂಡು ಹೋಗುವಂತೆ ಸರ್ಕಾರವನ್ನು ಕೋರುತ್ತೇನೆ.

ಸಿಟಿ ಇಂಪ್ರೂವ್‌ಮೆಂಟ್ ಟ್ರಸ್ಟ್ ನಿವೇಶನಗಳನ್ನು ಹಂಚುವ ವಿಧಾನದಲ್ಲಿರುವ ತೊಡಕುಗಳನ್ನು ನಿವಾರಣೆ ಮಾಡಬೇಕೆಂದು ತಿಳಿಸಿದರು. ಕೊಳಚೆ ಪ್ರದೇಶ ಅಭಿವೃದ್ಧಿಯಲ್ಲಿ ಕಂಡುಬರುತ್ತಿರುವ ತಾರತಮ್ಯವನ್ನು ಹೋಗಲಾಡಿಸಬೇಕೆಂದರು.

## ನಿವೇಶನ ಹಂಚಿಕೆಯ ವಿಧಾನವನ್ನು ಸಮರ್ಪಕಗೊಳಿಸಿ ಹಾಗೂ ಕೊಳಚೆ ಪ್ರದೇಶ ಅಭಿವೃದ್ಧಿಯನ್ನು ಕೈಗೊಳ್ಳಿ

ಆನಂತರ ನಾನು ನಗರ ಸುಧಾರಣೆ ಟ್ರಸ್ಟ್ ಮಂಡಳಿ ಬಗ್ಗೆ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ನಗರ ಸುಧಾರಣಾ ಟ್ರಸ್ಟ್ ಮಂಡಳಿಯು ನಗರವನ್ನು ಸುಧಾರಣೆ ಮಾಡಲು ಸರ್ಕಾರದಿಂದ ರಚಿತವಾದ ಒಂದು ಸಂಸ್ಥೆ. ಆದರೆ ಇದರ ಕೆಲಸ ಕಾರ್ಯಗಳು ಹೆಚ್ಚು ತೃಪ್ತಿಕರವಾಗಿಲ್ಲ. ವಾಸ್ತವವಾಗಿ, ಇದು ಸರ್ಕಾರದ ಹೆಸರನ್ನು ಕೆಡಿಸಿದೆ ಮತ್ತು ಈ ಬಡಾವಣೆಗಳನ್ನು, ರಸ್ತೆಗಳು – ಚರಂಡಿಗಳು ಮತ್ತು ನೀರು ಸರಬರಾಜು ಹಾಗೂ ಈ ಎಲ್ಲಾ ಕಾರ್ಯಗಳನ್ನು

ಪೂರ್ಣಗೊಳಿಸಿದ ನಂತರ ನಗರ ಪಾಲಿಕೆಗೆ ವಹಿಸಿಕೊಡಬೇಕಾಗಿತ್ತು. ಅವುಗಳನ್ನು ಸಕಾಲಕ್ಕೆ ವಹಿಸಿಕೊಟ್ಟಿರುವುದಿಲ್ಲ ಮತ್ತು ನಗರ ಪಾಲಿಕೆಯು ಅದರ ವಶದಲ್ಲಿರುವ ಈ ಬಡಾವಣೆಗಳನ್ನು ತನ್ನ ವಶಕ್ಕೆ ತೆಗೆದುಕೊಂಡ ಹೊರತು ಆ ಪ್ರದೇಶದಲ್ಲಿ ವಾಸಿಸುವಂಥ ಜನರಿಗೆ ಎಲ್ಲಾ ಸೌಲಭ್ಯಗಳು ದೊರೆಯುವುದಿಲ್ಲ.

**ಶ್ರೀ ಟಿ. ಸುಬ್ರಹ್ಮಣ್ಯ:** ನಗರ ಪಾಲಿಕೆಯು ಕೂಡ ಈ ಬಡಾವಣೆಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಸಿದ್ಧವಾಗಿದೆಯೆಂದು ನೀವು ಭಾವಿಸುವಿರಾ?

**ಡಾ॥ ಕೆ. ನಾಗಪ್ಪ ಆಳ್ವ:** ನೀವು ಸಕಾಲದಲ್ಲಿ ಷರತ್ತುಗಳನ್ನು ಪೂರೈಸಿರುವುದಿಲ್ಲ. ನೀವು ಜನರನ್ನು ಸಂದಿಗ್ಧ ಪರಿಸ್ಥಿತಿಯಲ್ಲಿ ಇಟ್ಟಿದ್ದೀರಿ. ಅಲ್ಲಿ ವಾಸಮಾಡುತ್ತಿರುವಂತಹ ಜನರನ್ನು ನಗರ ಪಾಲಿಕೆಯ ನಾಗರಿಕರೆಂದು ಪರಿಗಣಿಸಿರುವುದಿಲ್ಲ.

ಮತ್ತೆ ಮಾನ್ಯರೇ, ನಿವೇಶನಗಳ ಹಂಚಿಕೆಯ ಬಗ್ಗೆ ಹೇಳುವುದಾದರೆ, ಸಾಕಷ್ಟು ಅಕ್ರಮಗಳು ನಡೆದಿವೆ. ಈ ವಿಷಯವು ನ್ಯಾಯಾಲಯದಲ್ಲಿರುವ ಕಾರಣ ನಾನು ಕೆಲವು ಅಂಶಗಳನ್ನು ಹೇಳಬಯಸುವುದಿಲ್ಲ. ನಿರಾಕ್ಷೇಪಣಾ ಪತ್ರಗಳನ್ನು ನೀಡುವ ಪ್ರಶ್ನೆಯೇ ಭಯಾನಕವಾಗಿದೆ. ಟ್ರಸ್ಟ್ ಮಂಡಳಿಯ ನಿರ್ಣಯದ ವಿರುದ್ಧ ಜಿಲ್ಲಾ ನ್ಯಾಯಾಲಯಕ್ಕೆ ಮತ್ತು ಉಚ್ಚ ನ್ಯಾಯಾಲಯಕ್ಕೆ ಹೋಗಿರುವಂತಹ ಸಾಕಷ್ಟು ಸಂಖ್ಯೆಯ ಪ್ರಕರಣಗಳಿದ್ದು, ಈ ನ್ಯಾಯಾಲಯಗಳ ತೀರ್ಪು ಟ್ರಸ್ಟ್ ಮಂಡಳಿಯ ವಿರುದ್ಧ ಬಂದಿರುವುದು ನನಗೆ ಗೊತ್ತಿದೆ.

ಆಮೇಲೆ ಮಾನ್ಯರೇ, ಕೊಳಚೆ ನಿರ್ಮೂಲನೆಯ ಬಗ್ಗೆ. ಇದೊಂದು ಅತ್ಯಂತ ಮಹತ್ವದ ವಿಷಯ. ಇದನ್ನು ಅತ್ಯಂತ ಗಂಭೀರವಾಗಿ ತೆಗೆದುಕೊಳ್ಳಬೇಕಾಗಿದೆ. ಇಲ್ಲೂ ಕೂಡ ಕೆಲವು ಬಗೆಯ ಪಕ್ಷಪಾತವು ನಿಚ್ಚಳವಾಗಿ ಕಾಣುತ್ತದೆ. ನಗರದ ಕೇಂದ್ರ ಭಾಗಗಳಲ್ಲಿರುವ ಕೊಳಚೆ ಪ್ರದೇಶಗಳನ್ನು ಮೊದಲು ಕೈಗೆತ್ತಿಕೊಳ್ಳಬೇಕು. ಆದರೆ ಏನಾಗಿದೆ? ಅಂದ್ರೆ ಹೊರವಲಯದಲ್ಲಿರುವಂತಹ ಕೊಳಚೆ ಪ್ರದೇಶಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ ಮತ್ತು ಅವುಗಳನ್ನು ಅಭಿವೃದ್ಧಿಪಡಿಸಲಾಗಿದೆ. ಸರ್ಕಾರವು ಈ ಅಂಶಗಳ ಕಡೆಗೆ ಗಮನಹರಿಸಬೇಕಾದುದು ಅಗತ್ಯವಾಗಿದೆ.

ಈಗ, ನಾನು ಆರೋಗ್ಯ ಕುರಿತ ವಿಷಯಕ್ಕೆ ಬರುತ್ತೇನೆ. ಈ ಸಂಬಂಧದಲ್ಲಿ ಹೆಚ್ಚು ಜಾಹೀರಾತು ಮತ್ತು ಪ್ರಚಾರವನ್ನು ಮಾಡಬೇಕಾಗಿದೆ. ಇದನ್ನೇ ಆರೋಗ್ಯ ಶಿಕ್ಷಣ ಎಂದು ಕರೆಯುವುದು. ಸಮರ್ಪಕ ಶಿಕ್ಷಣವನ್ನು ನೀಡಬೇಕು. ಆರೋಗ್ಯ ಶಿಕ್ಷಣವು ಒಂದು ಪ್ರಹಸನವಾಗಿದೆ.

ಅನೇಕ ಸ್ಥಳಗಳಲ್ಲಿ, ಆರೋಗ್ಯಾಧಿಕಾರಿಗಳು ಮತ್ತು ನೈರ್ಮಲ್ಯ ನಿರೀಕ್ಷಕರು ಹಾಗೂ ಇತರ ಸಂದರ್ಶಕರು ಕೇವಲ ದಾಖಲೆಗಳನ್ನು ತಯಾರಿಸುವುದು ಮತ್ತು ಸಾವಿರಾರು ಜನರು ಭಾಗವಹಿಸಿ ತಮ್ಮ ಉಪನ್ಯಾಸಗಳನ್ನು ಕೇಳಿದರೆಂದು ತೋರಿಸುವಂತಹ ದಾಖಲೆಗಳಿರುವುದು ನನಗೆ ತಿಳಿದಿದೆ. ವಾಸ್ತವವಾಗಿ, ಹಾಗೆ ಮಾಡಲಿಕ್ಕಾಗುವುದಿಲ್ಲ. ಆರೋಗ್ಯ ಶಿಕ್ಷಣವನ್ನು ಅತ್ಯಂತ ಆಕರ್ಷಕವಾಗಿ ವ್ಯವಸ್ಥೆಗೊಳಿಸಬೇಕಾಗಿದೆ.

ನಂತರ ಆಸ್ಪತ್ರೆಗಳ ಹಾಸಿಗೆಗಳ ಸಂಖ್ಯೆಯನ್ನು ಹೆಚ್ಚಿಸಬೇಕೆಂಬುದರ ಬಗ್ಗೆ ಒಂದು ಮಾತನ್ನು ಹೇಳಲಿಚ್ಛಿಸುತ್ತೇನೆ. ಆಸ್ಪತ್ರೆಗಳಲ್ಲಿನ ಸ್ಥಿತಿಯನ್ನು ಸುಧಾರಿಸಬೇಕು.

ವೈದ್ಯಕೀಯ ಶಿಕ್ಷಣದಲ್ಲಿ ಉತ್ತಮ ಗುಣಮಟ್ಟ ಕಾಪಾಡಿಕೊಳ್ಳಬೇಕೆಂದು ತಿಳಿಸಿದರು. ಕಸ್ತೂರಿಬಾ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವಿ ಪ್ರಾರಂಭಿಸಲು ಅನುಮತಿ ದೊರಕಿದ್ದರೂ, ಆಸ್ಪತ್ರೆಗೆ ದೊರೆಯಬೇಕಾಗಿದ್ದ ಆರ್ಥಿಕ ನೆರವು ಸಿಗದೇ ಇರುವುದನ್ನು ಖಂಡಿಸಿ, ಕೂಡಲೇ ಹಣ ಮತ್ತಿತರ ಸಹಾಯಗಳನ್ನು ಸದರಿ ಸಂಸ್ಥೆಗಳಿಗೆ ಒದಗಿಸಿಕೊಡಬೇಕೆಂದರು.

ವೈದ್ಯಕೀಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಇದೊಂದು ತುಂಬಾ ಮಹತ್ವದ ವಿಷಯ. ನಮಗೆ ಉತ್ತಮ ವೈದ್ಯರು ಬೇಕಾದರೆ, ನಾವು ಉನ್ನತ ಮಟ್ಟದ ವೈದ್ಯಕೀಯ ಶಿಕ್ಷಣವನ್ನು ಹೊಂದಿರಬೇಕು. ನಾವು ನಮ್ಮ ರಾಜ್ಯದಲ್ಲಿ ಮೂರು ವೈದ್ಯಕೀಯ ಕಾಲೇಜುಗಳನ್ನು ಹೊಂದಿದ್ದೇವೆ ಮತ್ತು ಒಂದು ಖಾಸಗಿ ವೈದ್ಯಕೀಯ ಕಾಲೇಜಿದೆ. ನಾವು ಎರಡು ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸುತ್ತಿದ್ದೇವೆಂದು ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಸ್ತಾಪಿಸಲಾಗಿದೆ. ಯೋಜನಾ ಪುಸ್ತಕದಲ್ಲಿ, ಪ್ರವೀಣತಾ ಕೋರ್ಸುಗಳ ಬಗ್ಗೆ ಏನೂ ಹೇಳಿರುವುದಿಲ್ಲ. ಸರ್ಕಾರದವರು ಈ ಮೂರನೇ ಯೋಜನಾವಧಿಯಲ್ಲಿ ನಾಲ್ಕು ವೈದ್ಯಕೀಯ ಶಾಲೆಗಳನ್ನು ಪ್ರಾರಂಭಿಸುತ್ತಿದ್ದಾರೆಂಬುದನ್ನು ನಾನು ನಮ್ಮ ಸಚಿವರುಗಳಿಂದ ಹಾಗೂ ಪತ್ರಿಕೆಗಳ ಮೂಲಕ ತಿಳಿದುಕೊಂಡೆ. ಹಾಲಿಯಿರುವ ವೈದ್ಯಕೀಯ ಕಾಲೇಜುಗಳನ್ನು ಅತ್ಯುತ್ತಮ ದರ್ಜೆಗೆ ಸುಧಾರಣೆ ಮಾಡಬೇಕಾಗಿದೆ. ನಾವು ಸ್ನಾತಕೋತ್ತರ ಕೋರ್ಸುಗಳನ್ನು ಕಾಣಲಿಕ್ಕೆ ಸಾಧ್ಯವೇ ಇಲ್ಲ. ಪ್ರಾಸಂಗಿಕವಾಗಿ ನಾನು ತಜ್ಞ ಶಸ್ತ್ರಚಿಕಿತ್ಸೆಯಂಥ ಕೋರ್ಸು ಇಲ್ಲವೇ ಇಲ್ಲವೆಂಬುದನ್ನು ಹೇಳಲೇಬೇಕು. ಮದ್ರಾಸ್ ಆಯವ್ಯಯವಲ್ಲಿ ನಾನು ತಜ್ಞ ಹೃದಯ ಶಸ್ತ್ರಚಿಕಿತ್ಸಾ ವಿಭಾಗವನ್ನು ಪ್ರಾರಂಭಿಸಬೇಕೆಂಬುದನ್ನು ಇನ್ನೊಂದು ದಿವಸ ಓದಿದೆ. ಆದರೆ ಇಲ್ಲಿ ತಜ್ಞ ಹೃದಯ ಶಸ್ತ್ರಚಿಕಿತ್ಸಾ ವಿಭಾಗ ಮಾತ್ರವಲ್ಲ, ಪ್ರಸೂತಿ ಶಾಸ್ತ್ರ, ನೇತ್ರ ವಿಜ್ಞಾನ ಅಥವಾ

ಯಾವುದಾದರೂ ಎಂ.ಎಸ್. ಅಥವಾ ಎಂ.ಡಿ. ಕೋರ್ಸುಗಳಂಥ ಸ್ನಾತಕೋತ್ತರ ಕೋರ್ಸುಗಳೇ ಇರುವುದಿಲ್ಲ. ಈಗಾಗಲೇ ಮಾನ್ಯತೆಯನ್ನು ಪಡೆದಿರುವಂತಹ ಮತ್ತು ಎಲ್ಲಾ ರೀತಿಯಿಂದಲೂ ಅತ್ಯುತ್ತಮವಾದುದೆಂದು ಪರಿಗಣಿಸಲ್ಪಟ್ಟಿರುವಂತಹ ಕಸ್ತೂರಿಬಾ ವೈದ್ಯಕೀಯ ಕಾಲೇಜಿನವರು ಸ್ನಾತಕೋತ್ತರ ಕೋರ್ಸುಗಳನ್ನು ಪ್ರಾರಂಭಿಸಿರುವುದಿಲ್ಲ; ಮತ್ತು ಅವರು ಎಂ.ಎಸ್. ಕೋರ್ಸು ಅನ್ನು ಪ್ರಾರಂಭಿಸಲು ಪ್ರಯತ್ನಿಸುತ್ತಿದ್ದಾರೆ. ಅವರು ಇತರ ಕೆಲವು ಕೋರ್ಸುಗಳನ್ನು ಪ್ರಾರಂಭಿಸುವ ಸ್ಥಿತಿಯಲ್ಲಿದ್ದರೂ ಕೂಡ ಆ ಸಂಬಂಧದಲ್ಲಿ ಮುಂದುವರಿಯುವಂತೆ ಅವರಿಗೆ ನೆರವು ನೀಡಿರುವುದಿಲ್ಲವೆಂಬುದು ನನಗೆ ತಿಳಿದುಬಂದಿದೆ. ನಾವು ಈ ಕೋರ್ಸುಗಳನ್ನು ಪ್ರಾರಂಭಿಸುವ ಸ್ಥಿತಿಯಲ್ಲಿರುವಂಥವರಿಗೆ ಪ್ರೋತ್ಸಾಹ ನೀಡಬೇಕೆಂಬುದು ನನ್ನ ಅಭಿಪ್ರಾಯ.

ಅವರು ಕೇಂದ್ರ ಸರ್ಕಾರದಿಂದ ತತ್ಪೂರ್ತ ಅನುದಾನಗಳನ್ನು ಪಡೆದಿದ್ದಾರೆ. ಅಖಿಲ ಭಾರತ ವೈದ್ಯಕೀಯ ಮಂಡಳಿಯು ಅವುಗಳಿಗೆ ಮಾನ್ಯತೆ ನೀಡಿದೆ. ಇದಕ್ಕೆ ವ್ಯತಿರಿಕ್ತವಾಗಿ ತಾನೂ ಖರ್ಚು ಮಾಡಲ್ಲ, ಬೇರೆಯವರಿಗೂ ಕೊಡೋಲ್ಲ ಎಂಬ ರಾಜ್ಯ ಸರ್ಕಾರದ ಈ ಕೆಟ್ಟ ಪ್ರವೃತ್ತಿ ನನಗೆ ಅರ್ಥವಾಗುತ್ತಿಲ್ಲ.

**ಡಾ॥ ಕೆ.ಕೆ. ಹೆಗ್ಗಡೆ (ಆರೋಗ್ಯ ಸಚಿವರು):** ಸರ್ಕಾರವು ತಾನೂ ಖರ್ಚು ಮಾಡದೆ ಬೇರೆಯವರಿಗೂ ಕೊಡದಿರುವ ಕೆಟ್ಟ ಪ್ರವೃತ್ತಿಯನ್ನು ಅನುಸರಿಸುತ್ತಿದೆ ಎಂದು ನೀವು ಹೇಗೆ ಹೇಳುತ್ತೀರಿ? ನೀವು ಗಾಳಿ ಸುದ್ದಿಯಿಂದ ಇದನ್ನು ಹೇಳುತ್ತಿದ್ದೀರಿ ಅಥವಾ ವಾಸ್ತವ ಸಂಗತಿಗಳಿಂದ ಹೇಳುತ್ತಿದ್ದೀರಾ ಹೇಗೆ?

ಎಲ್.ಎಂ.ಪಿ. ಕೋರ್ಸ್‌ಗಳನ್ನು ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಪ್ರಾರಂಭಿಸುವ ಬಗ್ಗೆ ನೀಡಿದ ಸಚಿವರ ಹೇಳಿಕೆಯನ್ನು ಖಂಡಿಸುತ್ತಾ, ಇಂತಹ ಕ್ರಮವು ವೈದ್ಯಕೀಯ ಶಿಕ್ಷಣದಲ್ಲಿ ಒಂದು ಹಿನ್ನಡೆಯ ಕ್ರಮವಾಗಿರುವುದರಿಂದ ಅದನ್ನು ಪ್ರಾರಂಭಿಸಬಾರದೆಂದು ಕೋರ್ಸ್‌ನ್ನು ಪ್ರಾರಂಭಿಸಬೇಕೆಂದು ಸರಕಾರಕ್ಕೆ ಸಲಹೆ ನೀಡಿದರು.

## ಎಲ್.ಎಂ.ಪಿ. ಕೋರ್ಸ್‌ಗಳ ಪ್ರಾರಂಭಕ್ಕೆ ಖಂಡನೆ

ಎಲ್.ಎಂ.ಪಿ. ಕೋರ್ಸುಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಸರ್ಕಾರವು ಬೆಂಗಳೂರಿನಲ್ಲಿ ಸದರಿ ಕೋರ್ಸ್ ಅನ್ನು ಪ್ರಾರಂಭಿಸಲು ಯಾವಾಗ ವ್ಯವಸ್ಥೆಗಳನ್ನು ಮಾಡುವುದೆಂಬುದು ನನಗೆ ಗೊತ್ತಿಲ್ಲ. ಸದರಿ ಕೋರ್ಸನ್ನು ಬೆಂಗಳೂರಿನಲ್ಲಿ ಪ್ರಾರಂಭಿಸುವುದಾಗಿ ಸರ್ಕಾರವು ಎರಡು ವರ್ಷಗಳ ಹಿಂದೆ

ವಚನ ನೀಡಿತ್ತು. ಅಂತಹ ಒಂದು ಕೋರ್ಸ್ ಅನ್ನು ಮೈಸೂರಿನಲ್ಲಿ ಪ್ರಾರಂಭಿಸಿ ಇಲ್ಲಿಗೆ ಎರಡು ವರ್ಷವಾಗಿದೆ. ಈ ಕೋರ್ಸ್ ಅನ್ನು ಆದಷ್ಟು ಬೇಗ ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ಪ್ರಾರಂಭಿಸುವುದೆಂಬ ಭರವಸೆ ನನಗಿದೆ. ಈ ಬಾರಿ ಈ ಕೋರ್ಸ್‌ಗಾಗಿ 350ಕ್ಕಿಂತ ಹೆಚ್ಚು ಎಲ್.ಎಂ.ಪಿ.ಗಳು ಅರ್ಜಿ ಸಲ್ಲಿಸಿದ್ದು, ಆದರೆ ಕೇವಲ 25 ಜನರನ್ನು ಮಾತ್ರ ಆಯ್ಕೆ ಮಾಡಿರುವುದರಿಂದ ಕಸ್ತೂರಿಬಾ ವೈದ್ಯಕೀಯ ಕಾಲೇಜಿಗೆ ಅನುಮತಿ ನೀಡುವುದು ಕೂಡ ಅಗತ್ಯವಾಗಿದೆ. ಇಲಾಖೆಯಲ್ಲಿ 8 ರಿಂದ 10 ವರ್ಷಗಳಷ್ಟು ಸೇವೆಯನ್ನು ಸಲ್ಲಿಸಿರುವಂತಹ ಅನೇಕ ಜನರಿದ್ದಾರೆ. ಆದರೆ ಅವರಿಗೆ ಪ್ರವೇಶಾವಕಾಶವನ್ನು ನಿರಾಕರಿಸಲಾಗಿದೆ.

**ಡಾ|| ಕೆ.ಕೆ.ಹೆಗ್ಗಡೆ:** ನಾವು ಈ ಕಂಡೆನ್ಸ್ಡ್ ಎಂ.ಬಿ.ಬಿ.ಎಸ್. ಕೋರ್ಸ್‌ಗಾಗಿ ಹೆಚ್ಚಿನ ಸಂಖ್ಯೆಯ ಎಲ್.ಎಂ.ಪಿ.ಗಳನ್ನು ದಾಖಲಿಸಿಕೊಳ್ಳಬೇಕಾದಲ್ಲಿ ಮಾನ್ಯ ಸದಸ್ಯರು ಇವುಗಳನ್ನು ನಿರ್ವಹಿಸುವ ವಿಧಾನವನ್ನು ಸೂಚಿಸುವಿರಾ? 25 ಸದಸ್ಯರನ್ನು ದಾಖಲಿಸಿಕೊಳ್ಳುವುದಕ್ಕೆ ನಾವು ವೈದ್ಯಾಧಿಕಾರಿಗಳ 50 ಸಂಸ್ಥೆಗಳನ್ನು ಕಿತ್ತುಕೊಂಡಿದ್ದೇವೆ. ನಾವು 100 ಅಭ್ಯರ್ಥಿಗಳನ್ನು ದಾಖಲಿಸಿಕೊಳ್ಳಬೇಕಾದಲ್ಲಿ, ಆಗ ನಾವು ವೈದ್ಯಾಧಿಕಾರಿಗಳ 200 ಸಂಸ್ಥೆಗಳನ್ನು ಕಿತ್ತುಕೊಳ್ಳಬೇಕಾಗುತ್ತದೆ. ನಾವು, ಕಂಡೆನ್ಸ್ಡ್ ಎಂ.ಬಿ.ಬಿ.ಎಸ್. ಕೋರ್ಸ್‌ಗೆ ಹಾಲಿಯಿರುವ ಎಲ್.ಎಂ.ಪಿ.ಗಳ ದಾಖಲಾತಿ ಹಾಗೂ ಹಾಲಿಯಿರುವ ಎಲ್.ಎಂ.ಪಿ.ಗಳ ಸಂಖ್ಯೆ ಇವುಗಳ ನಡುವೆ ಸ್ವಲ್ಪಮಟ್ಟಿನ ಅಂತರವನ್ನು ಕಾಯ್ದುಕೊಳ್ಳಬೇಕು.

**ಡಾ|| ಕೆ. ನಾಗಪ್ಪ ಆಳ್ವ:** ಈ ಕೋರ್ಸನ್ನು ಪಡೆದುಕೊಂಡು ಎಂ.ಬಿ.ಬಿ.ಎಸ್. ವೈದ್ಯರಾಗಬೇಕೆಂಬ ತೀವ್ರಾಪೇಕ್ಷೆಯುಳ್ಳಂತಹ ಅನೇಕ ಎಲ್.ಎಂ.ಪಿ. ವೈದ್ಯರುಗಳಿದ್ದಾರೆ. ಅವರು ಕೀಳರಿಮೆಯಿಂದ ನರಳುತ್ತಿದ್ದಾರೆ ಮತ್ತು ಅವರು ತಮ್ಮ ಸೇವಾ ಪರಿಸ್ಥಿತಿಗಳ ಬಗ್ಗೆ ಅತೃಪ್ತಿ ಹೊಂದಿದ್ದಾರೆ ಎಂಬುದನ್ನು ಮಾನ್ಯ ಸಚಿವರು ನೆನಪಿನಲ್ಲಿಟ್ಟುಕೊಳ್ಳಬೇಕೆಂದು ನಾನು ಹೇಳಬಯಸುತ್ತೇನೆ. ನಂತರ ತೃಪ್ತಿಕರವಾಗಿ ಕೆಲಸ ಮಾಡುವಂತೆ ಅವರಿಂದ ನೀವು ಹೇಗೆ ನಿರೀಕ್ಷಿಸುತ್ತೀರಿ? ಸಚಿವರ ಹೇಳಿಕೆಯ ಪ್ರಕಾರ, ಎಲ್.ಎಂ.ಪಿ. ಕೋರ್ಸನ್ನು ಇಲ್ಲಿ ಪ್ರಾರಂಭಿಸಲಾಗುತ್ತದೆ. ಇದೊಂದು ತಾತ್ಕಾಲಿಕ ಕ್ರಮವಾಗಿರುತ್ತದೆಂಬುದನ್ನು ನಾನು ಪತ್ರಿಕೆಗಳಲ್ಲಿ ಓದಿದ್ದೇನೆ. ಎಲ್.ಎಂ.ಪಿ ಕೋರ್ಸನ್ನು ಪ್ರಾರಂಭಿಸುವುದು ಎಲ್ಲಾ ರೀತಿಯಿಂದಲೂ ಒಂದು ಹಿನ್ನಡೆಯ ಕ್ರಮವೆಂದು ನಾನು ಹೇಳುತ್ತೇನೆ. ಸಹಜವಾಗಿ, ಮುಂದಿನ ಐದು ವರ್ಷಗಳ ಅವಧಿಯಲ್ಲಿ ನಮಗೆ ಸುಮಾರು 1,000 ವೈದ್ಯರುಗಳು ಬೇಕಾಗುತ್ತಾರೆ. ಆದರೆ ಎಲ್.ಎಂ.ಪಿ. ಕೋರ್ಸ್‌ಗಳನ್ನು ಪ್ರಾರಂಭಿಸುವುದರಿಂದ ಅದು ಸಾಧ್ಯವಾಗುವುದಿಲ್ಲ.

**ಶ್ರೀ ಟಿ.ಮರಿಯಪ್ಪ:** ಕೆಲವು ಅಖಿಲ ಭಾರತ ಪತ್ರಿಕೆಗಳು ಈ ಪ್ರಯತ್ನವನ್ನು ಸ್ವಾಗತಿಸಿವೆ.

**ಡಾ॥ ಕೆ.ನಾಗಪ್ಪ ಆಳ್ವ:** ಯಾವ ಪತ್ರಿಕೆಗಳು ಇದನ್ನು ಸ್ವಾಗತಿಸಿವೆ ಎಂಬುದು ನನಗೆ ಗೊತ್ತಿಲ್ಲ. ಆದರೆ ಸಾಕಷ್ಟು ಸಂಖ್ಯೆಯ ಪತ್ರಿಕೆಗಳು ಇದನ್ನು ಖಂಡಿಸಿವೆ ಎಂಬುದು ನನಗೆ ಗೊತ್ತಿದೆ. ವೈದ್ಯಕೀಯ ಸಂಘವು ಇದನ್ನು ಖಂಡಿಸಿದೆ. ಮಣಿಪಾಲ್‌ನಲ್ಲಿ ನಡೆದ ಅಖಿಲ ಭಾರತ ವೈದ್ಯಕೀಯ ಸಮಾವೇಶವು ಇದರ ವಿರುದ್ಧ ಗೊತ್ತುವಳಿಯನ್ನು ಅಂಗೀಕರಿಸಿದೆ. ಅನೇಕ ಆಯುರ್ವೇದಿಕ್ ವೈದ್ಯರು ಮತ್ತು ಅನುಕಲಿತ ಪದ್ಧತಿಯ ವೈದ್ಯರು ಹಾಗೂ ಇತರರು ಇದರ ವಿರುದ್ಧ ಪ್ರತಿಭಟಿಸಿದ್ದಾರೆ. ಇಷ್ಟೆಲ್ಲಾ ವಿರೋಧಗಳಿದ್ದರೂ ಸರ್ಕಾರವು ಈ ಕೋರ್ಸ್‌ನ್ನು ಪ್ರಾರಂಭಿಸುವ ಯೋಜನೆಯನ್ನು ಮಾಡಿದೆ. ಇದೊಂದು ಹಿನ್ನೆಡೆಯ ಕ್ರಮವಾಗಿದ್ದು, ಈ ಕೋರ್ಸ್‌ನ್ನು ಪ್ರಾರಂಭಿಸಬಾರದೆಂಬುದು ನನ್ನ ಭಾವನೆ.

**ಶ್ರೀ ಟಿ. ಮರಿಯಪ್ಪ:** ಗ್ರಾಮೀಣ ಪ್ರದೇಶಗಳ ವೈದ್ಯರ ಸ್ಥಿತಿಯೇನು?

**ಡಾ॥ ಕೆ. ನಾಗಪ್ಪ ಆಳ್ವ:** ನೀವು ಅಪರಿಣಿತ ವೈದ್ಯರುಗಳನ್ನು ತಯಾರು ಮಾಡಿ ಗ್ರಾಮೀಣ ಪ್ರದೇಶಗಳಿಗೆ ಅವರನ್ನು ಕಳುಹಿಸಬಯಸಿರುವಿರಾ? ಮತ್ತು ಇತರೆ ಗುಮಾಸ್ತರುಗಳ ರೀತಿಯಲ್ಲಿ ಅವರಿಗೆ ಕೇವಲ 100 ರೂ.ಗಳನ್ನು ನೀಡುವಿರಾ?

**ಡಾ॥ ಕೆ.ಕೆ.ಹೆಗ್ಗಡೆ:** ನೀವು ಕಳೆದ 18–20 ವರ್ಷಗಳಿಂದ ಈ ಪದ್ಧತಿಯನ್ನು ಸಹಿಸಿಕೊಂಡಿರುವಾಗ ಗ್ರಾಮೀಣ ಪ್ರದೇಶಗಳಲ್ಲಿನ ಶೇಕಡ 80ರಷ್ಟು ಜನರ ಹಿತದೃಷ್ಟಿಯಿಂದ ಇನ್ನೊಂದು 10 ವರ್ಷಗಳವರೆಗೆ ನೀವು ಏಕೆ ಸಹಿಸಿಕೊಳ್ಳಬಾರದು?

**ಡಾ॥ ಕೆ. ನಾಗಪ್ಪ ಆಳ್ವ:** ಎಂ.ಬಿ.ಬಿ.ಎಸ್. ಕೋರ್ಸ್ ನಮ್ಮ ಸಮಸ್ಯೆಯನ್ನು ಪರಿಹರಿಸಬಹುದಾದಂತಹ ಏಕೈಕ ಕೋರ್ಸ್ ಆಗಿದೆ ಮತ್ತು ಅವಕ್ಕಾಗಿಯೇ ಎಂ.ಬಿ.ಬಿ.ಎಸ್. ಕೋರ್ಸ್‌ಅನ್ನು ಎಲ್ಲಾ ರಾಜ್ಯಗಳಲ್ಲಿ ಪ್ರಾರಂಭಿಸಲಾಗಿದೆ. ನಾವು ಕನಿಷ್ಠ ಬಾಂಬೆ ಮತ್ತು ಮದ್ರಾಸ್‌ಗಳಂಥ ನಮ್ಮ ನೆರೆಹೊರೆಯ ರಾಜ್ಯಗಳಿಂದಲಾದರೂ ಪಾಠ ಕಲಿಯಬೇಕು. ಬಾಂಬೆ ಮತ್ತು ಮದ್ರಾಸ್ ರಾಜ್ಯಗಳು ಈ ನಿಟ್ಟಿನಲ್ಲಿ ಹೆಚ್ಚು ಪ್ರಗತಿಯನ್ನು ಸಾಧಿಸಿವೆ.

**ಡಾ॥ ಕೆ.ಕೆ. ಹೆಗ್ಗಡೆ:** ಮುಂಬರುವ ದಿನಗಳಲ್ಲಿ ಇತರ ರಾಜ್ಯಗಳು ನಮ್ಮ ರಾಜ್ಯವನ್ನು ಅನುಸರಿಸಲಿವೆ.

ಮಾನಸಿಕ ಆರೋಗ್ಯ ಸಂಸ್ಥೆಯ ಆಡಳಿತದ ಕುರಿತಾಗಿ ಕೇಂದ್ರ ಸರಕಾರದೊಂದಿಗೆ ಇರುವ ಭಿನ್ನಾಭಿಪ್ರಾಯಗಳನ್ನು ಸೂಕ್ತ ರೀತಿಯಲ್ಲಿ ನಿವಾರಿಸಿಕೊಂಡು ರಾಜ್ಯದ ಮತ್ತು ಬಡ ರೋಗಿಗಳ ಹಿತದೃಷ್ಟಿಯಿಂದ ಸದರಿ ಸಂಸ್ಥೆಯನ್ನು ಬೆಂಗಳೂರಿನಲ್ಲಿಯೇ ಉಳಿಸಿಕೊಳ್ಳುವಂತೆ ಸರಕಾರ ಕ್ಷಿಪ್ರ ಕ್ರಮಗಳನ್ನು ಕೈಗೊಳ್ಳಬೇಕೆಂದರು.

ಪಾನ ನಿಷೇಧವನ್ನು ಕಟ್ಟುನಿಟ್ಟಾಗಿ ಜಾರಿಗೆ ತರಲು ಸಾಧ್ಯವಾಗದೇ ಹೋದರೆ ಅದನ್ನು ಹಿಂತೆಗೆದುಕೊಳ್ಳುವುದು ಸೂಕ್ತ ಎಂಬ ಅಭಿಪ್ರಾಯವನ್ನು ಸದನದ ಮುಂದಿಟ್ಟರು.

## ನಿಮ್ಹಾನ್ಸ್‌ನ ಆಡಳಿತವನ್ನು ಸರಿಪಡಿಸಿ ಸಂಸ್ಥೆಯನ್ನು ಬೆಂಗಳೂರಿನಲ್ಲಿಯೇ ಉಳಿಸಿಕೊಳ್ಳಿ. ಪಾನ ನಿಷೇಧದ ಕುರಿತು ಸರ್ಕಾರದ ನಿಲುವು?

**ಡಾ॥ ಕೆ. ನಾಗಪ್ಪ ಆಳ್ವ:** ಆನಂತರ ನಾನು ಅಖಿಲ ಭಾರತ ಮಾನಸಿಕ ಆರೋಗ್ಯ ಸಂಸ್ಥೆಯು ಅತ್ಯಂತ ಜನಪ್ರಿಯವಾಗಿರುವುದರ ಬಗ್ಗೆ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಇದು ಇಡೀ ಏಷ್ಯಾದಲ್ಲೇ ಹೆಸರು ಮತ್ತು ಕೀರ್ತಿಯನ್ನು ಗಳಿಸಿರುವಂತಹ ಏಕಮಾತ್ರ ಆಸ್ಪತ್ರೆಯಾಗಿದೆ. ದುರಾದೃಷ್ಟವಶಾತ್, ಇದರ ಆಡಳಿತ ಮಂಡಳಿಯಲ್ಲಿ ಸ್ವಲ್ಪಮಟ್ಟಿನ ಅಡಚಣೆಗಳಿವೆ. ರಾಜ್ಯ ಸರ್ಕಾರದ ಒಂದು ಮಾನಸಿಕ ಆಸ್ಪತ್ರೆಯಿದೆ ಮತ್ತು ಅಖಿಲ ಭಾರತ ಮಾನಸಿಕ ಆರೋಗ್ಯ ಸಂಸ್ಥೆಯಿದೆ. 1954ರಲ್ಲಿ ಅಖಿಲ ಭಾರತ ಮಾನಸಿಕ ಆರೋಗ್ಯ ಸಂಸ್ಥೆ ಹಾಗೂ ಮಾನಸಿಕ ಆಸ್ಪತ್ರೆಯನ್ನು ಪ್ರಾರಂಭಿಸಲಾಯಿತು ಮತ್ತು ಅವುಗಳನ್ನು ಒಂದು ಸಮಗ್ರ ಘಟಕವಾಗಿ ನಿರ್ವಹಿಸಬೇಕಾಗಿತ್ತು ಹಾಗೂ ಅಖಿಲ ಭಾರತ ಮಾನಸಿಕ ಆರೋಗ್ಯ ಸಂಸ್ಥೆಯ ನಿರ್ದೇಶಕರು ಮಾನಸಿಕ ಆಸ್ಪತ್ರೆಯ ಪದನಿಮಿತ್ತ ಅಧ್ಯಕ್ಷರಾಗಿರಬೇಕಾಗಿತ್ತು. ಕೇಂದ್ರ ಸರ್ಕಾರವು ಇದರ ಮೇಲೆ ಸುಮಾರು 40 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿದೆ. ಇದು 10 ವಿಭಾಗಗಳನ್ನು ಹೊಂದಿದೆ. ನರ ಶಸ್ತ್ರಚಿಕಿತ್ಸಾ ವಿಭಾಗವೂ ಕೂಡ ಇದೆ. 70 ವೈದ್ಯರು ಮತ್ತು ಕೆಲವು ಉನ್ನತ ವಿದ್ಯಾರ್ಹತೆಯುಳ್ಳ ಪ್ರಾಧ್ಯಾಪಕರು ಹಾಗೂ ಸಹಾಯಕ ಪ್ರಾಧ್ಯಾಪಕರುಗಳಿದ್ದಾರೆ. ಒಟ್ಟಾರೆ ಸುಮಾರು 80 ಜನ ವೈದ್ಯರುಗಳು ಸಂಶೋಧನಾ ಕಾರ್ಯ ಮತ್ತು ಸ್ನಾತಕೋತ್ತರ ಅಧ್ಯಯನಗಳನ್ನು ಮಾಡುತ್ತಿದ್ದಾರೆ. 800 ಮಾನಸಿಕ ರೋಗಿಗಳಾಗಿದ್ದಾರೆ.

**ಡಾ॥ ಕೆ.ಕೆ. ಹೆಗ್ಗಡೆ:** ಅವರು ಮಾನಸಿಕ ಸಂಸ್ಥೆಯಲ್ಲಿಲ್ಲ; ಅವರು ಮಾನಸಿಕ ಆಸ್ಪತ್ರೆಯಲ್ಲಿದ್ದಾರೆ.

**ಡಾ॥ ಕೆ. ನಾಗಪ್ಪ ಆಳ್ವ:** ಆಡಳಿತವನ್ನು ಈ ಎಲ್ಲಾ ವರ್ಷಗಳಲ್ಲಿ ಸರಾಗವಾಗಿ ನಡೆಸಿಕೊಂಡು ಹೋಗಲಾಗುತ್ತಿದೆ. ಒಟ್ಟು ಸುಮಾರು 80 ವೈದ್ಯರುಗಳಿದ್ದು, ಅವರ ಪೈಕಿ ನಮ್ಮ ರಾಜ್ಯದಿಂದ ಸುಮಾರು 8ರಿಂದ 10 ವೈದ್ಯರುಗಳು ಮಾತ್ರ ಇದ್ದಾರೆ. ಈಗ ಆಡಳಿತಕ್ಕೆ ಅಡಚಣೆಯುಂಟಾಗಿದೆ. ಆಡಳಿತವನ್ನು ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರದ ನಡುವೆ ವಿಭಜಿಸಲಾಗಿದೆ ಎಂದು ಹೇಳಲಾಗಿದೆ. ಕೇಂದ್ರ ಸರ್ಕಾರವು, ಈ ಸರ್ಕಾರವು ಏಕೀಕೃತ ಘಟಕವಾಗಿ ಆಡಳಿತವನ್ನು ನಡೆಸುವುದಕ್ಕೆ ಸಂಬಂಧಿಸಿದ ತಮ್ಮ ಸಮರ್ಥನೆ ಹಾಗೂ ತಮ್ಮ ಸಲಹೆಯನ್ನು ಒಪ್ಪಿಕೊಳ್ಳದಿದ್ದಲ್ಲಿ ಬೇರೊಂದು ಸ್ಥಳಕ್ಕೆ ಈ ಸಂಸ್ಥೆಯನ್ನು ಸ್ಥಳಾಂತರಿಸಲು ಅವರನ್ನು ಒತ್ತಾಯಿಸಲಾಗುವುದೆಂದು ಅವರು ಆದೇಶವನ್ನು ಕಳುಹಿಸುವುದಕ್ಕೆ ಮುಂಚೆ ಕೂಡ ರಾಜ್ಯ ಸರ್ಕಾರಕ್ಕೆ ಪತ್ರ ಬರೆದಿದೆ. ಈ ಪ್ರಶ್ನೆಯನ್ನು ವೈಯಕ್ತಿಕ ಮಟ್ಟದಲ್ಲಿ ಪರಿಗಣಿಸಬಾರದೆಂದು ನಾನು ನಮ್ಮ ಸರ್ಕಾರಕ್ಕೆ ಮನವಿ ಮಾಡುತ್ತೇನೆ. ಇತ್ತೀಚೆಗೆ ನಾನು ದೆಹಲಿಗೆ ಹೋಗಿದ್ದೆ. ನಾನು ನಮ್ಮ 16 ಜನ ಲೋಕಸಭಾ ಸದಸ್ಯರು (ಎಂ.ಪಿ)ಗಳೊಂದಿಗೆ ಆರೋಗ್ಯ ಸಚಿವರನ್ನು ಭೇಟಿ ಮಾಡಿ ಅವರೊಂದಿಗೆ ಚರ್ಚಿಸಿದೆ. ಅವರು ಈ ಸಂಸ್ಥೆಯನ್ನು ಇಲ್ಲಿಯೇ ಉಳಿಸಲು ತಾನು ತನ್ನ ಕೈಲಾದ ಪ್ರಯತ್ನವನ್ನು ಮಾಡುವುದಾಗಿ ಹೇಳಿದರು. ಆದರೆ ಅವರು ಇದು ರಾಜ್ಯ ಸರ್ಕಾರದ ಪ್ರವೃತ್ತಿಯನ್ನು ಅವಲಂಬಿಸಿದೆ ಎಂದು ಕೂಡ ಹೇಳಿದರು. ನಾನು ಈ ವಿಷಯವನ್ನು ಎಚ್ಚರಿಕೆಯಿಂದ ಪರಿಗಣಿಸುವಂತೆ ಈ ಸರ್ಕಾರಕ್ಕೆ ಮನವಿ ಮಾಡುತ್ತೇನೆ. ನಾನು, ಈ ವಿಷಯವನ್ನು ರಾಜ್ಯದ ಮತ್ತು ಬಡ ರೋಗಿಗಳ ಹಿತದೃಷ್ಟಿಯಿಂದ ಪರಿಗಣಿಸಬೇಕೆಂದು ಬಯಸುತ್ತೇನೆ. ಸಂಸ್ಥೆಯ ನಿರ್ದೇಶಕರು ಎಲ್ಲಿಯವರೆಗೆ ಆಸ್ಪತ್ರೆಯ ಪದನಿಮಿತ್ತ ಅಧೀಕ್ಷಕರಾಗಿ ಮುಂದುವರಿಯುತ್ತಾರೋ ಅಲ್ಲಿಯವರೆಗೆ, ಅವರು ಈ ಆಸ್ಪತ್ರೆಯ ಆಡಳಿತ ನಿಯಂತ್ರಣವನ್ನು ಹೊಂದಿರುತ್ತಾರೆ. ಈಗ ಅದನ್ನು ಪ್ರತ್ಯೇಕಿಸಿದರೆ, ಅವರು ಕೇವಲ ಕೇಂದ್ರ ಸರ್ಕಾರದ ಒಬ್ಬ ನೌಕರರು ಮಾತ್ರವಾಗುತ್ತಾರೆ ಮತ್ತು ರೋಗಿಗಳ ನಿರ್ವಹಣೆಗೆ ಸಂಬಂಧಿಸಿದಂತೆ ಅವರು ಯಾವುದೇ ನಿಯಂತ್ರಣವನ್ನು ಹೊಂದಿರುವುದಿಲ್ಲ.

**ಮಾನ್ಯ ಉಪ ಸಭಾಧ್ಯಕ್ಷರು:** ಮಾನ್ಯ ಸದಸ್ಯರೇ ವೇಳೆ ಆಗ್ತಾಯಿದೆ.

**ಡಾ॥ ಕೆ. ನಾಗಪ್ಪ ಆಳ್ವ:** ನಾನು ಒಂದು ಅಥವಾ ಎರಡು ವಿಷಯಗಳನ್ನು ಮಾತ್ರ ಉಲ್ಲೇಖಿಸುತ್ತೇನೆ. ಆಹಾರ ಪದಾರ್ಥಗಳ ಕಲಬೆರಕೆಯು ಒಂದು ಪಿಡುಗಾಗಿದೆ

ಮತ್ತು ಇದನ್ನು ಜನರ ಆರೋಗ್ಯದ ಹಿತದೃಷ್ಟಿಯಿಂದ ಕೊನೆಗಾಣಿಸಬೇಕಾಗಿದೆ. ಪಾನ ನಿಷೇಧ ನೀತಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಈ ನೀತಿಯು ಕೇವಲ ಸರ್ಕಾರದ ಹೆಸರನ್ನು ಮತ್ತು ಅದಕ್ಕಿಂತ ಮಿತಿಲಾಗಿ ಪೋಲೀಸ್ ಇಲಾಖೆಯ ಹೆಸರನ್ನು ಕೆಡಿಸಿದೆ. ನಾನು ಈ ಬಗ್ಗೆ ಪದೇ ಪದೇ ಹೇಳುತ್ತಲೇ ಇದ್ದೇನೆ. ಒಳ್ಳೆಯ ಕೆಲಸವೇನೆಂದ್ರೆ ಪಾನ ನಿಷೇಧವನ್ನು ತೆಗೆದುಹಾಕುವುದು. ಕಾನೂನನ್ನು ಜಾರಿಗೊಳಿಸಿ ಅದನ್ನು ಯಶಸ್ವಿಯಾಗಿ ಅನುಷ್ಠಾನಕ್ಕೆ ತರುವುದು ಅಸಾಧ್ಯವಾದ ಮಾತು. ಶುದ್ಧ ಮನಸ್ಸಿನಿಂದ ನಾವು ನಮ್ಮ ಜನರ ಬಳಿಗೆ ಹೋಗದೆ ಅವರ ಅಭಿಪ್ರಾಯವನ್ನು ತಿಳಿದುಕೊಳ್ಳದೆ ಇದು ಯಶಸ್ವಿಯಾಗಿದೆ ಎಂದು ಹೇಳಲಿಕ್ಕಾಗುವುದಿಲ್ಲ ಮತ್ತು ಹಾಗೆ ಮಾಡಬೇಕಾದರೆ ಇದರಿಂದ ಪೊಲೀಸರನ್ನು ದೂರವಿಡಬೇಕು.

**ಶ್ರೀ ಜಿ. ವೆಂಕಟೇಗೌಡ:** ಪಾನ ನಿಷೇಧವನ್ನು ತೆಗೆದುಹಾಕಬೇಕೆಂಬುದು ನಿಮ್ಮ ಅಭಿಪ್ರಾಯವೆ?

**ಡಾ॥ ಕೆ. ನಾಗಪ್ಪ ಆಳ್ವ:** ಈ ಪಾನ ನಿಷೇಧವನ್ನು ತೆಗೆದುಹಾಕಬೇಕು ಮತ್ತು ಇದು ಮುಂದುವರಿಯಬೇಕಾದಲ್ಲಿ ಇದರಿಂದ ಪೊಲೀಸರನ್ನು ದೂರವಿಡಬೇಕು ಮತ್ತು ಅದಕ್ಕಾಗಿ ಒಂದು ಪ್ರತ್ಯೇಕ ಇಲಾಖೆಯನ್ನು ರಚಿಸಬೇಕು. ಆರೋಗ್ಯ ಮತ್ತು ನೈರ್ಮಲ್ಯಕ್ಕೆ ಸಂಬಂಧಿಸಿದ ಎಲ್ಲಾ ಪ್ರಗತಿಯೊಂದಿಗೆ, ಸನ್ನದು ಅತ್ಯಂತ ಪ್ರಮುಖವಾದುದು; ರಾಷ್ಟ್ರದ ಸನ್ನದನ್ನು ರೂಪಿಸಬೇಕು. ನಿಷೇಧವು ಜಾರಿಯಾಗುತ್ತದೆ. ಸರ್ಕಾರವು ಪರಿಸ್ಥಿತಿಯನ್ನು ಅತ್ಯಂತ ಗಂಭೀರವಾಗಿ ಗಮನಕ್ಕೆ ತೆಗೆದುಕೊಂಡು ಪರಿಸ್ಥಿತಿಯನ್ನು ಸಮರ್ಪಕವಾಗಿ ನಿಭಾಯಿಸಬೇಕು.

**ಶ್ರೀ ಜಿ. ವೆಂಕಟೇಗೌಡ:** ಇದು ಕಾರ್ಯನೀತಿಯ ಪ್ರಶ್ನೆಯಲ್ಲ.

**ಡಾ॥ ಕೆ. ನಾಗಪ್ಪ ಆಳ್ವ:** ಇದೊಂದು ಪರಿಗಣಿಸಬೇಕಾದಂತಹ ಕಾರ್ಯನೀತಿ. ಇದನ್ನು ಗಂಭೀರವಾಗಿ ತೆಗೆದುಕೊಳ್ಳಬೇಕು ಮತ್ತು ಇದನ್ನು ಯಶಸ್ವಿಯಾಗುವಂತೆ ಸರಿಯಾಗಿ ಮತ್ತು ಸಂಪೂರ್ಣವಾಗಿ ಜಾರಿಗೊಳಿಸಲಿಕ್ಕಾಗದಿದ್ದರೆ, ಇದನ್ನು ತೆಗೆದುಹಾಕುವುದೇ ಉತ್ತಮ.

# ಆಯವ್ಯಯ ಅಂದಾಜು 1961–62

**8ನೇ ಏಪ್ರಿಲ್ 1961**

## ಸಚಿವರ ಅನುಭವದ ಸದ್ಬಳಕೆಯಾಗಲಿ

**ಡಾ॥ ಕೆ. ನಾಗಪ್ಪ ಆಳ್ವ (ಪಾಣೆ–ಮಂಗಳೂರು):** ಅಧ್ಯಕ್ಷರೇ, ಈಗ ಸಭೆಯ ಮುಂದಿರತಕ್ಕ ವೈದ್ಯ ಹಾಗು ಆರೋಗ್ಯ ಇಲಾಖೆಗಳ ಬೇಡಿಕೆಗಳನ್ನು ನಾನು ಸಮರ್ಥಿಸುತ್ತಾ ಕೆಲವು ವಿಷಯಗಳನ್ನು ವಿಮರ್ಶಿಸಿ ಹೇಳಬೇಕೆಂದು ಬಯಸುತ್ತೇನೆ. ನಮ್ಮ ಈಗಿನ ಮುಖ್ಯಮಂತ್ರಿಗಳು ಈ ಹಿಂದೆ ಬೊಂಬಾಯಿನಲ್ಲಿದ್ದಾಗ ಅಲ್ಲಿ ಡೆಪ್ಯುಟಿ ಮಿನಿಸ್ಟರಾಗಿದ್ದುಕೊಂಡು ಈ ಆರೋಗ್ಯ ಮತ್ತು ವೈದ್ಯಕೀಯ ಶಾಖೆಗಳನ್ನು ತಮ್ಮ ಪೋರ್ಟ್‌ಪೋಲಿಯೋವನ್ನಾಗಿಟ್ಟುಕೊಂಡಿದ್ದರು. ಈ ದಿವಸ ನಮ್ಮ ಆರೋಗ್ಯ ಶಾಖೆಯ ಪೋರ್ಟ್‌ಪೋಲಿಯೋವನ್ನಾಗಿಟ್ಟುಕೊಂಡಿರತಕ್ಕ ಡಾ॥ ಹೆಗ್ಡೆಯವರು ಬಹಳ ದಿವಸಗಳಿಂದಲೂ ಡಾಕ್ಟರಿಕೆಯಲ್ಲಿರತಕ್ಕವರಾಗಿದ್ದಾರೆ. ಈ ಇಬ್ಬರ ಶಕ್ತಿ ಅನುಭವಗಳನ್ನೆಲ್ಲ ಈ ದಿವಸ ಸರಿಯಾಗಿ ಉಪಯೋಗಿಸಿದ್ದರೆ ನಮಗೆ ಇನ್ನೂ ಹೆಚ್ಚಿನ ಉಪಕಾರವಾಗುತ್ತಿತ್ತು. ಈ ಸಂಸ್ಥಾನದ ಜನರ ಆರೋಗ್ಯ ಹಾಗೂ ಸಂಪತ್ತು ಬಹಳ ಹೆಚ್ಚಾಗುತ್ತಿತ್ತು.

## ಆರೋಗ್ಯ ಇಲಾಖೆಗೆ ಆಲೋಚನೆ ಮಾಡಿ ಮೊತ್ತ ಹೆಚ್ಚಿಸಿ

ಈ ಬೇಡಿಕೆಗೆ ಹಣ ಒದಗಿಸಿದ್ದು ಬಹಳ ಕಡಿಮೆಯಾಗಿದೆ. ಈ ಮೊತ್ತ ಅಷ್ಟೇನು ದೊಡ್ಡದಲ್ಲ. ನಿಜವಾಗಿಯೂ ಅದು ಇಮ್ಮಡಿಯಾಗಬೇಕಿತ್ತು. ಆರೋಗ್ಯ ಸಂಸ್ಥೆಗಳಿಗೆ ಕೇಂದ್ರ ಸರಕಾರದಿಂದ ದೊರೆಯುವ ಹಣ ಸಹಾಯ ಅನೇಕ ವಿಧದಲ್ಲಿ ಮುಂದುವರೆಯಬೇಕಾಗಿತ್ತು. ಜನಸಂಪತ್ತು ಇರಬೇಕಾದುದು ಅಗತ್ಯ ಎಂದು ಒತ್ತಿ ಒತ್ತಿ ಹೇಳುತ್ತಾರೆ. ಜನ ಸಂಪತ್ತು ಅಷ್ಟೇ ಇದ್ದರೆ ಮಾತ್ರ ಸಾಲದು. ಆರೋಗ್ಯದಿಂದ ಕೂಡಿದ ಜನಸಂಪತ್ತು ನಮಗೆ ಬೇಕಾಗಿದೆ. ಇನ್ನೂ ಸ್ವಲ್ಪ ವಿಚಾರ ಮಾಡಿ ನೋಡಿದರೆ ನಿಜವಾಗಿಯೂ ನಮ್ಮ ಆರೋಗ್ಯ ಮಟ್ಟ ಹೆಚ್ಚಿನ ರೀತಿಯಲ್ಲಿ ಮುಂದುವರೆದಿಲ್ಲ. ದೇಶದಲ್ಲಿ ಜನನ ಹೆಚ್ಚಾಗುತ್ತಿದೆ. ಮರಣ ಕಡಿಮೆಯಾಗುತ್ತಿದೆ ಅಂದರೆ ಆಯುಷ್ಯ ಹೆಚ್ಚಾಗುತ್ತಿದೆ. ನಮ್ಮ ರಾಜ್ಯವಲ್ಲಿ ಶೇಕಡಾ 22ರಷ್ಟು ಜನಸಂಖ್ಯೆ ಜಾಸ್ತಿಯಾಗಿದೆ. ಒಂದು ಕಡೆ ಜನಸಂಖ್ಯೆ ಅಂಕಿಗಳನ್ನು ನೋಡಿದರೆ ಸಂತೋಷವಾಗುತ್ತದೆ. ಆದರೆ ಹುಟ್ಟಿ ಬೆಳೆದ ಮಗುವನ್ನು ಸುಖದಲ್ಲಿ ಬದುಕಿ ಬಾಳುವ ಹಾಗೆ ಮಾಡತಕ್ಕಂಥ ಜವಾಬ್ದಾರಿ ಹೆಚ್ಚಿನ ಮಟ್ಟದಲ್ಲಿ ಸರಕಾರದ ಮೇಲಿದೆ. ಹಿಂದಿನ ವೇದ ಕಾಲ

ಬೇರೆಯಾಗಿತ್ತು. ಈಗಿನ ಕಾಲ ಬೇರೆಯಾಗಿದೆ. ಇದು ಅಣು ಯುಗ. ಚಂದ್ರಲೋಕಕ್ಕೆ ಹೊರಟಿದ್ದಾರೆ. ಎಲ್ಲ ಬಗೆಯಿಂದಲೂ ನಾವು ಈಗಿನ ಕಾಲದಲ್ಲಿ ಮುಂದುವರೆಯುತ್ತಿದ್ದೇವೆ. ಮನಸ್ಸಿನ ಮೇಲೆ ಒತ್ತಡ ಅನೇಕ ವಿಧದಲ್ಲಿ ಬೆಳೆಯುತ್ತಿದೆ. ಮಾನಸಿಕ ರೋಗ ಜಾಸ್ತಿಯಾಗುತ್ತಿದೆ. ದೇಶದಲ್ಲಿ ಇಂದು ಹದಿನೈದು ಲಕ್ಷ ಜನರು ಮಾನಸಿಕ ರೋಗದಿಂದ ನರಳುತ್ತಿದ್ದಾರೆಂದು ರಾಂಚಿಯಲ್ಲಿ ನಡೆದ ಸಭೆಯಲ್ಲಿ ಲೆಕ್ಕ ಹಾಕಿ ಹೇಳಿದ್ದಾರೆ. ಈ ರೋಗ ಅನೇಕ ಮಟ್ಟದಲ್ಲಿರುತ್ತದೆ. ಅನೇಕ ತರಹದ ಸಮಸ್ಯೆಗಳಿಂದ ಮನಸ್ಸಿನ ಮೇಲೆ, ಮೆದುಳಿನ ಮೇಲೆ ಪರಿಣಾಮವಾಗಿ ಮಾನಸಿಕ ರೋಗ ಪ್ರಾರಂಭವಾಗುತ್ತದೆ. ಈ ರೋಗಿಗಳ ಸಂಖ್ಯೆ ಜಾಸ್ತಿಯಾಗುತ್ತಿದೆ. ಈ ವಿಷಯದಲ್ಲಿ ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಒದಗಿಸಿದ ಹಣ ಬಹು ಕಡಿಮೆಯಾಗಿದೆ. ಮೂರನೇ ಯೋಜನೆಯಲ್ಲಿ ಹಣ ಹೆಚ್ಚಿಗೆ ಒದಗಿಸಬೇಕು. ಮುಖ್ಯವಾಗಿ ಬಡವರ ಸಲುವಾಗಿ ಯೋಗ್ಯ ವ್ಯವಸ್ಥೆಯುಳ್ಳ ಆಸ್ಪತ್ರೆಗಳನ್ನು ಒದಗಿಸಿಕೊಡಬೇಕು. ನಮ್ಮ ದೇಶದಲ್ಲಿ ಸಾಮಾನ್ಯ ಡಾಕ್ಟರುಗಳೇ ಹೆಚ್ಚು, ಸ್ಪೆಷಲಿಸ್ಟ್ ಆಗಿದ್ದವರು ಸಿಕ್ಕುವುದಿಲ್ಲ. ಸ್ನಾತಕೋತ್ತರ ಕೋರ್ಸ್‌ಗಳು ಇಲ್ಲವೇ ಇಲ್ಲ. ಆದ್ದರಿಂದ ಈ ವಿಚಾರದಲ್ಲಿ ಜಾಗ್ರತೆ, ಹೆಚ್ಚಿನ ಗಮನ ಕೊಡಬೇಕು. ಏನೇ ಇರಲಿ ನಮ್ಮ ದೇಶದ ಜನತೆಗಾಗಿ, ಅವರ ಏಳಿಗೆಗಾಗಿ, ಅವರ ಶ್ರೇಯಸ್ಸಿಗಾಗಿ ಸರಕಾರ ತನ್ನ ಸಂಪೂರ್ಣ ಶಕ್ತಿಯನ್ನು ಉಪಯೋಗಿಸಬೇಕಾದುದು ಅತ್ಯಗತ್ಯ. ಅದು ನಮ್ಮೆಲ್ಲರ ಕರ್ತವ್ಯ. ಈ ರೀತಿ ಪ್ರಯತ್ನ ಮಾಡಬೇಕು. ಸರಕಾರ ಹಾಗೆ ಮಾಡುತ್ತದೆಂದು ನಾನು ತಿಳಿದುಕೊಳ್ಳುತ್ತೇನೆ. ನಮ್ಮ ಸರಕಾರದಲ್ಲಿ ಅಂಥ ಶಕ್ತಿ, ಯೋಗ್ಯತೆ ಇಲ್ಲವೆಂದು ಹೇಳತಕ್ಕ ಕಾಲ ಬರಬಾರದು ಎಂದು ಹೇಳುತ್ತಿದ್ದೇನೆ. ನಿನ್ನೆಯ ದಿವಸ ಪ್ರಪಂಚ ಆರೋಗ್ಯ ದಿನಾಚರಣೆ ನಡೆಯಿತು. ಇತ್ತೀಚೆಗೆ ಅಪಘಾತ ಮನೆಯಲ್ಲಿ, ಮಾರ್ಗದಲ್ಲಿ, ಆಕಾಶದಲ್ಲಿ ಹೆಚ್ಚಾಗುತ್ತಾ ಇದೆ ಎಂದು ಹೇಳಲಾಯಿತು. ಆದ್ದರಿಂದ ಆಸ್ಪತ್ರೆಯಲ್ಲಿ ಎಲ್ಲ ಸಲಕರಣೆ ಸೌಕರ್ಯ ಇರಬೇಕಾದುದು ಅಗತ್ಯ. ಅಪಘಾತ ಸೇವೆ ಎಂದು ಒಂದು ವ್ಯವಸ್ಥೆ ಮುಖ್ಯ-ಮುಖ್ಯ ಸ್ಥಳಗಳಲ್ಲಿ ಇರಬೇಕು. ಈಗ ಆಸ್ಪತ್ರೆಗಳಲ್ಲಿ ಯಾವುದೇ ಡಿಪಾರ್ಟ್‌ಮೆಂಟಿನಲ್ಲಿ ಆಗಲಿ ಒಂದು ಸರಿಯಾದ ವ್ಯವಸ್ಥೆ ಇರುವುದಿಲ್ಲ. ರಕ್ತ ಕೊಡುವ ಏರ್ಪಾಡು ಇರುವುದಿಲ್ಲ. ಟೌನುಗಳಲ್ಲಿ ಇಂಥ ಪರಿಸ್ಥಿತಿ ಇರುವಾಗ್ಗೆ, ಗ್ರಾಮಾಂತರ ಪ್ರದೇಶಗಳಲ್ಲಿಯಂತೂ ಹೆಚ್ಚಿನ ರೀತಿಯಲ್ಲಿ ಅಸಮಾಧಾನಕಾರಕವಾಗಿದೆ. ಎಕ್ಸರೇ ಅನುಕೂಲವಿರುವುದಿಲ್ಲ. ಎಕ್ಸರೇ ವ್ಯವಸ್ಥೆ ಮತ್ತು ಆಕ್ಸಿಜನ್ ಕೊಡುವ ಅನುಕೂಲವಿರಬೇಕು. ಇಷ್ಟು ಆದಮೇಲೆ ಬ್ಲಡ್ ಬ್ಯಾಂಕ್ ಇರಬೇಕು. ಆದರೆ ಈ ರೀತಿ ಸರಿಯಾದ ಒಂದು ಏರ್ಪಾಡು ಇರುವುದಿಲ್ಲ. ಈ ಸಂದರ್ಭದಲ್ಲಿ ಒಂದು ಮಾತು ಹೇಳಬಯಸುತ್ತೇನೆ. ನಮ್ಮ ರಾಜ್ಯದ ಜನತೆಯ ಏಳಿಗೆಯ ದೃಷ್ಟಿಯಿಂದ

1733-8

ಇದನ್ನು ನೋಡಬೇಕು. ಬೊಂಬಾಯಿ, ಮದ್ರಾಸ್‌ಗಳಲ್ಲಿ ಯಾವ ರೀತಿ ವ್ಯವಸ್ಥೆ ಮಾಡಲಾಗುತ್ತಿದೆ ಎಂಬುದನ್ನು ನೋಡಿ ನಾವು ನಮ್ಮ ರಾಜ್ಯದಲ್ಲಿ ಸರಿಯಾದ ವ್ಯವಸ್ಥೆ ಮಾಡಬೇಕಾದುದು ನಮ್ಮ ಕರ್ತವ್ಯವಾಗಿದೆ.

## ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣ ಹೆಚ್ಚಿಸಿ

ಇದೇ ಸಮಯದಲ್ಲಿ ನಾವು ಮದ್ರಾಸಿನಿಂದ ಕಲಿಯಬೇಕಾದ ಒಂದು ವಿಚಾರವಿದೆ. ಪೋಸ್ಟ್ ಗ್ರಾಜುಯೇಟ್ ಕೋರ್ಸು ಪ್ರತಿಯೊಂದು ವಿಭಾಗದಲ್ಲಿರಬೇಕು. ಕಿವಿ, ಮೂಗು, ಗಂಟಲು (ಇ.ಎನ್.ಟಿ.), ಚರ್ಮ, ಗುಹ್ಯ ರೋಗಗಳು, ಕಣ್ಣು ಹೀಗೆ ಎಲ್ಲ ವಿಭಾಗಗಳಲ್ಲಿಯೂ ಮದ್ರಾಸಿನಲ್ಲಿ ಸ್ನಾತಕೋತ್ತರ ಕೋರ್ಸ್ ಇದೆ. ನಾವು ಜಂಭ ಕೊಚ್ಚಿಕೊಳ್ಳುತ್ತಿದ್ದೇವೆ. ನಾವು ಮಾಡುವ ತಪ್ಪುಗಳನ್ನು ಒಪ್ಪಿಕೊಳ್ಳದೇ ಇರುವುದು ಸರಿಯಲ್ಲ. ತಪ್ಪನ್ನು ಒಪ್ಪಿಕೊಳ್ಳುವುದು ಮನುಷ್ಯ ಧರ್ಮ. ಅಂಥದರಲ್ಲಿ ಸರಕಾರದವರು ಯಾವ ಕೆಲಸವನ್ನು ಮಾಡಿಲ್ಲ. ಅದನ್ನು ತಿಳಿದುಕೊಳ್ಳಬೇಕು.

**ಶ್ರೀ ಕೆ. ಕೆ. ಹೆಗ್ಡೆ :** ತಪ್ಪನ್ನೂ ಒಪ್ಪಿಕೊಳ್ಳಬೇಕು. ಆದರೆ ಜನತೆಗೆ ಆದುದನ್ನೆಲ್ಲ ತಿಳಿಸಬೇಕು.

**ಶ್ರೀ ಕೆ. ನಾಗಪ್ಪ ಆಳ್ವ :** ನಾವು ಎಲ್ಲ ಕಡೆಗೂ ಹೋಗಿದ್ದೇವೆ. ನಮ್ಮ ಆರೋಗ್ಯ ಮಂತ್ರಿಗಳೂ ಕಲ್ಕತ್ತ, ಮದ್ರಾಸ್, ಡೆಲ್ಲಿ, ಬೊಂಬಾಯಿ ಹೀಗೆ ಅನೇಕ ಪಟ್ಟಣಗಳಿಗೆ ಹೋಗಿದ್ದಾರೆ. ಆದರೆ ಅವರು ಯಾವುದನ್ನು ಇಲ್ಲಿ ಪ್ರಾರಂಭ ಮಾಡಿದ್ದಾರೆ? ನಾವು ಇಲ್ಲಿ ನೋಡಿರುವ ಮುಖ್ಯ ಅಂಶಗಳನ್ನು ಮಾನ್ಯ ಮಂತ್ರಿಗಳ ಗಮನಕ್ಕೆ ತರುವುದಕ್ಕಾಗಿ ಮಾತ್ರ ಪ್ರಜಾಸತ್ತಾತ್ಮಕವಾದ ರೀತಿಯಲ್ಲಿ ನನ್ನ ಸೂಚನೆಗಳನ್ನು ಕೊಡುತ್ತಿದ್ದೇನೆ.

ಮದ್ರಾಸಿನಲ್ಲಿ ಗುಹ್ಯ ರೋಗ ಎಂದರೆ ಗುಹ್ಯ ರೋಗಗಳ ವಿಭಾಗವಿದೆ. ಆ ಸಂದರ್ಭದಲ್ಲಿ ಕೆಲವು ವಿಷಯಗಳನ್ನು ಹೇಳುತ್ತಿದ್ದೇನೆ. ಅಂಟು ರೋಗಗಳು ಅದರಲ್ಲಿಯೂ ಗುಹ್ಯರೋಗದಿಂದ ಮನುಷ್ಯರು ನರಳುತ್ತಿದ್ದಾರೆ. ಜನರ ಜೀವನಮಟ್ಟದ ಜೊತೆಗೆ ಆರೋಗ್ಯಮಟ್ಟವೂ ಕೆಳಕ್ಕೆ ಹೋಗುತ್ತಿದೆ. ಇದರಿಂದ ಹೆರಿಗೆ ವಿಭಾಗದಲ್ಲಿ ಎಷ್ಟು ಗಂಟೆಗಳ ಕಾಲ ವ್ಯಯ ಮಾಡಿದಿರಿ? ಎಂದು ಕೇಳುತ್ತೇನೆ. ಇಂಥ ರೋಗಗಳ ಪರಿಣಾಮವಾಗಿ ಇವೊತ್ತು ಕೆಲವರಿಗೆ ಕೆಲಸ ಮಾಡಿ ಸಂಪಾದನೆ ಮಾಡುವ ಮನಸ್ಸಿಲ್ಲ, ಕೆಲವರಿಗೆ ಆರೋಗ್ಯದ ದೆಸೆಯಿಂದ ಕೆಲಸ ಮಾಡಿ ಸಂಪಾದನೆ ಮಾಡುವ ಶಕ್ತಿಯಿಲ್ಲ. ಈ ರೀತಿಯಲ್ಲಿರುವಾಗ ಈ ಸೋಂಕು ರೋಗಗಳು ಮತ್ತು ಅಂಟು ರೋಗಗಳು ಅದರಲ್ಲಿಯೂ ಗುಹ್ಯರೋಗಗಳಿಗೆ ಸರಿಯಾದ ಚಿಕಿತ್ಸೆ ನಮ್ಮ

ಬೌರಿಂಗ್ ಆಸ್ಪತ್ರೆಯಲ್ಲಿಯೂ ಸಹ ಇಲ್ಲ. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಒಂದು ರೀತಿ ಇದೆ. ಮದ್ರಾಸಿನಲ್ಲಿ ಯಾವ ರೀತಿ ಗುಹ್ಯ ರೋಗ ನಡೆಯುತ್ತಿದೆ ಎಂಬುದನ್ನು ನೋಡಬೇಕು. ಇದಕ್ಕೇ ಪ್ರತ್ಯೇಕವಾದ ಆಸ್ಪತ್ರೆಯಿದೆ. ಗುಹ್ಯ ರೋಗದಿಂದ ನರಳುವವರಿಗೆ ಅನುಕೂಲವಾಗುವ ರೀತಿಯಲ್ಲಿ, ಅವರಿಗೆ ಬೇಕಾದ ರೀತಿಯಲ್ಲಿ ಸಲಹೆ ಕೊಟ್ಟು, ವಿದ್ಯೆ ಕೊಟ್ಟು, ಅವರ ರೋಗವನ್ನು ಗುಣಪಡಿಸುವುದಕ್ಕೆ ಬೇಕಾದ ಏರ್ಪಾಡು ಅಲ್ಲಿದೆ. ಇದಲ್ಲದೆ ಅಲ್ಲಿ ರಕ್ತನಿಧಿ ಇದೆ. ನನ್ನ ಸಹಪಾಟಿಗಳಾಗಿದ್ದವರೊಬ್ಬರು ಅಲ್ಲಿ ರಕ್ತ ನಿಧಿ ನಿರ್ದೇಶಕರಾಗಿದ್ದಾರೆ. ನಮ್ಮ ಸಹಪಾಠಿಗಳೊಬ್ಬರು ಈಗ ಹೈದರಾಬಾದಿನಲ್ಲಿ ಉಸ್ಮಾನಿಯಾ ಆಸ್ಪತ್ರೆಯಲ್ಲಿ ರಕ್ತ ನಿಧಿ ನಿರ್ದೇಶಕರಾಗಿದ್ದಾರೆ. ಈ ವಿಷಯವನ್ನು ನಮ್ಮಲ್ಲಿ ಆಲೋಚನೆ ಮಾಡಬೇಕು.

(ಮಾನ್ಯ ಸಭಾಧ್ಯಕ್ಷರು ಪೀಠಾಸೀನರಾಗಿದ್ದಾರೆ)

**ಶ್ರೀ ಸಿ.ಎಂ.ಅರುಮುಗಂ:** ಎಲ್ಲಾ ಕಡೆಯಲ್ಲೂ ನಿಮಗೆ ಸ್ನೇಹಿತರಿದ್ದಾರೆ. ಇಲ್ಲಿ ಕೂಡ ಆರೋಗ್ಯ ಸಚಿವರು ನಿಮ್ಮ ಸ್ನೆಹಿತರು.

## ಗ್ರಾಮೀಣ ಆರೋಗ್ಯ ಸೇವೆಯು ನೆರೆರಾಜ್ಯಗಳ ಮಾದರಿಯಾಗಿರಲಿ

**ಶ್ರೀ ಕೆ. ನಾಗಪ್ಪ ಆಳ್ವ :** ಕಲ್ಕತ್ತದಲ್ಲಿ ಗ್ರಾಮೀಣ ವೈದ್ಯಕೀಯ ಸೇವೆಗಳು ಬಹಳ ಚೆನ್ನಾಗಿದೆ. ಅವರು ಈ ಸಮಸ್ಯೆಯನ್ನು ಯಾವ ರೀತಿಯಲ್ಲಿ ಪರಿಹರಿಸಿದ್ದಾರೆ ಎನ್ನುವುದನ್ನು ಮನಸ್ಸಿದ್ದರೆ ಆಲೋಚನೆ ಮಾಡಿ. ಇದಕ್ಕೆ ಒಂದು ಸರಿಯಾದ ಯೋಜನೆಯನ್ನು ಮಾಡಿದರೆ, ಅದರಲ್ಲಿಯೂ ಡಾಕ್ಟರ್ ಆದವರಿಗೆ, ಈ ಉದ್ಯೋಗಕ್ಕೆ ಸರಿಯಾದ ಗೌರವವನ್ನು ಕೊಟ್ಟು ನಡೆಯುವುದಾದರೆ, ಅವರಿಗೆ ಮನ್ನಣೆ ಕೊಡುವುದಾದರೆ, ಎಷ್ಟೋ ವಿಧದಲ್ಲಿ ಕೆಲಸ ಒಳ್ಳೆಯದಾಗುತ್ತದೆ. ಬಂಗಾಳದಲ್ಲಿ ವಿಶೇಷ ಗ್ರಾಮೀಣ ಭತ್ಯೆ ಎಂದು 200 ರೂಪಾಯಿಗಳನ್ನು ಕೊಟ್ಟು; ಅವರಿಗೆ ಮನೆ ಮತ್ತು ಇತರ ಅನುಕೂಲಗಳನ್ನು ಕೊಟ್ಟು ಗ್ರಾಮಾಂತರ ಪ್ರದೇಶಗಳ ಆಸ್ಪತ್ರೆಗೆ ವೈದ್ಯರನ್ನು ಕಳಿಸುತ್ತಾರೆ. ಅವರಿಗೆ ಯಾವ ರೀತಿಯ ಅನುಕೂಲಗಳನ್ನೂ ಕೊಡದೆ ಗ್ರಾಮಾಂತರಗಳಲ್ಲಿರುವ ಆಸ್ಪತ್ರೆಗಳಿಗೆ ಹಾಕುವುದರಿಂದ ಪ್ರಯೋಜನವಿಲ್ಲ. ಅವರಿಗೆ ಬೇಕಾದ ಅನುಕೂಲ ಸವಲತ್ತುಗಳನ್ನು ಕೊಡಬೇಕು ಮತ್ತು ಗ್ರಾಮೀಣ ಭತ್ಯೆ ಕೊಟ್ಟು, ಅವರ ಮನಸ್ಸನ್ನು ಆಕರ್ಷಿಸಿ ಅವರಿಗೆ ಸುಖಮಯ ಜೀವನ ಮಾಡುವುದಕ್ಕೆ ಅವಕಾಶ ಮಾಡಿಕೊಡಬೇಕು. ಇದೊಂದನ್ನು ನಮ್ಮ ಸರಕಾರದವರು ಮಾಡಿಲ್ಲ. ಆದುದರಿಂದ ಗ್ರಾಮೀಣ ಭತ್ಯೆ ಕೊಡಬೇಕು.

## ಔಷಧಿಗಳ ಬ್ಯಾಂಕ್ ಪ್ರಾರಂಭಿಸಿ

ಇದೇ ಸಂದರ್ಭದಲ್ಲಿ ಮತ್ತೊಂದು ಮಾತು. ಕೇರಳ ರಾಜ್ಯದಲ್ಲಿ ಒಂದು ಔಷಧ ನಿಧಿ ಇದೆ. ಕೇರಳದಲ್ಲಿ ಸರ್ಕಾರದ ಮಾರ್ಗದರ್ಶನದಲ್ಲಿ ಹಾಗೂ ರೆಡ್‌ಕ್ರಾಸ್ ಸೊಸೈಟಿಯ ಆಶ್ರಯದಲ್ಲಿ ಕಾರ್ಯ ನಿರ್ವಹಿಸುತ್ತಿರುವಂತಹ ಒಂದು ಔಷಧ ನಿಧಿ ಇದೆ. ಇಲ್ಲಿ ಹಣವಂತರಿಂದ ಹಣ ಸಹಾಯವನ್ನು ಪಡೆದು ಔಷಧದ ರೂಪದಲ್ಲಿ ಒಂದು ಔಷಧ ನಿಧಿ ಮಾಡಿದ್ದಾರೆ. ಜೀವವನ್ನು ಉಳಿಸುವುದಕ್ಕೆ ಕಷ್ಟಕಾಲದಲ್ಲಿ. ಡಾಕ್ಟರಿಂದ ಸರ್ಟಿಫಿಕೇಟ್ ಪಡೆದರೆ, ಅಲ್ಲಿಂದ ಧರ್ಮಾರ್ಥವಾಗಿ ಔಷಧಿಯನ್ನು ಕೊಡುತ್ತಾರೆ. ಈ ರೀತಿ ಅಲ್ಲಿ ಒಂದು ವ್ಯವಸ್ಥೆ ಇದೆ. ನಮ್ಮಲ್ಲಿ ನೋಡಿದರೆ ಹಣ ಕೊಟ್ಟವರಿಗೆ ಉಂಟು, ಹಣ ಕೊಡದವರಿಗೆ ಇಲ್ಲ ಎಂದಾಗಿದೆ. ಆದುದರಿಂದ ಯಾವ ಯಾವ ಸಂಸ್ಥಾನಗಳಲ್ಲಿ ಏನೇನು ಒಳ್ಳೆಯ ಯೋಜನೆಗಳಿವೆಯೋ ಅದನ್ನು ತಿಳಿದುಕೊಂಡು ಅದರಂತೆ ನಡೆಯುವುದು ಬಹಳ ಅಗತ್ಯ.

**ಅಧ್ಯಕ್ಷರು :** ಮಾನ್ಯ ಸದಸ್ಯರ ಕಾಲಾವಕಾಶ ಮುಗಿಯಿತು.

## ಆರೋಗ್ಯ ಸೂತ್ರಗಳ ಅನುಕರಣೆ

**ಶ್ರೀ ಕೆ. ನಾಗಪ್ಪ ಆಳ್ವ :** ನಾನು ಕೆಲವು ವಿಚಾರಗಳನ್ನು ಸಭೆಯ ಮುಂದೆ ಇಡಬೇಕಾಗಿದೆ ಅನೇಕ ಮಿತ್ರರು ಅನೇಕ ವಿಚಾರಗಳನ್ನು ವಿವರವಾಗಿ ಹೇಳಬೇಕೆಂದು ಕೇಳಿಕೊಂಡಿದ್ದಾರೆ. ಆದುದರಿಂದ ಇನ್ನು ಅರ್ಧ ಘಂಟೆಯಾದರೂ ಮಾತನಾಡಲು ಅವಕಾಶ ಕೊಡಬೇಕು.

**ಅಧ್ಯಕ್ಷರು :** ಬೇರೆಯವರಿಗೆಲ್ಲಾ 15 ನಿಮಿಷ ಮಾತ್ರ ಅವಕಾಶ ಕೊಟ್ಟಿದ್ದೇನೆ. ಆದುದರಿಂದ ಹೆಚ್ಚು ಕಾಲ ಕೊಡಲು ಕಷ್ಟವಾಗುತ್ತದೆ.

**ಶ್ರೀ ಕೆ. ನಾಗಪ್ಪ ಆಳ್ವ :** ಮಾತನಾಡುವವರ ಪಟ್ಟಿಯಲ್ಲಿ ಹೆಸರು ಕೊಟ್ಟಿರುವವರಲ್ಲಿ ಕೆಲವರು ನಾನು ವಿವರವಾಗಿ ಮಾತನಾಡಬೇಕೆಂದು, ಅಗತ್ಯವಾದರೆ ನನ್ನ ಪರವಾಗಿ ಅವರ ಹೆಸರನ್ನು ಹಿಂದಕ್ಕೆ ತೆಗೆದುಕೊಳ್ಳುವುದಕ್ಕೆ ತಯಾರಿದ್ದೇವೆಂದೂ ಹೇಳಿದ್ದಾರೆ.

**ಅಧ್ಯಕ್ಷರು :** ಅವರೆಲ್ಲ ಈಗಾಗಲೇ ಮಾತಾಡಿದ್ದಾರೆ. ತಾವು ದಯವಿಟ್ಟು ಹನ್ನೊಂದೂವರೆ ಗಂಟೆಯ ವೇಳೆಗೆ ಭಾಷಣ ಮುಗಿಸಿ.

## ಜನಾರೋಗ್ಯ ಸೌಲಭ್ಯಗಳ ಪ್ರಚಾರ ಅಗತ್ಯ

**ಶ್ರೀ ಕೆ. ನಾಗಪ್ಪ ಆಳ್ವ :** ಜನರ ಆರೋಗ್ಯ ಉಳಿಯಬೇಕಾದರೆ, ಅವರು ಆರೋಗ್ಯ ಸೂತ್ರಗಳನ್ನು ತಿಳಿದುಕೊಳ್ಳಬೇಕು. ಇದಕ್ಕಾಗಿ ಆರೋಗ್ಯ ಶಿಕ್ಷಣ ಎಂದು ಇದೆ. ಜನರಿಗೆ ಮನದಟ್ಟಾಗುವಂತೆ ಅದರ ಪ್ರಚಾರ ನಡೆಯಬೇಕು. ಇಷ್ಟರವರೆಗೂ ಸರಿಯಾಗಿ ನಡೆಯುತ್ತಿಲ್ಲ. ಅದರಲ್ಲಿ ನಮ್ಮ ವಾರ್ತಾ ಇಲಾಖೆ ಸಹ ಸ್ವಲ್ಪ ಗಮನ ಕೊಡಬೇಕು. ಮನುಷ್ಯನ ಆರೋಗ್ಯ ಸಂಪತ್ತು ಹೆಚ್ಚಾಗಬೇಕಾದರೆ, ಅವನಿಗೆ ರೋಗ-ರುಜಿನಗಳು ಬರದಂತೆ ತಡೆಗಟ್ಟುವುದು, ಚಿಕಿತ್ಸೆಗಿಂತ ನಿರೋಧ ಲೇಸು, ಮುಖ್ಯ ಖಾಯಿಲೆ ಬಂದರೆ ಸರಿಯಾದ ಔಷಧಿ ಕೊಟ್ಟು ಅದನ್ನು ಗುಣಪಡಿಸುವುದು ಮುಖ್ಯ. ಇದಕ್ಕಿಂತ ಮೇಲಾಗಿ ಜನರ ಆರೋಗ್ಯ ಮಟ್ಟವು ಮೇಲೇರುವಂತೆ, ಮಾಡಬೇಕಾದುದು ನಮ್ಮ ಕರ್ತವ್ಯವಾಗಿರುತ್ತದೆ. ಮನುಷ್ಯನ ಆರೋಗ್ಯಕ್ಕೆ ಒಳ್ಳೆಯ ಆಹಾರ ಬೇಕಾಗಿದೆ. ಕುಡಿಯುವುದಕ್ಕೆ ನೀರು, ಸ್ನಾನಕ್ಕೆ ನೀರು, ಜೀವನ ಎಲ್ಲ ಅವಶ್ಯಕತೆಗೆ ಬೇಕಾಗುವ ಶುದ್ಧ ನೀರು ಅಗತ್ಯ. ಅನೇಕ ತರಹ ಅಂಟುರೋಗಗಳು ಬರಲಿಕ್ಕೆ ಕಾರಣ ಸರಿಯಾದ ಚರಂಡಿ ವ್ಯವಸ್ಥೆ ಇಲ್ಲದಿರುವುದು. ಸರಿಯಾದ ನೀರು ಸುರಕ್ಷಿತ. ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆ ಇಲ್ಲದಿದ್ದರ ನಾವು ಏನು ಮಾಡಿದರೂ ಪ್ರಯೋಜನವಿಲ್ಲ. ಅಂಟು ರೋಗಗಳು ಹೆಚ್ಚುತ್ತವೆ. ಆಮೇಲೆ ಒಳ್ಳೆಯ ಗಾಳಿಯ ಅನುಕೂಲವಿರುವ ಮನೆಯು ಬೇಕು. ಮನೆಯ ಸುತ್ತಮುತ್ತಲೂ ನೈರ್ಮಲ್ಯದಿಂದ ಕೂಡಿರಬೇಕು. ಇತರ ಅನುಕೂಲತೆಗಳೂ ಇರಬೇಕು. ಮೊನ್ನೆ ತಾನೆ ಒಬ್ಬರು ಮಂತ್ರಿವರ್ಯರು ಮಾತನಾಡುವಾಗ ಮೂರನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದೊಳಗೆ ಎಲ್ಲ ಪಟ್ಟಣಗಳಲ್ಲಿಯೂ ನೀರಿನ ಸೌಕರ್ಯ ಸಿಕ್ಕುತ್ತದೆಯೆಂದು ಹೇಳುತ್ತಾರೆ. ಆದರೆ ಅದು ಸಿಕ್ಕುವುದಕ್ಕೆ ಸಾಧ್ಯವಿಲ್ಲ. ಅಂತಹ ಯೋಜನೆ ಒಂದೂ ಇಲ್ಲ. ಇದಕ್ಕೆ ಒಂದೇ ಒಂದು ಉದಾಹರಣೆಯನ್ನು ಕೊಡುತ್ತೇನೆ. ಬೆಂಗಳೂರು ಬೆಳೆಯುತ್ತಿದೆ. ಅದು ಯಾವ ರೀತಿಯಲ್ಲಿ ಬೆಳೆಯುತ್ತಿದೆ ಎಂದರೆ ಅಗಲದಲ್ಲಿ, ವಿಸ್ತಾರದಲ್ಲಿ ಬೆಳೆಯುತ್ತಿದೆ. ಮೊನ್ನೆ ತಾನೇ ಮುಖ್ಯಮಂತ್ರಿಗಳು, ಬೆಂಗಳೂರು ನಗರ ಅಗಲದಲ್ಲಿ ಬೆಳೆಯುವಂಥಾದ್ದು ಸರಿಯಲ್ಲ, ಮೇಲೆ ಮೇಲೆ ಬೆಳೆಯಬೇಕು, ಈ ಪಟ್ಟಣದ ಊರ್ಧ್ವಾಮುಖ ಬೆಳವಣಿಗೆ ಆಗಬೇಕು ಎಂದು ಹೇಳಿದರು.

## ಕುಡಿಯುವ ನೀರಿನ ಸಮರ್ಪಕ ವ್ಯವಸ್ಥೆಯಾಗಿರಲಿ

ನಮ್ಮಲ್ಲಿ ಯೋಜನೆ ಇದೆ. ಎಷ್ಟುಮಟ್ಟಿನ ಕೆಲಸ ಕಾರ್ಯಗಳು ಈ ಯೋಜನೆಯಿಂದ ನಡೆಯುತ್ತಿದೆ ಎನ್ನುವುದನ್ನು ನೋಡಿದರೆ, ಈ ಪಟ್ಟಣದಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಇನ್ನೂ ಹಾಗೇ ಇದೆ. ಕುಡಿಯುವ ನೀರನ್ನು ತರುವುದಕ್ಕಾಗಿ ಯಾವುದಾದರೂ ಒಂದು ಯೋಜನೆ ಸರಕಾರಕ್ಕಿರಬೇಕು. ಇನ್ನು ಕಾರ್ಪೋರೇಷನ್ನಿನವರು, ಸ್ಟೇಟ್ ಗವರ್ನ್ಮೆಂಟಿನವರು, ಸೆಂಟ್ರಲ್ ಗವರ್ನ್ಮೆಂಟಿನವರೂ ಕೂಡಿ ಸರಿಯಾದ ಯೋಜನೆ ಮಾಡಿ ಅದನ್ನು ಸರಿಯಾದ ರೀತಿಯಲ್ಲಿ ಆದಷ್ಟು ಬೇಗ ಬರುವಂತೆ ಪ್ರಯತ್ನ ಮಾಡಿದರೆ ಸಾಧ್ಯ. ನೀರು ಕೆಲವು ಕಡೆಯಲ್ಲಿ ಕುಡಿಯಲಿಕ್ಕೆ ನಲ್ಲಿಯಲ್ಲಿ ಸಿಕ್ಕದೆ ಹೋದದು ವಿಷಾದದ ಸಂಗತಿ. ಅನೇಕ ಜನರು ನೀರಿಗಾಗಿ ತೊಂದರೆಪಡುತ್ತಿರುವ ಸ್ಥಿತಿ ಇದೆ. ಕೆಲವು ಕಡೆ ನಲ್ಲಿಯಲ್ಲಿ ದಿವಸಕ್ಕೆ ಒಂದು ಘಂಟೆಯ ಕಾಲವೂ ನೀರು ಸರಿಯಾಗಿ ಬರುತ್ತಿಲ್ಲ. ಕೆಲವು ಕಡೆ ತೀರ್ಥದ ರೂಪದಲ್ಲಿ ಬರುತ್ತಿದೆ. ಮೊನ್ನೆ, ಜನ ನೀರಿಗಾಗಿ ಅನುಭವಿಸಿದ ಕಷ್ಟ ಹೇಳತೀರದು. ಜನಗಳಲ್ಲಿ ಅದರಲ್ಲೂ ಹೆಂಗಸರಲ್ಲಿ ಕಣ್ಣೀರು ತರುವಂತಹ ಪರಿಸ್ಥಿತಿ ಬಂದಿತು. ಇದನ್ನು ನಾನು ಹೆಚ್ಚಾಗಿ ಹೇಳುವುದಿಲ್ಲ. ಇದಕ್ಕೆ ಬೇಕಾದ ಒಂದು ಯೋಜನೆಯನ್ನು ಮಾಡಬೇಕು. ಈಚೆಗೆ ಒಂದು ಸೆಮಿನಾರ್ ಮಾಡಿ 10 ಕೋಟಿಯ ಒಂದು ಯೋಜನೆ ಇದಕ್ಕಾಗಿ ಮಾಡಿದರೆ ಸಾಧ್ಯ, ಇಲ್ಲದಿದ್ದರೆ ಇಲ್ಲ ಎಂದು, ಅಲ್ಲಿನ ಮಾನ್ಯ ಸದಸ್ಯರು ಹೇಳಿದುದನ್ನು, ಇಲ್ಲಿ ಮಂತ್ರಿಗಳೂ ಎಲ್ಲರೂ ಕೂಡಿ ಯೋಜನೆ ಮಾಡಿ ಯಾವುದು ಆಗುತ್ತದೋ ಅದನ್ನು ಬೇಗನೆ ಮಾಡಬೇಕು. ಎಂದು ನಾನು ಇಲ್ಲಿ ಬಹಳ ದುಃಖದಿಂದ ಹೇಳಬೇಕಾಗಿದೆ.

ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಸರಕಾರದವರು ಒಳ ಚರಂಡಿ ವ್ಯವಸ್ಥೆಗಾಗಿ 10–12 ಕೋಟಿಯಷ್ಟು ಒಂದು ಯೋಜನೆ ಆಗಬೇಕೆಂದು ಹಣ ಒದಗಿಸಿದ್ದರೂ ಅದು ಉಪಯೋಗವಾಗಲಿಲ್ಲ. ಹೀಗೆ ಸರಿಯಾದ ಸೀಮೆಗಳಿಲ್ಲದೆ, ಬೇರೆ ಬೇರೆ ಇಲಾಖೆಗಳಲ್ಲಿನ ಎಲ್ಲಾ ಕ್ಷೇತ್ರಗಳಲ್ಲಿಯೂ ಈಗಲೂ ಹಣ ಲ್ಯಾಪ್ಸ್ ಆಗುತ್ತಿದೆ. ಕೇಂದ್ರದಿಂದ ಬರುವ ಹಣವೂ ಕೆಲವು ಬರುವುದಿಲ್ಲ. ಆದುದರಿಂದ ನಾನು ಬಹಳ ವಿನಯಪೂರ್ವಕವಾಗಿ ಕೇಳಿಕೊಳ್ಳುವುದು, ನೀರಿನ ಅನುಕೂಲಕ್ಕಾಗಿ ಮತ್ತು ಒಳಚರಂಡಿಯ ವ್ಯವಸ್ಥೆಯ ಕೆಲಸಗಳು ಬಹುತ್ವರಿತದಿಂದ ಆಗಬೇಕು. ಇಲ್ಲಿ ಜನರಿಗೆ ಶುದ್ಧವಾದ ನೀರನ್ನು ಕೊಡುವುದಕ್ಕೆ ಆಗಬೇಕಾದ ಕೆಲಸಗಳನ್ನು ಆದಷ್ಟು ಬೇಗನೆ ಮಾಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

## ಶುದ್ಧ ಪೌಷ್ಟಿಕ ಆಹಾರ ದೊರಕಿಸಿ ಕೊಡಿ

ಇದೇ ಸಂದರ್ಭದಲ್ಲಿ ಆಹಾರ ಪದಾರ್ಥಗಳ ಕಲಬೆರಕೆ ಎನ್ನುವ ವಿಚಾರದಲ್ಲಿ ಹೇಳಬೇಕಾಗಿದೆ. ಶುದ್ಧವಾದ ಆಹಾರ ಮನುಷ್ಯನಿಗೆ ಅಗತ್ಯ. ಪುಷ್ಟಿಕರವಾದ ಆಹಾರ ಅಗತ್ಯ. ನಿನ್ನೆ ದಿವಸ ಪೇಪರಿನಲ್ಲಿ ನಾನು ಒಂದು ವಿಚಾರ ಓದಿದೆ. ಎರಡು ವರ್ಷಕ್ಕೆ ಮೊದಲು ಮೈಸೂರಿನಲ್ಲಿರುವ ಆಹಾರ ಸಂಶೋಧನಾ ಸಂಸ್ಥೆಯವರು ಒಂದು ರೀತಿಯ ಪುಷ್ಟಿಯಾದ ಆಹಾರ ಪದಾರ್ಥವನ್ನು ಮಾಡಿದ್ದರು. ಆ ಸ್ಕೀಮನ್ನು ಮಾಡಿ ಅವರು ನಮ್ಮ ಸರಕಾರಕ್ಕೆ ಕಳುಹಿಸಿಕೊಟ್ಟರೂ ಅದಕ್ಕೆ ಆಗ ಮನ್ನಣೆ ಕೊಡಲಿಲ್ಲ. ಮದರಾಸಿನ ಸರಕಾರದವರು ಅದನ್ನೇ ಇವೊತ್ತು ತೆಗೆದುಕೊಂಡು ಮನ್ನಣೆ ಕೊಟ್ಟಿದ್ದಾರೆ ಮತ್ತು ಮದರಾಸು ಪ್ರಾಂತದಲ್ಲಿರುವ ಸ್ಕೂಲಿನ ಮಕ್ಕಳಿಗೆ ಮತ್ತು ಗರ್ಭಿಣಿ ಸ್ತ್ರೀಯರಿಗೆ ಬೇಕಾದ ಪುಷ್ಟಿಕರವಾದ ಆಹಾರ ಪದಾರ್ಥವನ್ನು ಹಂಚಲು ಏರ್ಪಾಡು ಮಾಡಿದ್ದಾರೆ. ನಿನ್ನೆಯ ಪತ್ರಿಕೆಯಲ್ಲಿ ಬೇರೊಂದು ಆಹಾರದ ವಸ್ತುವನ್ನು ಮಕ್ಕಳಿಗೆ ಬೇಕಾಗುವಂತಹದನ್ನು ಈ ಇನ್‌ಸ್ಟಿಟ್ಯೂಟಿನವರು ತಯಾರು ಮಾಡಿದ್ದಾರೆಂದು ಹೇಳಿದ್ದಾರೆ. ಈಗಲಾದರೂ ಸರಕಾರ ಇದಕ್ಕೆ ಗಮನ ಕೊಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

ಇದಲ್ಲದೆ ಹಾಲಿನ ಪುಡಿ ಬಗ್ಗೆ ಒಂದೇ ಮಾತು ಹೇಳಬೇಕಾಗಿದೆ. ಅನೇಕ ಸಂಸ್ಥೆಗಳು ಒಂದಲ್ಲ ಒಂದು ರೀತಿಯಲ್ಲಿ ಈ ಹಾಲಿನ ಪುಡಿಯನ್ನು ತೆಗೆದುಕೊಳ್ಳುತ್ತಿದ್ದಾರೆ. ಇದು ಯಾವ ರೀತಿಯಲ್ಲಿ ತೆಗೆದುಕೊಳ್ಳುತ್ತಿದ್ದಾರೆ ಎನ್ನುವುದನ್ನು ನೋಡಿದರೆ ಇದರಲ್ಲಿ ಶೇಕಡ ಐವತ್ತರಷ್ಟು ಕಾಳಸಂತೆಗಾಗಿ ಹೊರಗೆ ಹೋಗುತ್ತಿದೆ. ನಾನಾ ತರಹದ ಮಿಶ್ರಣಕ್ಕಾಗಿ ಹೋಗುತ್ತಿದೆ. ಇದನ್ನು ಕೊಡುವಾಗ ಸರಿಯಾಗಿ ಇದನ್ನು ಉಪಯೋಗಮಾಡುತ್ತಿದ್ದಾರೆಯೇ ಇಲ್ಲವೇ ಎನ್ನುವುದನ್ನು ತನಿಖೆ ಮಾಡಿ ಅದಷ್ಟು ಗಮನ ಕೊಡಬೇಕು. ಇನ್ನು ಕಲಬೆರಕೆ ವಿಚಾರ ಹೆಚ್ಚಾಗಿ ಹೇಳುವುದಿಲ್ಲ. ಸರಿಯಾದ ಆಹಾರ ಸಿಗುತ್ತಿಲ್ಲ. ಶುದ್ಧವಾದ ಹಾಲು ಸಿಗುತ್ತಿಲ್ಲ. ತುಪ್ಪ ಸಿಗುತ್ತಿಲ್ಲ. ಇವನ್ನೆಲ್ಲ ಸರಿಯಾಗಿ ಮಾಡಲು ಒಂದು ಕಾನೂನನ್ನು ಪ್ರೋಹಿಬಿಷನ್‌ಗೆ ಮಾಡಿರುವ ಹಾಗೆ ಮಾಡಿದರೆ ಅನುಕೂಲವಾಗುತ್ತದೆ. ಇದಕ್ಕೆ ಬೇಕಾದ ಏರ್ಪಾಡೂ ಕೂಡ ಇಲ್ಲ ಎಂದು ಹೇಳಿದ್ದಾರೆ. ವಿಶ್ಲೇಷಣಾತ್ಮಕ ಪ್ರಯೋಗಾಲಯ ಎಂದು ಮದರಾಸಿನಲ್ಲಿದೆ. ಅಲ್ಲಿ ಮಾಡಿರುವಂತೆ ಇಲ್ಲಿಲ್ಲ. ಅಲ್ಲಿ ಇದಕ್ಕಾಗಿ ಒಂದು ಯೋಜನೆ ಮಾಡಿದ್ದಾರೆ. ಪ್ರತಿಯೊಂದು ಹಳ್ಳಿಯಲ್ಲಿ ಮೂರನೇ ಪಂಚವಾರ್ಷಿಕ ಯೋಜನೆಯ ಅವಧಿಯೊಳಗೆ ವಿಶ್ಲೇಷಣೆಗಳನ್ನೂ ಒದಗಿಸಿ ಒಳ್ಳೆಯ ತುಪ್ಪ ಮುಶ್ರಿತ ಆಹಾರ ಪದಾರ್ಥಗಳನ್ನು ಉತ್ತಮ ರೀತಿಯಲ್ಲಿ ಒದಗಿಸಲು, ಮಿಶ್ರಣವನ್ನು ತಪ್ಪಿಸಲು ಕೆಲಸ ಮಾಡಬೇಕೆಂದು ಇದ್ದಾರೆ.

## ಅಕ್ರಮ ಮದ್ಯದಿಂದ ಆರೋಗ್ಯಕ್ಕೆ ಹಾನಿ

ಇದರ ಜೊತೆಗೆ ಒಂದು ಸೂಚನೆಯನ್ನು ಈ ಪ್ರೋಹಿಬಿಷನ್ನಿನ, ಒಂದು ಕಡೆಯಿಂದ ಆಗತಕ್ಕಂತಹ, ಆರೋಗ್ಯಕ್ಕೆ ಆಗುವಂತಹ ಅನ್ಯಾಯಗಳನ್ನು ತಮ್ಮ ಮುಂದೆ ಇಡಲು ಬಯಸುತ್ತೇನೆ. ಮದ್ಯಗಳ ಕಳ್ಳಬಟ್ಟಿ ನೀರಾ ಕುಡಿಯಲಿಕ್ಕೂ ಆಗುತ್ತಿದ. ಕುಡಿಯಲಿಕ್ಕೆ ಹೋಗುವಾಗ ಷರಾಬು ಆಗುತ್ತದೆ. ಅನೇಕ ತರಹದ ಷರಾಬುಗಳು ಮದ್ಯಗಳ ಕಳ್ಳಬಟ್ಟಿಯಿಂದ ಆಗುತ್ತಿದೆ ಎನ್ನುವುದನ್ನೆಲ್ಲಾ ನೋಡಿದ್ದೇನೆ. ಸಲ್‌ಫೇಟ್ಸ್, ನವಾಸಾಗರ, ಬಾಲಿಚಕ್ಕೆ, ಮುಳ್ಳೀರುಸೊಪ್ಪು ಎನ್ನುತ್ತಾರೆ. ಅದೇ ಇವನ್ನೆಲ್ಲಾ ಹಾಕಿ ಸ್ಪೀಡ್ ಬೇಗನೆ ಬರಬೇಕೆಂದು ಮಾಡುತ್ತಾರೆ– ಇದು ವಿಷಕಾರಿಯಾಗಿ ಮೊದಲು ಜಾಸ್ತಿಯಾಗಿ ಅಮಲು ಬರಬೇಕೆಂದು ಮಾಡುತ್ತಾರೆ. ವಿಷಕಾರಿಯಾದ ಆಹಾರ ಇದು. ಇದರಲ್ಲಿ ನನ್ನ ಸೂಚನೆ ಇಷ್ಟೆ. ನಮ್ಮ ಸರಕಾರದ ಆರೋಗ್ಯ ಮಂತ್ರಿಗಳು, ನಮ್ಮ ಹೋಂ ಇಲಾಖೆಯ ಮಂತ್ರಿಗಳು ಮತ್ತು ಎಕ್ಸೈಜು ಖಾತೆಯ ಮಂತ್ರಿಗಳು ಇದನ್ನು ಯೋಚನೆ ಮಾಡಿ ಇದರಿಂದ ಜನತೆಯ ಆರೋಗ್ಯ ಕೆಡದಂತಹ ಕೆಲವು ಯೋಜನೆಯನ್ನು ಒಟ್ಟುಗೂಡಿ ಕೈಗೊಳ್ಳಬೇಕು.

ಶ್ರೀ ಎಂ.ಪಿ. ನರಸಿಂಹನ್: ಕಳ್ಳಬಟ್ಟಿಯನ್ನು ಸ್ವಚ್ಛ ಸ್ಥಿತಿಯಲ್ಲಿ ಮಾಡಬೇಕೆಂಬುದು ನಿಮ್ಮ ಸಲಹೆಯೇ?

ಡಾ॥ ಕೆ. ನಾಗಪ್ಪ ಆಳ್ವ : ಆದಷ್ಟು ಆಹಾರ ಪದಾರ್ಥಗಳನ್ನು ಸರಿಯಾಗಿ ಅನಲೈಸು ಮಾಡಿ ಯಾವ ತರದ ವಿಷದ ಪದಾರ್ಥಗಳನ್ನು ಹಾಕಿದ್ದಾರೆನ್ನುವುದನ್ನು ಕಂಡುಹಿಡಿದು ಅದನ್ನು ಮಾಡಿದವರಿಗೆ ಆರು ತಿಂಗಳಿಂದ ಒಂದು ವರ್ಷದವರೆಗೆ ಕಠಿಣ ಶಿಕ್ಷೆ ವಿಧಿಸುತ್ತೇವೆಂದು ಸರಕಾರದವರು ಮಾಡಬೇಕು. ಇದನ್ನು ನಾನು ಒಬ್ಬ ಡಾಕ್ಟರಾಗಿ ಹೇಳುತ್ತಿದ್ದೇನೆ. ಇದರ ಬಗ್ಗೆ ಆಸ್ಪತ್ರೆಗಳಲ್ಲಿರುವ ಲೆಕ್ಕಪತ್ರಗಳನ್ನೂ ನೋಡಿ ತೆಗೆದಿದ್ದೇನೆ. ಸಾಧಾರಣವಾಗಿ ನೂರರಲ್ಲಿ ಇಪ್ಪತ್ತೈದು ಜನರು ಈ ಹೊಟ್ಟೆಯ ಖಾಯಿಲೆಯಿಂದ ನರಳುತ್ತಿದ್ದಾರೆ. ಇನಕ್ಕೆ ಈ ಜನರ ಅನ್ಯಾಯದ ಫಲ. ಇದರ ಬಗ್ಗೆ ವಿಶೇಷವಾಗಿ ಸರಕಾರ ಗಮನಕೊಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

## ಸುಲಭ ದರದಲ್ಲಿ ಗುಣಮಟ್ಟದ ಔಷಧೋಪಚಾರ ದೊರಕಲಿ

ಸುಲಭ ದರದಲ್ಲಿ ಜನರಿಗೆ ಔಷಧಿ ಸಿಗಬೇಕು. ಒಳ್ಳೆಯ ಔಷಧಿ ಸಿಗಬೇಕು. ಅದಕ್ಕೆ ಆದಷ್ಟು ಡ್ರಗ್ ಮ್ಯಾನ್ಯುಫ್ಯಾಕ್ಚರಿಂಗ್ ಕಂಪೆನಿಗಳ ಸ್ಥಾಪನೆ ಆಗಬೇಕು. ಐ.ಪ್ಯ.ಎಲ್. ಎಂಬ ಒಂದು ಸಂಸ್ಥೆ ಇದೆ. ಅದು ಸರಿಯಾಗಿ ನಡೆಯುತ್ತಿಲ್ಲ.

ಇದನ್ನು ಸರಿಯಾಗಿ ನಡೆಸುತ್ತಾ ಇದ್ದರೆ ಅನೇಕ ತರಹದ ಔಷಧಿಗಳನ್ನು ಅಲ್ಲಿಂದ ಕೊಡಬಹುದಾಗಿತ್ತು. ಇನ್ನಾದರೂ ಅದರ ವಿಷಯದಲ್ಲಿ ಸರ್ಕಾರ ಗಮನಕೊಟ್ಟು ಯಾರು ಅಲ್ಲಿ ಇರಬೇಕು, ಯಾರಿಗೆ ಆರ್ಗನೈಸಿಂಗ್ ಕೆಪಾಸಿಟಿ ಇದೆ ಅಂತಹವರನ್ನು, ಯೋಗ್ಯತೆಯುಳ್ಳವರನ್ನು ಕಮಿಟಿಯಲ್ಲಿ ಹಾಕಿ ಆ ಸಂಸ್ಥೆಯನ್ನು ನಡೆಸಿದರೆ ಹೆಚ್ಚಿನ ಮಟ್ಟದ ಪ್ರಯೋಜನವಾಗುತ್ತದೆ.

ಆಸ್ಪತ್ರೆಗಳನ್ನು ಒಳ್ಳೆಯ ರೀತಿಯಲ್ಲಿ ನಡೆಸಬೇಕು. ಆ ರೀತಿ ನಡೆಸುತ್ತಾ ಇಲ್ಲ. ಆಸ್ಪತ್ರೆಗಳನ್ನು ಅಪ್‌ಗ್ರೇಡ್ ಮಾಡಬೇಕು. ಬರುವ ಐದು ವರ್ಷಗಳಲ್ಲಿ ಇಂದಿನಿಂದಲೇ ಪ್ರಾರಂಭ ಮಾಡಿ ಅಪ್‌ಗ್ರೇಡ್ ಮಾಡಲಿಕ್ಕೆ ಸಾಧ್ಯವಾದರೆ ಒಳ್ಳೆಯದು, ಟ್ಯುಬರ್‌ಕ್ಯುಲೋಸಿಸ್‌ಗೆ ಇಲ್ಲಿ ನ್ಯಾಷನಲ್ ಇನಸ್ಟಿಟ್ಯೂಟ್ ಇದೆ. ಬೇರೆ ಅನೇಕ ತರಹದ ಆಸ್ಪತ್ರೆಗಳು ಇದ್ದು ಟ್ರೀಟ್‌ಮೆಂಟ್‌ಗೆ ಅನುಕೂಲ ಇದೆ. ಲಂಗ್ ಸರ್ಜರಿಯಂತಹ ಉತ್ತಮ ತರಹದ ಸರ್ಜರಿ ಕೆಲಸ ನಡೆಯುವಂತ ಆಸ್ಪತ್ರೆ ಇಲ್ಲಿ ಅಪ್‌ಗ್ರೇಡ್ ಆಗಬೇಕು. ಅದಕ್ಕೆ ಬೇಕಾದ ಕೆಲಸ ಮಾಡಿ ಎಂದು ಹೇಳಿಕೊಳ್ಳುತ್ತೇನೆ.

## ವೈದ್ಯಕೀಯ ಶಿಕ್ಷಣ ಸುಧಾರಣೆಯಾಗಲಿ

ಮೆಡಿಕಲ್ ಎಜುಕೇಷನ್ ಬಹಳ ಅಗತ್ಯ. ಸಂಸ್ಥಾನದಲ್ಲಿ 3 ಮೆಡಿಕಲ್ ಕಾಲೇಜುಗಳಿವೆ. ಅದರಲ್ಲಿ ಸರಿಯಾದ ಎಕ್ವಿಪ್‌ಮೆಂಟ್ ಇಲ್ಲ. ಸರಿಯಾದ ಪರ್ಸ್ಯೂನೇಟ್ ಇಲ್ಲ. ಏನೋ ಒಂದು ವಿಧದಲ್ಲಿ ಸಿಬ್ಬಂದಿ ವ್ಯವಸ್ಥೆ ಮಾಡಿದ್ದಾರೆ. ಸ್ವಲ್ಪ ಆಲೋಚನೆ ಮಾಡಿ ನೋಡಿದರೆ ಜವಾಬ್ದಾರಿ ಕೆಲಸ ವಿಶೇಷವಾಗಿ ಮಾಡಿದ್ದು, ಸರಿಯಾದ ರೀತಿಯಲ್ಲಿ ಅನುಭವ ಮಾಡಿದ್ದು ಅದಕ್ಕೆ ಸರಿಯಾದ ಕ್ವಾಲಿಫಿಕೇಷನ್ ಇದ್ದು ಅಖಿಲ ಭಾರತ ಮೆಡಿಕಲ್ ಕೌನ್ಸಿಲ್ಲಿನ ತಜ್ಞರ ಅಭಿಪ್ರಾಯದಂತೆ ಅವು ಸರಿಯಾಗಿ ನಡೆಯುವಂತಾಗಬೇಕು. 3ನೇ ಪಂಚವಾರ್ಷಿಕ ಯೋಜನೆಯಲ್ಲಿ 2 ಮೆಡಿಕಲ್ ಕಾಲೇಜುಗಳನ್ನು ಪ್ರಾರಂಭ ಮಾಡುತ್ತೇವೆ ಎಂದು ಹೇಳಿದ್ದೀರಿ. ಅದನ್ನು ಮಾಡಿ, ಆದರಲ್ಲಿ ನನ್ನ ಸೂಚನೆ ಏನೆಂದರೆ ಪ್ರಥಮವಾಗಿ ಬೇಕಾದ ಅನುಕೂಲ ಬಳ್ಳಾರಿಯಲ್ಲಿದೆ. ಅಲ್ಲಿ ಸಿಗಬಹುದು. ಮತ್ತೊಂದು ಇನ್ನೊಂದು ಕಡೆ ಆಗಬಹುದು. ಈ ಸಂದರ್ಭದಲ್ಲಿ ಲೈಸೆನ್ಸಿಯೇಟ್ ಕೋರ್ಸಿನ ವಿಷಯವಾಗಿ ಕೆಲವು ಮಾತನ್ನು ಹೇಳಬೇಕಾಗಿದೆ. ಅದು ಎಷ್ಟಕ್ಕೂ ಸರಿಯಿಲ್ಲ. ಹಳ್ಳಿಗಳಲ್ಲಿರುವ ಆಸ್ಪತ್ರೆಗಳಿಗೆ ಡಾಕ್ಟರುಗಳನ್ನು ಕಳುಹಿಸಲು ಆಗುತ್ತಿಲ್ಲ. ಅದಕ್ಕೆ ಈ ಒಂದು ಯೋಜನೆ ಸದ್ಯಕ್ಕೆ ಮಾಡಿದ ಮೇಲೆ ಇದು ನಿಲ್ಲುವುದಿಲ್ಲ ಎಂದು ಒಂದು ತರಹದ ಅರ್ಧ ಅರ್ಥ ಮಾತಿನಲ್ಲಿ ಮಾನ್ಯ ಡಾಕ್ಟರ್ ಹೆಗ್ಗಡೆಯವರು ಹೇಳಿದ್ದಾರೆ. ಅದು ಸರಿಯಲ್ಲ,

ತಜ್ಞರು ಆಲೋಚನೆ ಮಾಡಿ ಇದು ಬೇಡ ಎಂದು ಹೇಳಿದ್ದಾಯಿತು. ಆಮೇಲೆ ಈಗ ಇಲ್ಲಿ ಮಾಡಲಿಕ್ಕೆ ಬೇಕು ಎಂಬ ಅಭಿಪ್ರಾಯದಲ್ಲಿ ಮಾನ್ಯ ಮಂತ್ರಿಗಳು ಇದ್ದಾರೆ. ನಾನು ಡೆಕ್ಕನ್ ಹೆರಾಲ್ಡ್ ಪತ್ರಿಕೆಯ 2ನೇ ಏಪ್ರಿಲ್ ಸಂಚಿಕೆಯಲ್ಲಿ ಒಂದು ಕಾರ್ಟೂನ್ ಬಂದಿದೆ ಮತ್ತು 1ನೇ ಏಪ್ರಿಲ್‌ನಲ್ಲಿ ಮೆಡಿಕಲ್ ಲೈಸೆನ್ಸಿಯೇಟ್ ವಿಷಯವಾಗಿ ಲೀಡರ್ ಕೂಡ ಬರೆದಿದ್ದಾರೆ, ಇವತ್ತಿನ ಪೇಪರಿನಲ್ಲಿ,

"ವೈದ್ಯಕೀಯ ಸಹಾಯಕರ ತರಬೇತಿಗೆ ಸಂಬಂಧಿಸಿದ ಯೋಜನೆಯು ಕೇಂದ್ರ ಸರ್ಕಾರದ ಸಕ್ರಿಯಾ ಪರಿಶೀಲನೆಯಲ್ಲಿದೆ. ಆರೋಗ್ಯ ಸಚಿವರಾದ ಶ್ರೀ ಡಿ.ಪಿ.ಕರ್ಮರ್ಕರ್ ಈ ವಿಚಾರವನ್ನು ಶುಕ್ರವಾರ ಲೋಕಸಭೆಯಲ್ಲಿ ಬಹಿರಂಗಪಡಿಸಿದರು. ಸದನದಲ್ಲಿ ಪ್ರಶ್ನೆಗಳಿಗೆ ಉತ್ತರ ನೀಡಿದಂತಹ ಶ್ರೀ ಕರ್ಮರ್ಕರ್‌ರವರು ವೈದ್ಯಕೀಯ ಸಹಾಯಕರು ವೈದ್ಯರಾಗಿ ಕೆಲಸ ಮಾಡುವ ಉದ್ದೇಶ ಹೊಂದಿರದೆ ಕೇವಲ ಸಹಾಯಕರಾಗಿ ಕರ್ತವ್ಯ ನಿರ್ವಹಿಸುವ ಉದ್ದೇಶ ಹೊಂದಿದ್ದಾರೆ ಎಂದು ಹೇಳಿದರು. ಅವರಿಗೆ ನೀಡಲಾದ ತರಬೇತಿಗೆ ಸಂಬಂಧಿಸಿದಂತೆ, ಅವರು ಇದು ಹೆಚ್ಚು ಕಡಿಮೆ ನೈರ್ಮಲ್ಯ ಮತ್ತು ಜನಾರೋಗ್ಯ ಸಿಬ್ಬಂದಿಗೆ ನೀಡುವಂಥದ್ದೇ ಆಗಿರುವುದೆಂದು ಹೇಳಿದರು. ಜೊತೆಗೆ, ವೈದ್ಯಕೀಯ ಸಹಾಯಕರಿಗೆ ವೈದ್ಯರ ಅಧೀನದಲ್ಲಿ ಕೆಲಸ ಮಾಡಲಿಕ್ಕೆ ಅನುವಾಗುವ ಹಾಗೆ ರೋಗ ಕುರಿತ ಒಂದು ಅಲ್ಪಾವಧಿ ಕೋರ್ಸ್ ಇರುತ್ತದೆ.

ವೈದ್ಯ ವಿಜ್ಞಾನಕ್ಕೆ ಸಂಬಂಧಿಸಿದ ಪ್ರವೀಣತಾಪತ್ರ ಕೋರ್ಸ್ ಅನ್ನು ಪುನರಾರಂಭಿಸುವ ವಿಷಯವನ್ನು ಸಂಪೂರ್ಣವಾಗಿ ರಾಜ್ಯಗಳಿಗೆ ಬಿಟ್ಟುಕೊಡಲಾಗಿದೆ. ಇದು ಸದರಿ ಕೋರ್ಸ್ ಅನ್ನು ಪುನಃ ಪ್ರಾರಂಭಿಸುವ ಮುಕ್ತ ಅವಕಾಶವನ್ನು ರಾಜ್ಯಗಳಿಗೆ ಕಲ್ಪಿಸುತ್ತದೆಂದು ಶ್ರೀ ಕರ್ಮಕರ್ ಹೇಳಿದರು.

ದೇಶದಲ್ಲಿನ 60 ಕಾಲೇಜುಗಳ ವೈದ್ಯಕೀಯ ವಿದ್ಯಾರ್ಥಿಗಳು ತಾವು ವಿದ್ಯಾರ್ಹತೆಯನ್ನು ಪಡೆದರೆ ಪ್ರಸ್ತುತ ಇರುವ ವೈದ್ಯಕೀಯ ಸಿಬ್ಬಂದಿಯ ಕೊರತೆಯು ಕಣ್ಮರೆಯಾಗುತ್ತದೆಂದು ಅವರು ಹೇಳಿದರು".

ಇಂಥಾ ಅಥಾರಿಟಿಯಿಂದ ಮೆಡಿಕಲ್ ಕಾಲೇಜು ಒಳ್ಳೆಯ ರೀತಿಯಿಂದ ನಡೆದರೆ ಈ ಸಮಸ್ಯೆ ಪರಿಹಾರವಾಗುತ್ತದೆ ಎಂದು ಹೇಳುವಾಗ ಹಳ್ಳಿ ಜನರಿಗೆ ಅರ್ಧ ಅನುಭವದ ಕೆಲವು ಡಾಕ್ಟರುಗಳನ್ನು ತಯಾರು ಮಾಡಬೇಕೆಂದು ಹೇಳಿದರೆ, ಇಂದಿನ ಕಾಲದ ಹಳ್ಳಿಯ ಜನರು ಅದನ್ನು ವಿರೋಧಿಸುತ್ತಾರೆ. ಸರಿಯಾದ ಅನುಭವವುಳ್ಳ ಡಾಕ್ಟರುಗಳು ಬೇಕೆಂದು ಕೇಳುವ ಪರಿಸ್ಥಿತಿ ಇದೆ. ಅನುಭವಸ್ಥರಿಂದ ತಕ್ಕ ಅನುಕೂಲತೆ ಮಾಡಿಕೊಡುವುದು ನಿಮ್ಮ ಕರ್ತವ್ಯ. ಆದ್ದರಿಂದ ಈ

ಯೋಜನೆಯಿಂದ ಸಮಸ್ಯೆ ಪರಿಹಾರವಾಗುವುದಕ್ಕೆ ಬದಲಾಗಿ ಅನೇಕ ತರಹದ ಸಮಸ್ಯೆಗಳ ಉದ್ಭವವಾಗುತ್ತದೆ. ಆದ್ದರಿಂದ ಇದು ಅಗತ್ಯವಿಲ್ಲ ಎಂದು ಹೇಳುತ್ತೇನೆ.

## ಗ್ರಾಮಾಂತರ ಆರೋಗ್ಯ ಸೇವೆಗೆ ನುರಿತ ವೈದ್ಯರನ್ನು ಕಳುಹಿಸಿ

ಹಳ್ಳಿಗಳಿಗೆ ಯಾವ ರೀತಿಯ ಡಾಕ್ಟರುಗಳನ್ನು ಕಳುಹಿಸಬೇಕು ಎಂಬ ವಿಷಯದಲ್ಲಿ ಕೆಲವು ಸೂಚನೆಗಳಿವೆ. ಇವೊತ್ತು ಎಲ್.ಎಮ್.ಪಿ. ಡಾಕ್ಟರುಗಳು ಎಂ.ಬಿ.ಬಿ.ಎಸ್. ಡಾಕ್ಟರುಗಳು ಅನೇಕ ಜನ ಪ್ರಾಕ್ಟೀಸ್ ಮಾಡುತ್ತಾ ಇದ್ದಾರೆ. ಈ ಸಂಬಳದ ಅನುಕೂಲತೆ ಇಷ್ಟರವರೆಗೂ ಇರಲಿಲ್ಲ. ಈಗ ಹೆಚ್ಚು ಮಾಡಿದ್ದರಿಂದ ಸ್ವಲ್ಪ ಆಕರ್ಷಕವಾಗಿದೆ. ಆದರೆ ಅವರಿಗೆ ವಯಸ್ಸು ಜಾಸ್ತಿಯಾಗಿದೆ. ಸರ್ಕಾರದವರು ಇವತ್ತು ಅವರಿಗೆ ಅನುಕೂಲವಾಗಬೇಕೆಂಬ ಮನಸ್ಸಿದ್ದರೆ ಅಂತಹವರನ್ನು ಉಪಯೋಗಿಸಿಕೊಳ್ಳಬಹುದು. ಇವೊತ್ತು ಧೈರ್ಯವಾಗಿ ಹೇಳಬಲ್ಲೆ. 200 ಜನ ಡಾಕ್ಟರುಗಳು ಬೇಕಾಗಿದ್ದರೆ, 300 ಜನ ಡಾಕ್ಟರುಗಳು ಇದ್ದಾರೆ. ವಯಸ್ಸು 35 ರಿಂದ 40ಕ್ಕೆ ಏರಿಸಿ ಅಂತಹವರನ್ನು ಕಾಂಟ್ರ್ಯಾಕ್ಟ್ ಬೇಸಿಸ್ ಮೇಲೆ ಇಷ್ಟು ವರ್ಷಕ್ಕೆ ಎಂದು ಹೇಳಿ ನೇಮಕ ಮಾಡಿಕೊಳ್ಳಬೇಕು ಮತ್ತು ರಿಟೈರ್ಡ್ ಆದವರು ಇದ್ದಾರೆ, ಅವರನ್ನು ಕರೆದುಕೊಳ್ಳಿ. ಲೈಸೆನ್ಸಿಯೇಟ್ ಆದವರನ್ನು ಟ್ರೈನಿಂಗ್ ಕೊಟ್ಟು ಆಸ್ಪತ್ರೆಗಳಿಗೆ ಕಳುಹಿಸಬೇಕು. ಸರಿಯಾದ ರೀತಿಯಲ್ಲಿ ರೆಕ್ರೂಟ್‌ಮೆಂಟ್ ಎರಡು ವರ್ಷದಲ್ಲಿ ಮಾಡಬೇಕು. ಹೀಗೆ ಮಾಡಿ ಜನರಿಗೆ ಅನುಕೂಲ ಮಾಡಿಕೊಡಬೇಕು.

ಗ್ರಾಮಾಂತರ ಪ್ರದೇಶದಲ್ಲಿರುವವರಿಗೆ ಮನೆಯ ಅನುಕೂಲತೆ ಮಾಡಿಕೊಡುವುದು ಅಗತ್ಯ. ಕಳೆದ ನಾಲ್ಕು ವರ್ಷಗಳಿಂದ ಈ ಒಂದು ಸೂಚನೆ ಎಲ್ಲಲ್ಲೂ ಬರುತ್ತಾ ಇದೆ. ಮೆಡಿಕಲ್ ಕಾಲೇಜಿಗೆ ಅಡ್ಮಿಷನ್ ಕೊಡುವಾಗ 15 ಅಥವಾ 20% ರಿಜರ್ವ್ ಮಾಡಬೇಕು. ಕಾಂಟ್ರಾಕ್ಟ್ ಅಥವಾ ಅಗ್ರಿಮೆಂಟ್ ಮೇಲೆ ಯಾರು ಗ್ರಾಮಾಂತರ ಪ್ರದೇಶದಲ್ಲಿ ಕೆಲಸ ಮಾಡಲಿಕ್ಕೆ ಒಪ್ಪುತ್ತಾರೆ ಅಂತವರಿಗೆ ಮಾತ್ರ ಸೀಟು ಕೊಡಬೇಕು. ಕೊಟ್ಟು ಅವರಿಂದ ಸಹಾಯ ಪಡೆಯಬೇಕು. ಇದರಿಂದ ಹೆಚ್ಚಿನ ಪ್ರಯೋಜನವಾಗುತ್ತದೆ.

ಕಡೆಯದಾಗಿ ಒಂದು ಮಾತು ಮೆಡಿಕಲ್ ಎಜುಕೇಷನ್ನಿನ ಮಟ್ಟ ಸರಿಯಾಗಿಲ್ಲ. ಶಿಕ್ಷಣದ ಗುಣಮಟ್ಟವು ಉತ್ತಮವಾಗಿಲ್ಲ. ಇದಕ್ಕೆ ನಮ್ಮ ರಿಸಲ್ಟ್ ತಾವು ದಯವಿಟ್ಟು ನೋಡಬೇಕು. ಇದು ಬಹಳ ಅಪಾಯಕಾರಿ. ಸರಿಯಾದ ರೀತಿಯಲ್ಲಿ ವಿದ್ಯೆ ಕೊಟ್ಟು, ತರಬೇತು ಮಾಡಿ ಉತ್ತಮ ಪರ್ಸಂಟೇಜಿನಲ್ಲಿ ಅವರು ಪಾಸಾದರೆ ಒಳ್ಳೆಯದು. ಇದೇ ರೀತಿ ಅನಿಶ್ಚಯವಾದ ರೀತಿಯಲ್ಲಿ ಈ ಕೆಲಸ ನಡೆಯುತ್ತಾ

ಇರುವುದು ಸರಿಯಲ್ಲ. ಇದಕ್ಕೆ ಸರಿಯಾದ ಬೋಧಕ ಸಿಬ್ಬಂದಿ ಇಲ್ಲ. ಎಲ್ಲಾ ಕಡೆಯೂ ಸರಿಯಾದ ಬೋಧಕ ಸಿಬ್ಬಂದಿ ಹಾಕಿ ಮೇಲ್ವಿಚಾರಣೆ ನೋಡಿಕೊಳ್ಳಬೇಕು.

ವರ್ಷದಿಂದ ವರ್ಷಕ್ಕೆ ಈ ಪರ್ಸೆಂಟೇಜ್ ಜಾಸ್ತಿಯಾಗುತ್ತಾ ಹೋದರೆ ನಮಗೆ ಬೇಕಾದಷ್ಟು ಡಾಕ್ಟರುಗಳು ಸಿಗುವುದಕ್ಕೆ ಸಾಧ್ಯವಿದೆ.

ಇಷ್ಟು ಹೇಳಿ, ಬರುವ ವರ್ಷದಲ್ಲಿ ನಾನು ಕೊಟ್ಟ ಸೂಚನೆಗಳನ್ನು ದಯವಿಟ್ಟು ಸ್ವೀಕರಿಸಿ, ದೇಶದ ಹಿತದೃಷ್ಟಿಯಿಂದ ಮಾಡಿರುವ ಈ ಸಲಹೆಗಳನ್ನು ಮನಗೊಂಡು ಜನರ ಆರೋಗ್ಯವನ್ನು ಯಾವ ರೀತಿ ಜಾಸ್ತಿ ಮಾಡಬಹುದೆಂದು ಯೋಚಿಸಿ, ಜೊತೆಗೆ ನಮ್ಮ ನೆರೆಪ್ರಾಂತ್ಯಗಳಿಂದ ಕೂಡ ಅವರ ಅನುಭವ, ಸಲಹೆ ಹಾಗು ತಜ್ಞರುಗಳ ಅಭಿಪ್ರಾಯವನ್ನು ಪಡೆದುಕೊಂಡು ದೇಶದ ಅಭಿವೃದ್ಧಿ ಸಾಧನೆ ಮಾಡಬೇಕೆಂದು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# ಮೈಸೂರು ಆಯುರ್ವೇದ ಮತ್ತು ಯುನಾನಿ ವೈದ್ಯರ ನೋಂದಣಿ ಹಾಗೂ ವೈದ್ಯಕೀಯ ವೃತ್ತಿದಾರರ(ವೈದ್ಯರ) ಸಂಕೀರ್ಣ ಉಪಬಂಧಗಳ ವಿಧೇಯಕ, 1960.

**19ನೇ ಆಗಸ್ಟ್ 1961**

ಆಯುರ್ವೇದ ಮತ್ತು ಯುನಾನಿ ವೈದ್ಯಕೀಯ ಪದ್ಧತಿಯನ್ನು ವೈಜ್ಞಾನಿಕ ತಳಹದಿಯ ಮೇಲೆ ಉತ್ತಮಪಡಿಸಬೇಕೆಂದು ಹೇಳಿದರು. ವಿಧೇಯಕದಲ್ಲಿ ಅನೇಕ ತಪ್ಪುಗಳಿವೆ ಎಂದು ಹೇಳುತ್ತಾ, ಬಾಂಬೆ ಕರ್ನಾಟಕ ಪ್ರದೇಶವನ್ನು ಹೊರಸುಪಡಿಸಿ ರಾಜ್ಯದಲ್ಲೆಲ್ಲಾ ಅದು ಜಾರಿಗೆ ಬರುತ್ತಿರುವುದರ ಬಗ್ಗೆ ಆಶ್ಚರ್ಯ ವ್ಯಕ್ತಪಡಿಸಿದರು. ಸಂಯುಕ್ತ ವೈದ್ಯಕೀಯ ಪದ್ಧತಿಯಲ್ಲಿ ವಿದ್ಯಾಭ್ಯಾಸ ಮಾಡಿದ ಪದವೀಧರರಿಗೆ ಸರ್ಕಾರದ ತಪ್ಪು ನೀತಿಯಿಂದಾಗಿ ತೊಂದರೆಯಾಗುತ್ತಿದೆಯೆಂದು ತಿಳಿಸಿದರು. ಮೈಸೂರು ರಾಜ್ಯದಲ್ಲಿ ಆಯುರ್ವೇದ ಪದವೀಧರರು ಮತ್ತು ಡಿಪ್ಲೋಮಾ ಪದವೀಧರರ ನಡುವೆ ಇರುವ ವ್ಯಕ್ತಿ ವೈಷಮ್ಯ ಭಾವನೆ ಹೋಗಲಾಡಿಸುವಂತೆ ಒತ್ತಾಯಿಸಿದರು. ಆಯುರ್ವೇದ ವೈದ್ಯರಿಗೆ ಸಾಮಾಜಿಕ ಸೇವೆಯಲ್ಲಿ ತಮ್ಮ ಸ್ಥಾನದ ಬಗ್ಗೆ ಅರಿವು ಮೂಡಿಸುವುದು ಅವಶ್ಯಕವೆಂದು ಭಾವಿಸಿದರು.

## ಮೈಸೂರು ಆಯುರ್ವೇದ, ಯುನಾನಿ ವೈದ್ಯರ ನೋಂದಣಿ ಮತ್ತು ಈ ಪದ್ಧತಿಗಳಲ್ಲಿ ವೈಷಮ್ಯ ಭಾವನೆ.

ಸದರಿ ವಿಧೇಯಕವನ್ನು ಸದನದ ಸಲಹಾ ಸಮಿತಿಯ ಪರಿಶೀಲನೆಗೆ ಒಳಪಡಿಸಿರುವುದನ್ನು ಸ್ವಾಗತಿಸುತ್ತಾ, ಈ ದಿಸೆಯಲ್ಲಿ ಸಮಿತಿಯು ತನ್ನ ಉತ್ತಮ ಸಲಹೆ ನೀಡುತ್ತದೆಂದು ಆಶಿಸಿದರು.

**ಶ್ರೀ ಕೆ. ನಾಗಪ್ಪ ಆಳ್ವ (ಪಾಣೆ, ಮಂಗಳೂರು)**: ಮಾನ್ಯ ಸಭಾಧ್ಯಕ್ಷರೇ, ನಾನು ಮೈಸೂರು ಆಯುರ್ವೇದ ಮತ್ತು ಯುನಾನಿ ವೈದ್ಯರ ನೋಂದಣಿ ಮತ್ತು ವೈದ್ಯಕೀಯ ವೃತ್ತಿದಾರರ (ವೈದ್ಯರ) ಸಂಕೀರ್ಣ ಉಪಬಂಧಗಳ ವಿಧೇಯಕ, 1960ರ ಬಗ್ಗೆ ಕೆಲವು ಮಾತುಗಳನ್ನು ಹೇಳಲಿಚ್ಛಿಸುತ್ತೇನೆ. ಆಯುರ್ವೇದ ಮತ್ತು ಯುನಾನಿ ವೈದ್ಯಕೀಯ ಪದ್ಧತಿಗಳು ವೈಜ್ಞಾನಿಕ ಆಧಾರದ ಮೇಲೆ ಅಭಿವೃದ್ಧಿ ಹೊಂದಿ ಬೆಳೆಯುವಂತೆ ನೋಡಿಕೊಳ್ಳುವುದು ಸರ್ಕಾರದ ಕರ್ತವ್ಯವಾಗಿದೆ. ನಾವು ಇದಕ್ಕೆ ಎಲ್ಲಾ ರೀತಿ ಪ್ರೋತ್ಸಾಹವನ್ನು ನೀಡಬೇಕು. ಪದ್ಧತಿಗಳು ಪೂರ್ಣ ಪ್ರಮಾಣದಲ್ಲಿ ಅಭಿವೃದ್ಧಿ ಹೊಂದುವಂತೆ ನೋಡಿಕೊಳ್ಳುವುದು ಹಾಗೂ ಸಾರ್ವಜನಿಕ ಹಿತಾಸಕ್ತಿಯನ್ನು ರಕ್ಷಿಸುವುದು ಮತ್ತು ಅದೇ ಸಮಯಕ್ಕೆ ಕಪಟ ವೈದ್ಯ ಪದ್ಧತಿಯ ಬಗ್ಗೆ ನಿಗಾ ಇಡುವಂತೆ ನೋಡಿಕೊಳ್ಳುವುದೇ ವಿಧೇಯಕವನ್ನು ಈ ಸದನದ ಮುಂದೆ ತರುವ ಮತ್ತು ಅದನ್ನು ಅಧಿನಿಯಮವನ್ನಾಗಿ ಮಾಡುವ ಉದ್ದೇಶವಾಗಿದೆ.

ನಾವು ಈ ವಿಧೇಯಕವನ್ನು ಪರಿಶೀಲಿಸಿದರೆ, ಇದರಲ್ಲಿ ಅನೇಕ ದೋಷಗಳಿರುವುದು ಕಂಡುಬರುತ್ತದೆ. ಅಂಥ ವಿಧೇಯಕವನ್ನು ಈ ಸದನದ ಮುಂದೆ ತಂದಾಗ, ಅದು ರಾಜ್ಯದ ಎಲ್ಲಾ ಪ್ರದೇಶಗಳನ್ನು ಒಳಗೊಳ್ಳಬೇಕು. ಈ ವಿಧೇಯಕವು ಜಾಂಬೆ – ಕರ್ನಾಟಕ ಪ್ರದೇಶವನ್ನು ಹೊರತುಪಡಿಸಿ ಇಡೀ ರಾಜ್ಯದಲ್ಲಿ ಜಾರಿಗೆ ಬರತಕ್ಕದ್ದೆಂದು ಹೇಳಿರುವುದನ್ನು ನೋಡಿದರೆ ನಿಜವಾಗಿಯೂ ಆಶ್ಚರ್ಯವಾಗುತ್ತಿದೆ. ಇದರಲ್ಲಿ ತಾರತಮ್ಯ ಮಾಡಲಾಗಿದೆ. ಈಗಾಗಲೇ ಅನೇಕ ಭಾಗಗಳಲ್ಲಿ ಸಾಕಷ್ಟು ದ್ವೇಷದ ಭಾವನೆ ಹಾಗೂ ಆಶಾಭಂಗವಾಗಿದೆ. ಆಯುರ್ವೇದ ಪದ್ಧತಿಯಲ್ಲಿ ಅನೇಕ ವರ್ಗಗಳು ಮತ್ತು ಪ್ರವರ್ಗಗಳಿವೆ ಹಾಗೂ ಸರಿಸುಮಾರು ಒಂದು ಡಜನ್‌ನಷ್ಟು ವರ್ಗಗಳಿವೆ. ನಾವು ಒಂದು ಸಮಗ್ರ ವೈದ್ಯಕೀಯ ಪದ್ಧತಿ ಇದೆ ಎಂಬುದನ್ನು ಕೂಡ ಒಪ್ಪಿಕೊಳ್ಳಬೇಕು. ಈ ವಿಧೇಯಕದಲ್ಲಿ ಆ ವೈದ್ಯಕೀಯ ಪದ್ಧತಿಗೆ ಸೂಕ್ತ ಸ್ಥಾನವನ್ನು ನೀಡಿರುವುದಿಲ್ಲ. ನಾವು ಮದ್ರಾಸ್ ಪ್ರದೇಶವನ್ನು ನೋಡಿದರೆ, ಅಲ್ಲಿ ಸಮಗ್ರ ಪದ್ಧತಿಯಿದೆ, ನೋಂದಣಿ ವ್ಯವಸ್ಥೆಯಿದೆ ಹಾಗೂ ಪದವೀಧರರು ಮತ್ತು ಪ್ರವೀಣತಾ ಪ್ರಮಾಣಪತ್ರಗಳನ್ನು ಪಡೆದವರಿದ್ದಾರೆ. ಆದರೆ

ಮೈಸೂರು ಪ್ರದೇಶಕ್ಕೆ ಬಂದರೆ ಸರ್ಕಾರದ ಲೋಪದಿಂದಾಗಿ ಸಮಗ್ರ ವೈದ್ಯಕೀಯ ಪದ್ಧತಿಗಾಗಿ ಯಾವುದೇ ಶಾಸನಬದ್ಧ ಮಾನ್ಯತೆಯಿರುವುದಿಲ್ಲ. ಡಿಪ್ಲೋಮ ಪದವೀಧರರಿಗೆ ತಾವು ಎಲ್ಲಿದ್ದೇವೆ ಎಂಬುದು ಗೊತ್ತಿಲ್ಲ. ಅವರ ಸ್ಥಾನಮಾನವನ್ನು ಅವರಿಗೆ ಕೊಟ್ಟಿರುವುದಿಲ್ಲ; ಮಾನ್ಯತೆ ಇರುವುದಿಲ್ಲ. ಅವರಲ್ಲಿ ಕೆಲವರು ಮದ್ರಾಸ್‌ನಲ್ಲಿ ನೋಂದಾಯಿಸಿಕೊಂಡಿದ್ದಾರೆ. ಇದರ ಜೊತೆಗೆ, ಸುದ್ಧ ಆಯುರ್ವೇದ ಎಂದು ಕರೆಯಲಾಗುವ ಪದ್ಧತಿಯಿದೆ. ನಾವು ಬಾಂಬೆ ರಾಜ್ಯವನ್ನು ನೋಡಿದರೆ, ಅಲ್ಲಿ ಆಯುರ್ವೇದ ಪದವೀಧರರಿದ್ದಾರೆ ಮತ್ತು ಡಿಪ್ಲೋಮ ಪದವೀಧರರಿದ್ದಾರೆ. ಮೈಸೂರು ರಾಜ್ಯದಲ್ಲಿ ಸಾಂಸ್ಥಿಕ ತರಬೇತಿಯನ್ನು  ಪಡೆದಿರುವಂತಹ ವೈದ್ಯರಿದ್ದಾರೆ ಮತ್ತು ಪಠ್ಯಕ್ರಮ ಹಾಗೂ ಈಗ ಹೇಳಿದುದೆಲ್ಲವೂ ಇದೆ. ಅದೇ ಸಮಯಕ್ಕೆ ತಮ್ಮನ್ನು ನೋಂದಾಯಿಸಿಕೊಳ್ಳಲಿಕ್ಕೆ ಅವರಿಗೆ ಯಾವುದೇ ಅವಕಾಶವಿರುವುದಿಲ್ಲ. ಈ ರೀತಿಯಲ್ಲಿ ಗುಂಪುಗಳ ನಡುವೆ ಅಸೂಯೆಯನ್ನು ಸೃಷ್ಟಿಸಲಾಗಿದೆ. ಕೆಲವು ಭಾಗಗಳಲ್ಲಿ ಮೇಲರಿಮೆ ಮತ್ತು ಕೀಳರಿಮೆ ಇದೆ. ರಾಜ್ಯ ಭಾರತೀಯ ವೈದ್ಯಕೀಯ ಮಂಡಳಿಯ ಒಬ್ಬ ಸದಸ್ಯನಾಗಿ, ಒಂದು ಇನ್ನೊಂದಕ್ಕಿಂತ ಶ್ರೇಷ್ಠವಾದುದೆಂಬುದರ ಬಗ್ಗೆ ಜಗಳವಿದೆ ಎಂಬುದನ್ನು ನಾನು ಬಲ್ಲೆ. ಹಾಗಾಗಿ, ಇಡೀ ರಾಜ್ಯಕ್ಕೆ ಅನ್ವಯವಾಗುವ ಏಕರೂಪ ವಿಧೇಯಕವು ಅತ್ಯವಶ್ಯಕವಾಗಿದೆ.

ಜಿ.ಸಿ.ಎ.ಎಂ. ಒಂದು ಪದವಿ ಕೋರ್ಸ್ ಏನಾಗಿದೆಯಪ್ಪಾ ಅಂದ್ರೆ, ಶಾಲೆಗಳು ಮತ್ತು ಕಾಲೇಜುಗಳಲ್ಲಿ ತರಬೇತಿಯನ್ನು ಪಡೆಯುತ್ತಿರುವಂತಹ ಈ ವಿದ್ಯಾರ್ಥಿಗಳ ಭವಿಷ್ಯಕ್ಕೆ ಭರವಸೆಯಾಗಲಿ ಅಥವಾ ಖಾತ್ರಿಯಾಗಲಿ ಇಲ್ಲದಂತಾಗಿದೆ. ತಾವು ವೈದ್ಯರ ಹಕ್ಕುಗಳು ಮತ್ತು ಹೊಣೆಗಾರಿಕೆಗಳೇನು; ಅವರಿಗೆ ಮುಕ್ತವಾಗಿರುವ ಉದ್ಯೋಗಾವಕಾಶಗಳಾವುವು ಎಂಬುದನ್ನು ಈ ವೈದ್ಯರಿಗೆ ಸ್ಪಷ್ಟ ಮಾಡಬೇಕೆಂದು ನಾನು ಸರ್ಕಾರಕ್ಕೆ ಸಲಹೆ ಮಾಡುತ್ತಿದ್ದೇನೆ. ಈ ವೈದ್ಯರು ಸರ್ಕಾರಿ ಸೇವೆಯಲ್ಲಿ ಅಥವಾ ಸಾರ್ವಜನಿಕ ಜೀವನದಲ್ಲಿ ತಮ್ಮ ಸ್ಥಾನವೇನು ಎಂಬುದನ್ನು ತಿಳಿದುಕೊಳ್ಳುವುದು ತುಂಬಾ ಅಗತ್ಯ.

ಚರ್ಚೆಯ ಹಂತಕ್ಕೂ ಮೊದಲೇ ಸರ್ಕಾರವು ಆಯ್ಕೆ ಸಮಿತಿಗೆ ಈ ವಿಧೇಯಕವನ್ನು ಕಳುಹಿಸುವುದು ಸೂಕ್ತವೆಂದು ಭಾವಿಸಿದ್ದಕ್ಕೆ ನನಗೆ ತುಂಬಾ ಸಂತೋಷವಾಗಿದೆ. ಆಯ್ಕೆ ಸಮಿತಿಯು ಗಣನೀಯ ಸಮಯವನ್ನು ಅಂದರೆ 15 ದಿನಗಳು ಅಥವಾ ಒಂದು ತಿಂಗಳವರೆಗೂ ಸಮಯವನ್ನು ತೆಗೆದುಕೊಂಡು ಈ ವೈದ್ಯಕೀಯ ಪದ್ಧತಿಯ ಜಾರಿಯಿಂದ ಉಂಟಾಗುವಂಥ ಎಲ್ಲಾ ಜಟಿಲತೆಗಳನ್ನು ಮತ್ತು ತೊಡಕುಗಳನ್ನು ತಿಳಿಯುವುದೆಂದು ನಾನು ಭಾವಿಸಿದ್ದೇನೆ. ಈ ಪದ್ಧತಿಯ

ಬಗ್ಗೆ ಆಮೂಲಾಗ್ರ ಅಧ್ಯಯನವನ್ನು ಮಾಡಿ, ಈ ವಿಧೇಯಕವನ್ನು ಒಂದು ಪರಿಪೂರ್ಣ ವಿಧೇಯಕವನ್ನಾಗಿ ಮಾಡುವ ಹಾಗೆ ಮತ್ತು ಆಯುರ್ವೇದ ಪದ್ಧತಿಯನ್ನು ಪೂರ್ಣ ಪ್ರಮಾಣದವರೆಗೆ ಅಭಿವೃದ್ಧಿಪಡಿಸುವ ಹಾಗೆ ಸಲಹೆಗಳನ್ನು ನೀಡುವಂತೆ ನಾನು ಆಯ್ಕೆ ಸಮಿತಿಯನ್ನು ಕೋರುತ್ತೇನೆ. ಈ ಆಯುರ್ವೇದ ಪದ್ಧತಿಯಲ್ಲಿ ಏಕರೂಪ ಗುಣಮಟ್ಟದ ಶಿಕ್ಷಣ ಮತ್ತು ಅಭ್ಯಾಸಗಳನ್ನು ರೂಪಿಸುವಂತೆ ನಾನು ಸರ್ಕಾರವನ್ನು ಕೋರುತ್ತೇನೆ. ಸರ್ಕಾರವು ಈ ಪದ್ಧತಿಗೆ ಎಲ್ಲಾ ಪ್ರೋತ್ಸಾಹ ಮತ್ತು ಸಹಾಯವನ್ನು ನೀಡಬೇಕು ಹಾಗೂ ಈ ಪದ್ಧತಿಗೆ ಅಖಿಲ ಭಾರತ ಆಧಾರದ ಮೇಲೆ ಪ್ರೋತ್ಸಾಹ ದೊರೆಯುವಂತೆ ನೋಡಿಕೊಳ್ಳಲು ಕೇಂದ್ರ ಸರ್ಕಾರವನ್ನು ಒತ್ತಾಯಿಸಬೇಕು.

ವಂದನೆಗಳು,

**"ಆಯುರ್ವೇದ 21ನೆಯ ಶತಮಾನದ ಚಿಕಿತ್ಸಾ ಪದ್ಧತಿ."**

*** ಬೆನ್ ಹಟಾಯ್**
**(ಜಪಾನಿ ವೈದ್ಯ ಕ್ಷೇತ್ರದ ಅಧ್ಯಕ್ಷರು)**

# ಆರೋಗ್ಯ ಇಲಾಖಾ ಬೇಡಿಕೆಗಳ ಮೇಲಿನ ಚರ್ಚೆ ಮತ್ತು ಉತ್ತರ

**27ನೇ ಮಾರ್ಚ್ 1962**

**ಶ್ರೀ ಕೆ. ನಾಗಪ್ಪ ಆಳ್ವ :** ಮಾನ್ಯರೇ, ಅನೇಕ ಸಭಾಧ್ಯಕ್ಷರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವರು ಟೀಕೆ ಮಾಡಿದ್ದಾರೆ ಮತ್ತು ಅದೇ ಸಮಯಕ್ಕೆ ಅವರು ರಚನಾತ್ಮಕ ಟೀಕೆ ಸ್ವರೂಪದಲ್ಲಿ ಸಲಹೆಗಳನ್ನೂ ಕೂಡ ಮಾಡಿದ್ದಾರೆ. ಈ ಎಲ್ಲ ಸಲಹೆ–ಸೂಚನೆಗಳನ್ನು ಗಣನೆಗೆ ತೆಗೆದುಕೊಂಡು ನಾನು ಕೆಲವು ಅಭಿಪ್ರಾಯಗಳನ್ನು ನೀಡಲಿಚ್ಛಿಸುತ್ತೇನೆ.

## ಕನ್ನಡದಲ್ಲಿ ಸಚಿವರ ಭಾಷಣ ಕುರಿತಾದ ತಾಂತ್ರಿಕ ಪದ ಕ್ರಿಯಾಲೋಪ. ಸಭಾಧ್ಯಕ್ಷರ ಸಕಾಲಿಕ ಅನುಮತಿ

**ಶ್ರೀ ಕೆ. ಪಿ. ರೇವಣ್ಣ ಸಿದ್ದಪ್ಪ (ತಿಪಟೂರು) :** ಸ್ವಾಮಿ, ಕನ್ನಡದಲ್ಲಿ ಹೇಳಿದರೆ ಒಳ್ಳೆಯದು.

**ಶ್ರೀ ಕೆ. ನಾಗಪ್ಪ ಆಳ್ವ :** ಇದು ಟೆಕ್ನಿಕಲ್ ಸಬ್ಜೆಕ್ಟ್ ಆದ್ದರಿಂದ ನಾನು ಕನ್ನಡದಲ್ಲಿ ಭಾಷಣ ಮಾಡಬೇಕೆಂಬ ಅಪೇಕ್ಷೆ ತಮಗೆ ಇದ್ದರೆ ನನ್ನದೇನು ಅಡ್ಡಿ ಇಲ್ಲ. ಆದರೆ ಕನ್ನಡದಲ್ಲಿ ಭಾಷಣ ಮಾಡುವ ಕಾಲದಲ್ಲಿ ಹಲವು ಟೆಕ್ನಿಕಲ್ ಶಬ್ದಗಳು ಬರುವುದಕ್ಕೆ ಸಾಧ್ಯವಿದೆ. ಅದಕ್ಕೆ ತಾವು ಕ್ಷಮಿಸಬೇಕು. ಹಲವು ಮಂದಿ ಸದಸ್ಯರು ಭಾಷಣ ಮಾಡುತ್ತಾ..............

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:** ನಾನು ಕ್ರಿಯಾಲೋಪವನ್ನು [illegible] ಸಚಿವರು ಒಂದೇ ಭಾಷಣದಲ್ಲಿ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಸ್ಥಿತ್ಯಾ[illegible] ಮಾಡಬಾರದು. ಅವರು ಇಂಗ್ಲಿಷಿನಲ್ಲಿ ಮಾತು ಆರಂಭಿಸಿ, ಕೆಲವು ಸದಸ್ಯರು ಕನ್ನಡದಲ್ಲಿ ಮಾತನಾಡುವಂತೆ ಮನವಿ ಮಾಡಿದ ಏಕಮಾತ್ರ ಕಾರಣದಿಂದಾಗಿ ಅವರು ಕನ್ನಡ ಭಾಷೆಗೆ ತಮ್ಮ ಮಾತನ್ನು ಸ್ಥಿತ್ಯಾಂತರ ಮಾಡಿದ್ದಾರೆ. ಅವರು ಆ ರೀತಿ ಇನ್ನೊಂದು ಭಾಷೆಗೆ ಸ್ಥಿತ್ಯಾಂತರ ಮಾಡಬಾರದು. ಇಂದು ಅವರನ್ನು ಇಂಗ್ಲೀಷಿನಲ್ಲಿ ಮಾತನಾಡಲಿಕ್ಕೆ ಬಿಡೋಣ ಮತ್ತು ನಾಳೆಯಿಂದ ಅವರು ಕನ್ನಡದಲ್ಲಿ ಮಾತನಾಡಬಹುದು.

**ಮಾನ್ಯ ಸಭಾಧ್ಯಕ್ಷರು :** ಮಾನ್ಯ ಸಚಿವರು ತಮ್ಮ ಮಾತನ್ನು ಮುಂದುವರಿಸಲಿ. ಅವರು ಹೇಗೆ ಮುಂದುವರಿಸುತ್ತಾರೆಂಬುದನ್ನು ನಾವು ನೋಡೋಣ.

**ಶ್ರೀ ಕೆ. ನಾಗಪ್ಪ ಆಳ್ವ :** ಅವರ ಬಾಷಣಗಳನ್ನು ಕೇಳಿ ನನಗೆ ತುಂಬಾ ಸಂತೋಷವಾಗಿದೆ. ಟೀಕೆಗಳು...

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ :** ಕ್ರಿಯಾಲೋಪ ಹೇಗೆ ಆಗುತ್ತೆ? ಅಂದ್ರೆ ಒಂದೇ ಭಾಷಣದಲ್ಲಿ ಯಾರೇ ಸದಸ್ಯರು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಸ್ಥಿತ್ಯಂತರ ಮಾಡಬಾರದೆಂದು ಸಭಾಧ್ಯಕ್ಷರಿಂದ ತೀರ್ಪಿದೆ. ಅವರು ಇಂಗ್ಲಿಷಿನಲ್ಲಿ ತಮ್ಮ ಮಾತನ್ನು ಪ್ರಾರಂಭಿಸಿದ್ದಾರೆ. ಅವರು ಈಗ ಕನ್ನಡಕ್ಕೆ ಸ್ಥಿತ್ಯಂತರ ಮಾಡಬಹುದೇ?

**ಮಾನ್ಯ ಸಭಾಧ್ಯಕ್ಷರು :** ಮಾನ್ಯ ಆರೋಗ್ಯ ಸಚಿವರು ಇಂಗ್ಲಿಷಿನಲ್ಲಿ ತಮ್ಮ ಮಾತನ್ನು ಪ್ರಾರಂಭಿಸಿದ್ದಾರೆ. ತಾವು ಕನ್ನಡದಲ್ಲಿ ಮಾತನಾಡಬೇಕೆಂದು ಕೆಲವು ಸದಸ್ಯರು ಅವರಿಗೆ ಮನವಿಯನ್ನು ಮಾಡಿರುತ್ತಾರೆ. ಅವರು ಕನ್ನಡದಲ್ಲಿ ಮಾತನಾಡಲು ಪ್ರಯತ್ನಿಸುತ್ತಿದ್ದಾರೆ. ಅವರು ಆಗ ಕನ್ನಡದಲ್ಲಿ ಮಾತನಾಡಬೇಕೆಂದು ತಮ್ಮ ಮನಸ್ಸಿನಲ್ಲಿ ಅಂದುಕೊಂಡಿರಲಿಲ್ಲ. ಅವರು ಇಂಗ್ಲಿಷಿನಲ್ಲಿ ತಮ್ಮ ಮಾತನಾರಂಭಿಸಿರುವ ವಾಸ್ತವ ಸಂಗತಿಯ ಹಿನ್ನೆಲೆಯಲ್ಲಿ ಅವರು ಇಂಗ್ಲಿಷಿನಲ್ಲಿ ತಮ್ಮ ಮಾತನ್ನು ಮುಂದುವರಿಸುತ್ತಾರೆ ಮತ್ತು ಕನ್ನಡಕ್ಕೆ ಸ್ಥಿತ್ಯಂತರ ಮಾಡುವುದಿಲ್ಲ.

**ಶ್ರೀ ಕೆ. ನಾಗಪ್ಪ ಆಳ್ವ :** ಬೇರೆ ಇಲಾಖೆಗಳ ಕುರಿತು ಮಾಡಿರುವಂತಹ ಟೀಕೆಗಳನ್ನು ಪರಿಗಣಿಸಿದರೆ ಈ ಟೀಕೆಯು ಅಷ್ಟೇನು ಗಭೀರ ಸ್ವರೂಪದ್ದಾಗಿಲ್ಲವೆಂದು ನನಗೆ ತುಂಬಾ ಸಂತೋಷವಾಗಿದೆ. ಅವರು ಸರ್ಕಾರದ ಕಷ್ಟಗಳನ್ನು ಅರಿತಿರುವುದರಿಂದ ಅವರು ಈ ಸಂಬಂಧದಲ್ಲಿ ತುಂಬಾ ಸಹಾನುಭೂತಿಯುಳ್ಳವರಾಗಿದ್ದಾರೆಂಬುದು ನನಗೆ ಗೊತ್ತು. ಅನೇಕ ಪ್ರಕರಣಗಳಲ್ಲಿ ಅವರು ಕೂಡಾ ರಚನಾತ್ಮಕ ಟೀಕೆಗಳನ್ನು ಮಾಡಿದ್ದಾರೆ. ಎತ್ತಲಾದಂತಹ ಮುಖ್ಯ ಅಂಶಗಳು ಆಸ್ಪತ್ರೆಗಳಿಗೆ ಯಂತ್ರೋಪಕರಣಗಳನ್ನು ಸರಬರಾಜು ಮಾಡುವುದಕ್ಕೆ ಹಾಗೂ ಅನೇಕ ಆಸ್ಪತ್ರೆಗಳಲ್ಲಿ ಉತ್ತಮ ವೈದ್ಯರುಗಳ ಕೊರತೆಯಿರುವುದಕ್ಕೆ ಸಂಬಂಧಿಸಿದವುಗಳಾಗಿವೆ. ಅವರು ಮಾಡಿರುವ ಟೀಕೆ ಮತ್ತು ಸಲಹೆಗಳ ಹಿನ್ನೆಲೆಯಲ್ಲಿ, ಸರ್ಕಾರವು ಈ ಎಲ್ಲಾ ವಿಷಯಗಳನ್ನು ಪರಿಶೀಲಿಸುವುದೆಂದು ಮತ್ತು ಸಾಧ್ಯವಾದಷ್ಟು ಬೇಗ ಈ ವಿಷಯಗಳನ್ನು ಬಗೆಹರಿಸಲು ಪ್ರಯತ್ನಿಸುವುದೆಂದು ನಾನು ಭರವಸೆ ನೀಡುತ್ತೇನೆ. ನಾನು ಸಾರ್ವಜನಿಕರಿಂದ, ಜನ ಪ್ರತಿನಿಧಿಗಳಿಂದ ಸಂಬಂಧಪಟ್ಟ ಅಧಿಕಾರಿಗಳಿಂದ ಅಭಿಪ್ರಾಯಗಳನ್ನು ಸಂಗ್ರಹಿಸಲು ಪ್ರಯತ್ನಿಸುತ್ತಿದ್ದೇನೆ.

ಗ್ರಾಮೀಣ ವೈದ್ಯಕೀಯ ಸೇವೆಗೆ ಸಂಬಂಧಿಸಿದಂತೆ ಹೇಳುವುದಾದರೆ, ಗ್ರಾಮೀಣ ವೈದ್ಯಕೀಯ ಸೇವೆಗಳು ಸೂಕ್ತ ಸಮಯದಲ್ಲಿ ಜನರಿಗೆ ತಲುಪುತ್ತಿವೆಯೇ ಎಂಬುದನ್ನು ನೋಡಿಕೊಳ್ಳಲು ಎಲ್ಲಾ ರೀತಿಯ ಪ್ರಯತ್ನವನ್ನು ಮಾಡಲಾಗುವುದೆಂದು ನಾನು ಹೇಳಲಿಚ್ಛಿಸುತ್ತೇನೆ.

ಎತ್ತಲಾದಂತಹ ಮತ್ತೊಂದು ವಿಚಾರ ಎಂದರೆ, ವೈದ್ಯಕೀಯ ಶಿಕ್ಷಣಕ್ಕೆ ಸಂಬಂಧಪಟ್ಟಿದ್ದು. ನಾನು ಸರ್ಕಾರವು ಈ ಸಂಬಂಧದಲ್ಲಿ ಸ್ವಷ್ಟಮಟ್ಟಿಗೆ ತಿಳಿಕೆಯಿಂದ ಮತ್ತು ಜಾಗರೂಕತೆಯಿಂದ ಮುಂದಡಿಯಿಡಬೇಕಾಗುತ್ತದೆಂಬುದನ್ನು ಹೇಳಲಿಚ್ಛಿಸುತ್ತೇನೆ. ನಾನು ವೈದ್ಯಕೀಯ ಶಾಲೆಗಳ ಈ ವಿಷಯದ ಬಗ್ಗೆ ಹೆಚ್ಚು ಮಾತನಾಡಲು ನಾನು ಇಷ್ಟಪಡುವುದಿಲ್ಲ. ಆದರೆ, ಅದೇ ಸಮಯಕ್ಕೆ ನಾವು ಅಖಿಲ ಭಾರತ ವ್ಯವಸ್ಥೆಯೊಂದಿಗೆ ನಮ್ಮನ್ನು ಹೊಂದಾಣಿಕೆ ಮಾಡಿಕೊಳ್ಳಬೇಕಾದದ್ದು ತುಂಬಾ ಅಗತ್ಯವಾಗಿದೆ ಎಂಬುದನ್ನು ನಾನು ಹೇಳಲೇಬೇಕು. ಇಂದು ನಾವು ಈ ಸಂಬಂಧದಲ್ಲಿ ಅಖಿಲ ಭಾರತ ಮಾದರಿಯ ಮಟ್ಟಕ್ಕೆ ತಲಪಬೇಕು. ನಾವು ವೈದ್ಯಕೀಯ ಶಿಕ್ಷಣವನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ಯಲು ಶೀಘ್ರ ಪ್ರಯತ್ನವನ್ನು ಮಾಡಬೇಕು: ಏಕರೂಪ ಗುಣಮಟ್ಟದ ವೈದ್ಯಕೀಯ ಶಿಕ್ಷಣವನ್ನು ನೀಡಬೇಕು ಎಂಬುವನ್ನು ನಾನು ಒಪ್ಪಿಕೊಳ್ಳುತ್ತೇನೆ. ಭಾರತ ಸರ್ಕಾರ, ಭಾರತೀಯ ವೈದ್ಯಕೀಯ ಮಂಡಳಿ, ರಾಜ್ಯ ಸರ್ಕಾರಗಳು ಹಾಗೂ ವಿಶ್ವವಿದ್ಯಾಲಯಗಳು ಈ ಎಲ್ಲಾ ವಿಚಾರಗಳನ್ನು ಪರಿಶೀಲಿಸಿ ತೆಗೆದುಕೊಳ್ಳಬೇಕಾದ ಸರಿಯಾದ ಕ್ರಮೋಪಾಯವನ್ನು ಸೂಚಿಸಬೇಕೆಂದು ಈ ಸಂಬಂಧದಲ್ಲಿ ನಾನು ಕೂಡಾ ಉಲ್ಲೇಖಿಸುತ್ತೇನೆ.

ಆಮೇಲೆ ಮನಮುಟ್ಟಿದಂತಹ ಇನ್ನೊಂದು ವಿಚಾರವೆಂದ್ರೆ ಕಳೆದ 2½ ತಿಂಗಳುಗಳ ಅವಧಿಯಲ್ಲಿ ಮುಷ್ಕರದಲ್ಲಿದ್ದಂತಹ ಜೆ.ಸಿ.ಎ.ಎಂ. ವಿದ್ಯಾರ್ಥಿಗಳಿಗೆ ಸಂಬಂಧಪಟ್ಟಿರುವುದು. ತಮ್ಮನ್ನು ಏಕೀಕೃತ ಪದ್ಧತಿಯಲ್ಲಿ ಸೇರಿಸಿಕೊಳ್ಳಬೇಕೆಂಬುದು ಅವರ ಬೇಡಿಕೆಯಾಗಿದೆ. ಸಧ್ಯದ ಸ್ಥಿತಿಯಲ್ಲಿ ಅವರು ಅಸಾಧ್ಯವಾದುದು. ಆಯುರ್ವೇದ ವೈದ್ಯಕೀಯ ವೃತ್ತಿದಾರರ (ವೈದ್ಯರ) ವಿಧೇಯಕವು ಅಂಗೀಕಾರವಾಗಿದೆ ಮತ್ತು ವಿದ್ಯಾರ್ಥಿಗಳ ಪ್ರತಿನಿಧಿಗಳು ಆಯ್ಕೆ ಸಮಿತಿಗೆ ತಮ್ಮ ಪ್ರಕರಣವನ್ನು ನಿವೇದಿಸಿದ್ದಾರೆ ಎಂಬುದು ನಿಮಗೆ ಗೊತ್ತಿದೆ. ಆಯ್ಕೆ ಸಮಿತಿಯ ಕೂಡ ಇದೊಂದು ಏಕೀಕೃತ ಪದ್ಧತಿಯಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟಿದ್ದರಿಂದ ತರುವಾಯ ವಿಧೇಯಕವನ್ನು ಅಂಗೀಕರಿಸಲಾಯಿತು. ಈಗ, ಆಯುರ್ವೇದ ಮಂಡಳಿಯನ್ನು ರಚಿಸಬೇಕಾಗಿದೆ ಮತ್ತು ನಾವು ಈ ಮಂಡಳಿಯನ್ನು ರಚಿಸಿದ ಕೂಡಲೇ ಈ ಮಂಡಳಿಯು ಸಹಾನುಭೂತಿಯುಳ್ಳ ಪರಿಶೀಲನೆಗಾಗಿ ತಮ್ಮ ಮನವಿಯನ್ನು ಸಲ್ಲಿಸುತ್ತೇವೆ. ಈ ಹಂತದಲ್ಲಿ ಸರ್ಕಾರವು ನಿರ್ಣಯ ತೆಗೆದುಕೊಳ್ಳಲಿಕ್ಕಾಗುವುದಿಲ್ಲ ಮತ್ತು ತಮ್ಮ ನ್ಯಾಯಸಮ್ಮತವಾದ ಮನವಿಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಸರ್ಕಾರವು ಅವುಗಳನ್ನು ಸಹಾನುಭೂತಿಯಿಂದ ಪರಿಶೀಲಿಸುವುದೆಂದು ಭರವಸೆ ನೀಡುತ್ತೇನೆ ಮತ್ತು ಮುಷ್ಕರವನ್ನು ಹಿಂತೆಗೆದುಕೊಂಡು ಉತ್ತಮ ವಾತಾವರಣವನ್ನು ಸೃಷ್ಟಿ ಮಾಡುವಂತೆ ಅವರಿಗೆ ಕೋರುತ್ತೇನೆ.

ಕೆಲವು ದಿವಸಗಳ ಹಿಂದೆ ತುಮಕೂರು ಆಸ್ಪತ್ರೆಯಲ್ಲಿ ನಡೆದ ಘಟನೆಯ ಬಗ್ಗೆ ನನ್ನ ಸ್ನೇಹಿತರಾದ ಶ್ರೀ ಮುಕ್ಕಣ್ಣಪ್ಪನವರು ಉಲ್ಲೇಖಿಸಿದರು. ಪ್ರಕರಣದ ವಾಸ್ತವಾಂಶಗಳೇನೆಂದರೆ ಒಬ್ಬ ಹೆಂಗಸು 22ನೇ ತಾರೀಖು ಬೆಳಗಿನಜಾವ 3 ಗಂಟೆಗೆ ತುಮಕೂರು ಆಸ್ಪತ್ರೆಗೆ ದಾಖಲಾಗಿದ್ದಾಳೆ. ಆಕೆಯನ್ನು ಮಹಿಳಾ ವೈದ್ಯರು ಉಪಚರಿಸಿದ್ದಾರೆ. ಜಿಲ್ಲಾ ವೈದ್ಯಾಧಿಕಾರಿ(ಡಿ.ಎಂ.ಒ.)ಯವರೊಡನೆ ಕೂಡಾ ಸಮಾಲೋಚನೆ ನಡೆಸಿದ್ದಾರೆ ಮತ್ತು ಅವರು ಇನ್ನೊಂದು ಕರ್ತವ್ಯದ ನಿಮಿತ್ತ ಆ ಸ್ಥಳದಿಂದ ಹೊರಟರುತ್ತಾರೆ. ತದನಂತರ, ಮಹಿಳಾ ವೈದ್ಯರಿಗೆ ಶಸ್ತ್ರಚಿಕಿತ್ಸೆಯನ್ನು ನಡೆಸುವುದು ಕಷ್ಟವೆಂದು ಕಂಡುಬಂದಿದೆ ಮತ್ತು ಆ ಹಂತದಲ್ಲಿ ಪತ್ರಿಕಾ ಪ್ರತಿನಿಧಿಗಳು ಈ ವಿಚಾರವನ್ನು ಡಿ.ಎಂ.ಎಸ್. ಅವರಿಗೆ ತಿಳಿಸಿದ್ದಾರೆ ಮತ್ತು ಡಿ.ಎಂ.ಎಸ್. ಕೂಡಲೇ ಕ್ರಮವನ್ನು ತೆಗೆದುಕೊಂಡಿದ್ದಾರೆ ಹಾಗೂ ತಜ್ಞರ ನೆರವನ್ನು ನೀಡಲಾಯಿತು. ತಜ್ಞ ಮಹಿಳಾ ವೈದ್ಯರನ್ನು ಇತರ ಸಹಾಯಕರೊಂದಿಗೆ ಸ್ಥಳಕ್ಕೆ ಕಳುಹಿಸಿ ಶಸ್ತ್ರಚಿಕಿತ್ಸೆಯನ್ನು ನೆರವೇರಿಸಲಾಯಿತು. ರೋಗಿಯ ಜೀವವನ್ನು ರಕ್ಷಿಸಲಾಯಿತು ಎಂದು ಹೇಳಲಿಕ್ಕೆ ನನಗೆ ಸಂತೋಷವಾಗುತ್ತದೆ. 24ನೇ ತಾರೀಖು ಆ ರೋಗಿಯನ್ನು ವಾಣಿ ವಿಲಾಸ ಆಸ್ಪತ್ರೆಗೆ ತರಲಾಯಿತು ಮತ್ತು ನಾನು ಆಗಿನಿಂದಲೂ ಪ್ರಗತಿಯ ವರದಿಗಳನ್ನು ಪಡೆಯುತ್ತಿದ್ದೇನೆ. ಸೂಕ್ತ ಸಮಯದಲ್ಲಿ ಸರಿಯಾದ ಮಾಹಿತಿಯನ್ನು ನೀಡಿದ್ದಕ್ಕಾಗಿ ನಾನು ಪತ್ರಿಕಾ ಪ್ರತಿನಿಧಿಗಳಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ ಮತ್ತು ಸೂಕ್ತ ಸಮಯದಲ್ಲಿ ತ್ವರಿತ ಕ್ರಮವನ್ನು ತೆಗೆದುಕೊಂಡಿದ್ದಕ್ಕಾಗಿ ಸರ್ಕಾರಿ ನೌಕರರು ಮತ್ತು ಅಧಿಕಾರಿಗಳಿಗೆ ನಾನು ವಂದನೆ ಸಲ್ಲಿಸುತ್ತೇನೆ. ನಾವು ತ್ವರಿತ ಕ್ರಮವನ್ನು ತೆಗೆದುಕೊಂಡಿದ್ದಕ್ಕಾಗಿ ಡಿ.ಎಂ.ಎಸ್. ಮತ್ತು ಇತರ ವೈದ್ಯರುಗಳಿಗೆ ಕೂಡಾ ಧನ್ಯವಾದಗಳನ್ನು ಅರ್ಪಿಸಲೇಬೇಕು. ಹೆಂಗಸಿನ ಜೀವವನ್ನು ರಕ್ಷಿಸಲಾಗಿದೆ.

**ಶ್ರೀ ಎಸ್. ಗೋಪಾಲಗೌಡ (ತೀರ್ಥಹಳ್ಳಿ):** ಮಾನ್ಯರೇ, ಸ್ಪಷ್ಟೀಕರಣದ ಬಗ್ಗೆ. ಮಾನ್ಯ ಮಂತ್ರಿಗಳು, ಇಂಥ ಒಂದು ಸುದ್ದಿಯನ್ನು ಪತ್ರಿಕಾ ವರದಿಗಾರರು ವೈದ್ಯ ಇಲಾಖೆಯ ಮುಖ್ಯಾಧಿಕಾರಿಗಳಿಗೆ ಬಹಳ ಉಪಕಾರ ಮಾಡಿದರು; ಅವರಿಗೆ ಧನ್ಯವಾದಗಳು ಸಲ್ಲಿಸಬೇಕಾಗಿವೆ ಎಂದು ಹೇಳಿದರು. ಹಾಗಾದರೆ ಮೊದಲೇ ಆ ಕೆಲಸದಲ್ಲಿ ನಿರತರಾಗಿದ್ದ ಲೇಡಿ ಡಾಕ್ಟರು ಮತ್ತು ಇತರರಿಗೆ ಹೀಗೆ ಮಾಡಬೇಕೆಂದು ಹೊಳೆಯಲಿಲ್ಲವೆ? ಯಾವಾಗ ಆ ಕೆಲಸ ತಮ್ಮಿಂದ ಸಾಧ್ಯವಿಲ್ಲವೆಂಬುದು ತಿಳಿಯಿತೋ ಆಗ ಅವರೇ ಏಕೆ ಮೇಲ್ಪಟ್ಟವ^ ೀ ಿಳಿಸಲಿಲ್ಲ?

**ಶ್ರೀ ಕೆ. ನಾಗಪ್ಪ ಆಳ್ವ:** ಡಿ.ಎಂ.ಎಸ್.ರವರಿಂದ ಸಹ ವರದಿಯನ್ನು ಪಡೆಯಲಾಗಿದೆ ಮತ್ತು ಈ ಸಂಬಂಧದಲ್ಲಿ ಇನ್ನೂ ಹೆಚ್ಚಿನ ಮಾಹಿ.ಿ.ಾ. ವರದಿಯನ್ನು ಕೇಳಲಾಗಿದ್ದು ಆ ವರದಿಯಲ್ಲಿ ಕೆಲವು ವಿಚಾರಗಳನ್ನು ಸ್ಪಷ್ಟವಾಗಲಿವೆ

ಮತ್ತು ಯಾವುದೇ ಅಜಾಗರೂಕತೆ ಇದ್ದಲ್ಲಿ, ಈ ವಿಷಯದಲ್ಲಿ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದೆಂದು ನಾನು ಹೇಳಬಯಸುತ್ತೇನೆ.

ಈ ಮಾತುಗಳೊಂದಿಗೆ, ನಾನು, ಆಡಳಿತವನ್ನು ಎಲ್ಲಾ ವಿಧದಲ್ಲೂ ಚುರುಕುಗೊಳ್ಳುವಂತೆ ಮತ್ತು ನಾವು ಎಲ್ಲಾ ರೀತಿಯಲ್ಲೂ, ಅದರಲ್ಲೂ ನಿರ್ದಿಷ್ಟವಾಗಿ ಅವರ ಆರೋಗ್ಯಕ್ಕೆ ಸಂಬಂಧಿಸಿದಂತೆ ಜನರಿಗೆ ಸೇವೆ ಸಲ್ಲಿಸಬಹುದಾದ ಹಾಗೆ ಆಡಳಿತವು ಉತ್ತಮ ಮತ್ತು ದಕ್ಷಗೊಳ್ಳುವಂತೆ ನೋಡಿಕೊಳ್ಳಲು ನನ್ನ ಕರ್ತವ್ಯಗಳನ್ನು ನಿಭಾಯಿಸಲಿಕ್ಕೆ ತಮ್ಮ ಸಂಪೂರ್ಣ ಸಹಕಾರವನ್ನು ನೀಡುವಂತೆ ಮಾನ್ಯ ಸಭಾಧ್ಯಕ್ಷರ ಮುಖಾಂತರ ಈ ಗೌರವಾನ್ವಿತ ಸದನದ ಸದಸ್ಯರಿಗೆ ಮನವಿ ಮಾಡುತ್ತೇನೆ. ಧನ್ಯವಾದಗಳು.

**ಶ್ರೀ ಎಸ್. ಗೋಪಾಲಗೌಡ** : ಮೆಡಿಕಲ್ಲಿಗೆ ಸಂಬಂಧಪಟ್ಟ ಹಾಗೆ ನನ್ನ ಭಾಷಣದಲ್ಲಿ ಎಮ್.ಎಸ್ ಮತ್ತು ಎಂ.ಡಿ. ರಿಸರ್ಚ್ ಕ್ಲಾಸ್ ತೆಗೆದಿದ್ದ ಬಗ್ಗೆ ನನ್ನ ಆಕ್ಷೇಪಣೆಗಳು ಇದ್ದವು. ಅದರ ಬಗ್ಗೆ ಮಾನ್ಯ ಸಚಿವರು ಏನೂ ಉತ್ತರ ಕೊಟ್ಟಂತೆ ಕಾಣುವುದಿಲ್ಲ.

**ಶ್ರೀ ಕೆ ನಾಗಪ್ಪ ಆಳ್ವ**: ಅದನ್ನು ಪರಿಗಣಿಸಲಾಗುವುದು.

**ಶ್ರೀ ಗಂಗಾಧರ ನಾಮೋಷಿ (ಗುಲ್ಬರ್ಗ)** : ಮೆಡಿಕಲ್ ಆಯುರ್ವೇದ ಕಾಲೇಜ್ ಸಂಪಿನ ಬಗ್ಗೆ ಸಲುವಾಗಿ ಎಷ್ಟು ದಿವಸಗಳಲ್ಲಿ taiga ಮಾಡುತ್ತೀರಿ? ತಾವು ಡಾಕ್ಟರಿದ್ದೀರಿ. ಆ ಬಗ್ಗೆ ತಮ್ಮ ಅಭಿಪ್ರಾಯ ಹೇಳಬೇಕು.

**ಶ್ರೀ ಕೆ. ನಾಗಪ್ಪ ಆಳ್ವ** : ನನ್ನ ಅಭಿಪ್ರಾಯವನ್ನು ಇಷ್ಟರಲ್ಲೇ ಸ್ಪಷ್ಟ ಮಾಡುತ್ತೇನೆ. ಈಗ ಸರ್ಕಾರ ಯಾವ ಒಂದು ತೀರ್ಮಾನಕ್ಕೂ ಬರಲಿಕ್ಕೆ ಸಾಧ್ಯವಿಲ್ಲ. ಅದಕ್ಕೆ ಸಂಬಂಧಪಟ್ಟ ಬಿಲ್ ಚರ್ಚೆಯಾಗುವ ಸಂದರ್ಭದಲ್ಲಿ ಕೂಡ ಅವರ ಬೇಡಿಕೆಗಳನ್ನು ಕಮಿಟಿ ಮುಂದೆ ಇಟ್ಟರೂ ಕೂಡ ಆ ಸಮಯದಲ್ಲಿ ಆಯುರ್ವೇದವನ್ನು ಮಾತ್ರ ಪ್ರಾಕ್ಟೀಸ್ ಮಾಡಬೇಕು ಎಂದು ಅಭಿಪ್ರಾಯವನ್ನು ಕೊಟ್ಟ ಪ್ರಕಾರ ಆ ಬಿಲ್ ಪಾಸಾಗಿದೆ. ಬೋರ್ಡು ಸಧ್ಯದಲ್ಲಿಯೇ ಆಗುತ್ತದೆ. ಬೋರ್ಡಿಗೆ ಈ ವಿಚಾರವನ್ನು ರೆಫರ್ ಮಾಡಿದ ನಂತರ ಇಂಟಿಗ್ರೇಡ್ ಸಿಸ್ಟಮ್ ಕೂಡಿಸಬೇಕೇ? ಇಲ್ಲವೇ? ಎನ್ನುವ ವಿಚಾರದಲ್ಲಿ ಬೋರ್ಡು ಅಭಿಪ್ರಾಯ ಕೊಡಬೇಕು. ಈ ಮಧ್ಯೆ ಅವರ ಕೇಳಿಕೆಗಳ ವಿಷಯದಲ್ಲಿ ಸರ್ಕಾರ ಸೂಕ್ತ ಆಲೋಚನೆ ಮಾಡುತ್ತದೆ ಎಂಬುದಾಗಿ ಮಾತ್ರ ಈ ಸಂದರ್ಭದಲ್ಲಿ ಹೇಳಬಹುದು. ಆದ್ದರಿಂದ ಅವರು ಸ್ಟ್ರೈಕ್ ವಿತ್‌ಡ್ರಾ ಮಾಡುವುದು ಒಳ್ಳೆಯದು ಮತ್ತು ನ್ಯಾಯ ಎಂದು ಹೇಳುತ್ತೇನೆ.

# ಆಯವ್ಯಯ ಬೇಡಿಕೆಗಳ ಮೇಲಿನ ಚರ್ಚೆ–1962–63
## ಸಚಿವರ ಉತ್ತರ

**18ನೇ ಜುಲೈ 1962**

ವೈದ್ಯಕೀಯ ಇಲಾಖಾ ಬೇಡಿಕೆಗಳ ಮೇಲೆ ನಡೆದ ಚರ್ಚೆಗೆ ಸನ್ಮಾನ್ಯ ಆರೋಗ್ಯ ಸಚಿವರಾದ ಡಾ॥ ನಾಗಪ್ಪ ಆಳ್ವರು ಉತ್ತರಿಸುತ್ತಾ, ಜನಸಂಖ್ಯೆ ಏರಿಕೆಯ ಪ್ರಮಾಣ ನಗರ ಪ್ರದೇಶದಲ್ಲಿ ಜಾಸ್ತಿಯಾಗುತ್ತಿದೆಯೆಂದು ತಿಳಿಸುತ್ತಾ, ಮರಣದ ಪ್ರಮಾಣ ಕಡಿಮೆಯಾಗಿದೆ ಎಂದರು. ಕುಟುಂಬ ಯೋಜನೆಯನ್ನು ಜಾರಿಗೆ ತರದೇ ಹೋದರೆ ಸಾರ್ವಜನಿಕರಿಗೆ ವೈದ್ಯಕೀಯ ಸೌಲಭ್ಯಗಳನ್ನು ನೀಡಲು ಅಸಾಧ್ಯವೆಂದು ಅಭಿಪ್ರಾಯಪಟ್ಟರು.

### ಕುಟುಂಬ ಯೋಜನೆ ಜಾರಿಗೆ ಕ್ರಮ

**ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು):** ಸ್ವಾಮಿ, ಮೈಸೂರು ರಾಜ್ಯಪಾಲರ ಶಿಫಾರಸ್ಸಿನ ಮೇಲೆ, ನಾನು ಈ ಬೇಡಿಕೆಯನ್ನು ಮಂಡಿಸಲು ಅನುಮತಿ ಕೋರುತ್ತೇನೆ.

"ವೈದ್ಯಕೀಯ ಸಂಬಂಧದಲ್ಲಿ 31ನೇ ಮಾರ್ಚ್ 1963ಕ್ಕೆ ಮುಕ್ತಾಯಗೊಳ್ಳುವ ಅವಧಿಗಾಗಿನ ಹಣಕಾಸು ವರ್ಷದಲ್ಲಿ ಸಂದಾಯದ ಕ್ರಮದಲ್ಲಿ ಬರುವಂತಹ ವೆಚ್ಚಗಳನ್ನು ಭರಿಸಲು ಸರ್ಕಾರಕ್ಕೆ 3,32,01,00 ರೂ.ಗಳನ್ನು ಮೀರದಿರುವ ಮೊಬಲಗನ್ನು ಮಂಜೂರು ಮಾಡಬೇಕು.

ಸ್ವಾಮಿ, ಮಾನ್ಯ ಸದಸ್ಯರು ಅತ್ಯುತ್ತಮವಾದ ಮತ್ತು ರಚನಾತ್ಮಕವಾದ ಸಲಹೆಗಳನ್ನು ಮಾಡಿರುವುದಕ್ಕೆ ನನಗೆ ತುಂಬಾ ಸಂತೋಷವಾಗಿದೆ. ಟೀಕೆಗಳು ಸಹ ಇವೆ. ಅವುಗಳ ಬಗ್ಗೆ ಕೂಡ ನನಗೆ ಸಂತೋಷವಿದೆ. ವಾಸ್ತವ ಸಂಗತಿಗಳ ಆಧಾರದ ಮೇಲೆ ಸದನದಲ್ಲಿ ಮಾಡಲಾದ ಟೀಕೆಗಳು ಸ್ವಾಗತಾರ್ಹವಾದವುಗಳು ಮಾತ್ರವಾಗಿರದೆ ನಾವು ಎಲ್ಲಿ ತಪ್ಪಿದ್ದೇವೆ, ಸಂಸ್ಥೆಗಳಲ್ಲಿ ಯಾವ ರೀತಿಯ ನ್ಯೂನತೆಗಳಿವೆ ಅಥವಾ ದೋಷಗಳಿವೆ, ಈ ಸಂಸ್ಥೆಗಳನ್ನು ನಡೆಸುತ್ತಿರುವಂತಹ ಸಿಬ್ಬಂದಿಯ ದೋಷಗಳಾವುವು, ಇತ್ಯಾದಿ ಇತ್ಯಾದಿಗಳನ್ನು ತಿಳಿದುಕೊಳ್ಳಲು ಸರ್ಕಾರದ ಕೈಗಳನ್ನು ಕೂಡ ಬಲಪಡಿಸುತ್ತವೆ.

ಜನರು ಆರೋಗ್ಯ ಪ್ರಜ್ಞೆಯನ್ನು ಬೆಳೆಸಿಕೊಂಡಿದ್ದಾರೆ. ಇದೊಂದು ಅತ್ಯುತ್ತಮವಾದ ಲಕ್ಷಣ. ಜನಸಂಖ್ಯೆಯು ಸಹಜವಾಗಿ ಹೆಚ್ಚುತ್ತಿದೆ. ಅದರಲ್ಲೂ

ಪಟ್ಟಣಗಳಲ್ಲಿ ಅಧಿಕ ಪ್ರಮಾಣದಲ್ಲಿ ಬೆಳೆಯುತ್ತಿದೆ. ಹೊರ ರೋಗಿಗಳ ವಿಭಾಗದಲ್ಲಿ ಮಾತ್ರ ಮಿತಿಮೀರಿದ ರೋಗಿಗಳಿರದೆ ಆಸ್ಪತ್ರೆಯ ಒಳಗಡೆಯೂ ಕೂಡ ಮಿತಿಮೀರಿದ ರೋಗಿಗಳಿದ್ದಾರೆ. ಕಳೆದ 15 ವರ್ಷಗಳ ಅವಧಿಯಲ್ಲಿ, ಇದು 30ರಿಂದ 46ಕ್ಕೆ ಏರಿದೆ. ಮರಣ ಪ್ರಮಾಣವು ಇಳಿಮುಖವಾಗಿದೆ. ಶಿಶು ಮರಣ ಪ್ರಮಾಣ ಹಾಗೂ ತಾಯಂದಿರ ಮರಣ ಪ್ರಮಾಣವು ಕೂಡ ಇಳಿಮುಖವಾಗಿದೆ. ಆದರೆ ಜನನ ಪ್ರಮಾಣದಲ್ಲಿ, ಹೆಚ್ಚಳವಾಗಿದೆ. ಇವೆಲ್ಲವೂ ಜನಸಂಖ್ಯೆಯ ಹೆಚ್ಚಳಕ್ಕೆ ಕೊಡುಗೆ ನೀಡಿವೆ. ಜನಸಂಖ್ಯೆಯನ್ನು ನಿಯಂತ್ರಿಸದ ಹೊರತು ಮತ್ತು ಜನಸಂಖ್ಯೆಯ ನಿಯಂತ್ರಣದ ಸಲುವಾಗಿ ಕುಟುಂಬ ಯೋಜನೆಗೆ ಯುಕ್ತವಾದಂಥ ಪ್ರಾಮುಖ್ಯತೆಯನ್ನು ನೀಡದ ಹೊರತು, ನಾವು ಜನರಿಗೆ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುವ ಸಮಸ್ಯೆಯನ್ನು ಬಗೆಹರಿಸುವ ಸ್ಥಿತಿಯಲ್ಲಿರುವುದಿಲ್ಲ. ಅಲ್ಲದೆ, ಗರ್ಭಧಾರಣೆಯು ನೇರವಾಗಿ ಒಡೆತನಕ್ಕೆ ಪ್ರಮಾಣಾನುಸಾರವಾಗಿದೆ ಎಂಬುದು ಚೆನ್ನಾಗಿ ತಿಳಿದಿರುವುದರಿಂದ ಜನರಿಗೆ ಹೆಚ್ಚಿನ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುವುದು ಕಷ್ಟ ಸಾಧ್ಯ. ಬಡ ಜನರು ಹೆಚ್ಚು ಮಕ್ಕಳನ್ನು ಪಡೆಯುತ್ತಿದ್ದಾರೆ. ಬಡ ಜನರು ವಾಸಿಸುವಂತಹ ಕೊಳಚೆ ಪ್ರದೇಶಗಳಲ್ಲಿ ಹಾಗೂ ಹೆಚ್ಚಿನ ಜನದಟ್ಟಣೆಯ ಸ್ಥಳಗಳಲ್ಲಿ ಸಾಕಷ್ಟು ಸಂಖ್ಯೆಯ ಮಕ್ಕಳು ವಾಸಿಸುತ್ತಿದ್ದಾರೆ. ಈ ಮಕ್ಕಳು ಬಂದಿರುವಂತಹ, ವಾಸಿಸುತ್ತಿರುವಂತಹ ಮತ್ತು ಬೆಳೆಯುತ್ತಿರುವಂತಹ ಪರಿಸ್ಥಿತಿಗಳು ನಿಜವಾಗಲೂ ನೋವುಂಟು ಮಾಡುತ್ತವೆ. ಈ ಬಗ್ಗೆ ಇಷ್ಟು ಹೇಳಿ ಸಾಮಾನ್ಯ ಟೀಕೆ–ಟಿಪ್ಪಣಿಗಳ ಕುರಿತು ನಾನು ನಂತರದ ಹಂತದಲ್ಲಿ ಅವುಗಳ ಬಗ್ಗೆ ಮಾತನಾಡಲಿಚ್ಛಿಸುತ್ತೇನೆ.

## ಆಯುರ್ವೇದ ಪದ್ಧತಿಯ ಅಭಿವೃದ್ಧಿ

ಆಯರ್ವೇದ ಪದ್ಧತಿಯ ನಿರ್ಲಕ್ಷ್ಯತೆಯ ಬಗ್ಗೆ ಮಾನ್ಯ ಸದಸ್ಯರು ಮಾಡಿದ ಟೀಕೆಗೆ ಸ್ಪಂದಿಸುತ್ತಾ, ಸಂಶೋಧನೆ ಇಲ್ಲದ ಯಾವುದೇ ವೈದ್ಯಕೀಯ ಪದ್ಧತಿಯು ಪ್ರಗತಿ ಕಾಣುವುದಿಲ್ಲವೆಂದು ಹೇಳಿದರು. ಈ ನಿಟ್ಟಿನಲ್ಲಿ ಒಂದು ಸಂಶೋಧನಾ ಮಂಡಳಿ ರಚಿಸಲಾಗಿದೆ. ವೈದ್ಯಕೀಯ ಸಚಿವರ ಸಮ್ಮೇಳನದಲ್ಲಿ ಆಯುರ್ವೇದ ಪದ್ಧತಿಯನ್ನು ಎಲ್ಲಾ ರಾಜ್ಯಗಳಲ್ಲೂ ಅಭಿವೃದ್ಧಿಪಡಿಸಬೇಕೆಂದು ಅಭಿಪ್ರಾಯ ಮೂಡಿದೆ ಎಂದು ತಿಳಿಸಿ, ಒಬ್ಬ ವೈದ್ಯ ಸಫಲನಾಗಲು ಆಧುನಿಕ ವೈದ್ಯ ಪದ್ಧತಿಯ ಬಗ್ಗೆಯೂ ಕೂಡ ಜ್ಞಾನವಿರಬೇಕೆಂದು ಹೇಳಿದರು.

ಆಯುರ್ವೇದ ಔಷಧಿಗಳ ಕೊರತೆ ನೀಗಿಸಲು ಆಯವ್ಯಯದಲ್ಲಿ ಹೆಚ್ಚಿನ ಅನುದಾನ ನೀಡುವ ಆಶ್ವಾಸನೆಯಿತ್ತರು. ವೈದ್ಯಕೀಯ ಮಹಾವಿದ್ಯಾಲಯಕ್ಕೆ ಹಿಂದುಳಿದ ಹಾಗೂ ಮಲೆನಾಡು ಪ್ರದೇಶದ ವಿದ್ಯಾರ್ಥಿಗಳಿಗೆ ಹೆಚ್ಚು ಪ್ರವೇಶಾವಕಾಶ ಕಲ್ಪಿಸಿಕೊಡಬೇಕೆಂಬ ಸಲಹೆಗೆ ತಮ್ಮ ಸಮ್ಮತಿ ನೀಡುತ್ತಾ, ಆಸ್ಪತ್ರೆಗಳಲ್ಲಿ ಉಂಟಾಗಿರುವ ಸಿಬ್ಬಂದಿ ಕೊರತೆಯನ್ನು ನಿವಾರಿಸಲು ಸಾಧ್ಯವಾಗಿಲ್ಲದಿರುವುದಕ್ಕೆ ಖೇದ ವ್ಯಕ್ತಪಡಿಸಿದರು. ದಾದಿಗಳಿಗೆ ಮತ್ತು ಎಲ್.ಎ.ಎಂ.ಎಸ್. ವೈದ್ಯರುಗಳಿಗೆ ನೀಡುತ್ತಿರುವ ಸಂಬಳವನ್ನು ಹೆಚ್ಚಿಸುವ ಕುರಿತಂತೆ ಸರ್ಕಾರ ಪರಿಶೀಲಿಸುತ್ತದೆ ಎಂದು ತಿಳಿಸಿದರು.

ಟೀಕೆಗಳು ಅಥವಾ ಸಲಹೆಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ ಸಾಕಷ್ಟುಮಟ್ಟಿಗೆ ಸಮಾವ್ಯಾಪ್ತಿಯನ್ನು ಹೊಂದಿರುವಂತಹ ಟೀಕೆಗಳು ಮತ್ತು ಹೇಳಿಕೆಗಳಿವೆ ಮತ್ತು ವಿಷಯಗಳನ್ನು ಸದಸ್ಯರು ಮತ್ತೆ ಮತ್ತೆ ಉಲ್ಲೇಖಿಸಿದ್ದಾರೆ. ಹಾಗಾಗಿ, ಅಲ್ಲಲ್ಲಿ, ಮಾತನಾಡಿರತಕ್ಕ ಕೆಲವು ಅಂಶಗಳಿದ್ದು, ಅವುಗಳೆಲ್ಲಕ್ಕೂ ಸಮಜಾಯಿ ನೀಡಲು ನಾನು ಪ್ರಯತ್ನಿಸುತ್ತೇನೆ. ಡಾ॥ ಸಂಜೀವಂತ್‌ರವರು ಆಯುರ್ವೇದ ಪದ್ಧತಿಯ ನಿರ್ಲಕ್ಷ್ಯದ ಬಗ್ಗೆ ಉಲ್ಲೇಖವನ್ನು ಮಾಡಿದ್ದಾರೆ. ಇದಕ್ಕಾಗಿ ಆಯುರ್ವೇದ ಪದ್ಧತಿಯ ಅಗ್ರಗಣ್ಯರಾಗಿರುವಂತಹ ಅಥವಾ ಸರಿಯಾದ ತಿಳಿವಳಿಕೆಯನ್ನು ಹೊಂದಿರದ ಆಯುರ್ವೇದ ಪದ್ಧತಿಗಳ ವಿವಿಧ ವಿಭಾಗಗಳಲ್ಲಿ ವೃತ್ತಿಯನ್ನು ಮಾಡುತ್ತಿರುವಂತಹ ವ್ಯಕ್ತಿಗಳು ಸ್ವಲ್ಪಮಟ್ಟಿಗೆ ಹೆಚ್ಚಿನ ಹೊಣೆಗಾರರಾಗಿರುತ್ತಾರೆ. ಇದು, ನಾನು ರಾಜ್ಯ ಭಾರತೀಯ ವೈದ್ಯಕೀಯ ಮಂಡಳಿಯಲ್ಲಿ ಸೇವೆ ಸಲ್ಲಿಸಲು ಅವಕಾಶ ಪಡೆದ ಕಳೆದ ಐದು ವರ್ಷಗಳ ಅವಧಿಯಲ್ಲಿನ ನನ್ನ ಅನುಭವ ಸುದ್ಧ ಆಯುರ್ವೇದ ಮತ್ತು ಸಮಗ್ರ ಪದ್ಧತಿಗಳನ್ನು ಕುರಿತು ಎಲ್ಲಾ ತೆರನಾದ ಚರ್ಚೆಗಳು ನಡೆದಿವೆ ಮತ್ತು ಒಂದು ವೈದ್ಯಕೀಯ ಪದ್ಧತಿ ಹಾಗೂ ವಿಭಾಗವೂ ಆಧುನಿಕ ವಿಜ್ಞಾನ ಅಥವಾ ಆಧುನಿಕ ವೈದ್ಯಕೀಯ ವಿಜ್ಞಾನದಡಿ ಸಂಶೋಧನೆಗೆ ಒಪ್ಪುವುದೇ ಇಲ್ಲ. ಯಾವುದೇ ವೈದ್ಯಕೀಯ ಪದ್ಧತಿಯು ಸಂಶೋಧನೆ ಇಲ್ಲದಿದ್ದ ಹೊರತು ಪ್ರಗತಿ ಕಾಣಲು ಸಾಧ್ಯವಿಲ್ಲ. ಈ ಎಲ್ಲ ವಿಚಾರಗಳನ್ನು ಪರಿಗಣಿಸಿ ಸಂಶೋಧನಾ ಮಂಡಳಿಯನ್ನು ರಚಿಸಲಾಗಿದೆ. ಆದರೆ ಇಡೀ ರಾಷ್ಟ್ರದಾದ್ಯಂತ ಈ ಹೋರಾಟದ ಬಗೆಗಿನ ಈ ಭಿನ್ನಾಭಿಪ್ರಾಯವು ಮುಂದುವರಿದಿದೆ ಮತ್ತು ಇವತ್ತಿಗೂ ಕೇಂದ್ರ ಸರ್ಕಾರ ಕೂಡ ಈ ಸಮಸ್ಯೆಯನ್ನು ಬಗೆಹರಿಸಿಲ್ಲ. ಕೇಂದ್ರ ಸರ್ಕಾರವು ಸಂಶೋಧನೆ ಸಹಿತವಾದ ಆಯುರ್ವೇದವಿರುವಂತಹ ಒಂದು ಮಾನದಂಡವನ್ನು ಹೊಂದಿರಲು ಮತ್ತು ಗುಣಮಟ್ಟದ ಔಷಧ ವೈದ್ಯಶಾಸ್ತ್ರವುಳ್ಳ ಸರಿಯಾದ ಪಠ್ಯಕ್ರಮ ಹಾಗೂ ಆಧುನಿಕ ವಿಜ್ಞಾನದ ಪರಿಕರವುಳ್ಳ ಸಂಶೋಧನೆಯನ್ನು ಹೊಂದಿರಲು ನಿರ್ಧರಿಸಿದೆ. ಇತ್ತೀಚೆಗೆ ನಡೆದ ರಾಷ್ಟ್ರೀಯ ಸಮ್ಮೇಳನದಲ್ಲಿ,

ಆಯುರ್ವೇದ ಪದ್ಧತಿಯನ್ನು ಎಲ್ಲಾ ರಾಜ್ಯಗಳಲ್ಲಿ ಏಕರೂಪವಾಗಿ ಅಭಿವೃದ್ಧಿಪಡಿಸಬೇಕು ಮತ್ತು ಸಂಶೋಧನೆಯ ನಂತರ ಔಷಧಿಗಳನ್ನು ಸೇರಿಸಿಕೊಳ್ಳಬಹುದು ಮತ್ತು ವೈದ್ಯ ಒಬ್ಬ ಯಶಸ್ವಿ ವೈದ್ಯನಾಗುವ ಸಲುವಾಗಿ, ಆತನು ಆಧುನಿಕ ವೈದ್ಯಕೀಯ ಪದ್ಧತಿಯಲ್ಲಿ ಜ್ಞಾನವನ್ನು ಹೊಂದಿರಬೇಕು ಎಂಬುದನ್ನು ಬಹುತೇಕ ಎಲ್ಲರೂ ಒಪ್ಪಿಕೊಂಡರು. ಒಂದನ್ನೆ ನಾನು ನಿರ್ದಿಷ್ಟವಾಗಿ ಹೇಳಲಿಕ್ಕೋಗುವುದಿಲ್ಲ ಮತ್ತು ನಾನು ಆಲೋಪಥಿಕ್ ವೈದ್ಯಕೀಯ ಪದ್ಧತಿಯ ಪದವೀಧರನಾಗಿದ್ದು ಕೂಡ, ಆಧುನಿಕ ವೈದ್ಯಕೀಯ ಪದ್ಧತಿಯಲ್ಲಿ ವೈದ್ಯ ವೃತ್ತಿ ಮಾಡುತ್ತಿರುವ ವೈದ್ಯನೆಂದು ನನ್ನನ್ನು ನಾನೇ ಕರೆದುಕೊಳ್ಳಲಿಚ್ಛಿಸುತ್ತೇನೆಂದು ಹೇಳುವುದು ಸಹ ಒಳ್ಳೆಯದಲ್ಲ. ಅದೃಷ್ಟವಶಾತ್, ಬಹುತೇಕ ಎಲ್ಲಾ ಮಂಜೂಣಿಯಲ್ಲಿರುವ ಆಯುರ್ವೇದ ವೈದ್ಯರು ಸಹ ಸಂಶೋಧನಾ ಸೌಲಭ್ಯಗಳು ಮತ್ತು ಸ್ನಾತಕೋತ್ತರ ಅಧ್ಯಯನಗಳಿಗೆ ಹಾಗು ಆಧುನಿಕ ವೈದ್ಯಕೀಯ ಪದ್ಧತಿಯಂತ ಜ್ಞಾನದ ಬಗ್ಗೆ ಒಪ್ಪುತ್ತಾರೆ. ಆದರೆ ಒಂದು ವಿಚಾರದ ಬಗ್ಗೆ ಒಪ್ಪುತ್ತಾರೆ. ಆದರೆ ಒಂದು ವಿಚಾರದ ಬಗ್ಗೆ ಹೇಳುವುದಾದರೆ, ಈ ಕಾಲೇಜುಗಳು ಅಥವಾ ಶಾಲೆಗಳಿಂದ ಹೊರಬಂದಿರುವಂಥವರು ಮುಖ್ಯವಾಗಿ ಆಯುರ್ವೇದದಲ್ಲಿ ಮತ್ತು ಪರಿಮಿತ ಪ್ರಮಾಣದ ಮಟ್ಟಿಗೆ ಮಾತ್ರ ಆಲೋಪಥಿಕ್ ವೈದ್ಯಕೀಯ ಪದ್ಧತಿಯಲ್ಲಿ ವೈದ್ಯವೃತ್ತಿ ಮಾಡಬೇಕೆಂಬುದಕ್ಕೆ ಎಲ್ಲರು ಒಪ್ಪಿಕೊಂಡಿದ್ದಾರೆ. ಇದು ಬಹಳಷ್ಟು ಮಟ್ಟಿಗೆ ಸ್ಥಿತಿಯನ್ನು ಬಗೆಹರಿಸುವುದೆಂದು ಮತ್ತು ಈ ವ್ಯವಸ್ಥೆಯಿಂದ ನಾವು ಸಂಶೋಧನಾ ಕಾರ್ಯಕ್ರಮದೊಂದಿಗೆ ಈ ಸಂಸ್ಥೆಗಳನ್ನು ಕಟ್ಟಿ ಬೆಳೆಸುವುದರೊಂದಿಗೆ ಮುಂದಡಿಯಿಡುವ ಹಾಗೂ ಪೂರ್ಣ ಪ್ರಮಾಣದವರೆಗೆ ಕೇಂದ್ರ ಸರ್ಕಾರದಿಂದ ನೆರವನ್ನು ಪಡೆಯುವ ಮತ್ತು ಆಯುರ್ವೇದ, ಯುನಾನಿ ಹಾಗೂ ಇತರ ದೇಶೀಯ ವೈದ್ಯಕೀಯ ಪದ್ಧತಿಗಳಿಗಾಗಿ ಅದನ್ನು ಬಳಸಿಕೊಳ್ಳುವಂತೆ ಮಾಡುವ ಸ್ಥಿತಿಗೆ ತಲುಪುತ್ತೇವೆಂಬ ಭರವಸೆ ನನಗಿದೆ. ನಮ್ಮ ರಾಜ್ಯದಲ್ಲಿ, ನಾವು ಸಾಧ್ಯವಾದಷ್ಟುಮಟ್ಟಿಗೆ ಆಯುರ್ವೇದಕ್ಕೆ ಪ್ರೋತ್ಸಾಹ ನೀಡಬೇಕು. ಆಯುರ್ವೇದ ಮತ್ತು ಯುನಾನಿ ಹಾಗೂ ಹೋಮಿಯೋಪಥಿ ಮಂಡಳಿಗಳಿಗೆ ಸಂಬಂಧಿಸಿದ ವಿಧೇಯಕಗಳನ್ನು ಅಂಗೀಕರಿಸಲಾಗಿದ್ದು, ಅಧಿನಿಯಮಿಸಲಾಗಿದೆ. ಸಹಜವಾಗಿ, ಸ್ವಲ್ಪ ವಿಳಂಬವಾಗಿದೆ. ನಾವು, ಈ ಮಂಡಳಿಗಳ ರಚನೆಗಾಗಿ ಅಗತ್ಯವಿರುವ ಏರ್ಪಾಟುಗಳನ್ನು ಮಾಡಿದ್ದೇವೆ ಮತ್ತು ಆದಷ್ಟು ಬೇಗ ಅವುಗಳನ್ನು ರಚಿಸಲಾಗುವುದು.

ಆಯರ್ವೇದ ಪದ್ಧತಿಯ ನಿರ್ಲಕ್ಷ್ಯತೆಯ ಬಗ್ಗೆ ಮಾನ್ಯ ಸದಸ್ಯರು ಮಾಡಿದ ಟೀಕೆಗೆ ಸ್ಪಂದಿಸುತ್ತಾ, ಸಂಶೋಧನೆ ಇಲ್ಲದ ಯಾವುದೇ ವೈದ್ಯಕೀಯ ಪದ್ಧತಿಯು ಪ್ರಗತಿ ಕಾಣುವುದಿಲ್ಲವೆಂದು ಹೇಳಿದರು. ಈ ನಿಟ್ಟಿನಲ್ಲಿ ಒಂದು ಸಂಶೋಧನಾ

ಮಂಡಳಿ ರಚಿಸಲಾಗಿದೆ. ವೈದ್ಯಕೀಯ ಸಚಿವರ ಸಮ್ಮೇಳನದಲ್ಲಿ ಆಯುರ್ವೇದ ಪದ್ಧತಿಯನ್ನು ಎಲ್ಲಾ ರಾಜ್ಯಗಳಲ್ಲೂ ಅಭಿವೃದ್ಧಿಪಡಿಸಬೇಕೆಂದು ಅಭಿಪ್ರಾಯ ಮೂಡಿದೆ ಎಂದು ತಿಳಿಸಿ, ಒಬ್ಬ ವೈದ್ಯ ಸಫಲನಾಗಲು ಆಧುನಿಕ ವೈದ್ಯ ಪದ್ಧತಿಯ ಬಗ್ಗೆಯೂ ಕೂಡ ಜ್ಞಾನವಿರಬೇಕೆಂದು ಹೇಳಿದರು.

ಆಯುರ್ವೇದ ಔಷಧಿಗಳ ಕೊರತೆ ನೀಗಿಸಲು ಆಯವ್ಯಯದಲ್ಲಿ ಹೆಚ್ಚಿನ ಅನುದಾನ ನೀಡುವ ಆಶ್ವಾಸನೆಯಿತ್ತರು. ವೈದ್ಯಕೀಯ ಮಹಾವಿದ್ಯಾಲಯಕ್ಕೆ ಹಿಂದುಳಿದ ಹಾಗೂ ಮಲೆನಾಡು ಪ್ರದೇಶದ ವಿದ್ಯಾರ್ಥಿಗಳಿಗೆ ಹೆಚ್ಚು ಪ್ರವೇಶಾವಕಾಶ ಕಲ್ಪಿಸಿಕೊಡಬೇಕೆಂಬ ಸಲಹೆಗೆ ತಮ್ಮ ಸಮ್ಮತಿ ನೀಡುತ್ತಾ, ಆಸ್ಪತ್ರೆಗಳಲ್ಲಿ ಉಂಟಾಗಿರುವ ಸಿಬ್ಬಂದಿ ಕೊರತೆಯನ್ನು ನಿವಾರಿಸಲು ಸಾಧ್ಯವಾಗಿಲ್ಲದಿರುವುದಕ್ಕೆ ಖೇದ ವ್ಯಕ್ತಪಡಿಸಿದರು. ದಾದಿಗಳಿಗೆ ಮತ್ತು ಎಲ್.ಎ.ಎಂ.ಎಸ್. ವೈದ್ಯರುಗಳಿಗೆ ನೀಡುತ್ತಿರುವ ಸಂಬಳವನ್ನು ಹೆಚ್ಚಿಸುವ ಕುರಿತಂತೆ ಸರ್ಕಾರ ಪರಿಶೀಲಿಸುತ್ತದೆ ಎಂದು ತಿಳಿಸಿದರು.

## ಆಯುರ್ವೇದ ಪದ್ಧತಿ ಅಭಿವೃದ್ಧಿ

ಆಮೇಲೆ ಕೊಡಗಿನ ಶ್ರೀ ದೇವಯ್ಯ ಅವರು ವೈದ್ಯಕೀಯ ಕಾಲೇಜುಗಳಿಗೆ ಪ್ರವೇಶಕ್ಕಾಗಿ, ಹೆಚ್ಚು ವಿದ್ಯಾರ್ಥಿಗಳನ್ನು ಹಿಂದುಳಿದ ಮತ್ತು ಮಲೆನಾಡ ಪ್ರದೇಶಗಳಿಂದ ಆಯ್ಕೆ ಮಾಡಬೇಕೆಂದು ಸಲಹೆ ಮಾಡಿದರು. ಅವರು ಆಸ್ಪತ್ರೆಗಳಲ್ಲಿನ ಖಾಲಿ ಹುದ್ದೆಗಳ ಬಗ್ಗೆ ಕೂಡ ಮಾತನಾಡಿದ್ದಾರೆ. ಆಸ್ಪತ್ರೆಗಳಲ್ಲಿನ ಖಾಲಿ ಹುದ್ದೆಗಳಿಗೆ ಸಂಬಂಧಿಸಿದಂತೆ, ಸಾಮಾನ್ಯವಾಗಿ ಹೇಳುವುದಾದರೆ, ಇದು ವಾಸ್ತವ, ಇದನ್ನು ಎಲ್ಲರೂ ಒಪ್ಪಬೇಕು ಮತ್ತು ನಾನು, ನನ್ನ ಕಡೆಯಿಂದ, ಹಾಲಿಯಿರುವ ಖಾಲಿ ಹುದ್ದೆಗಳನ್ನು ಸರ್ಕಾರದ ಪ್ರಯತ್ನಗಳಿದ್ದಾಗ್ಯೂ ತುಂಬಿಕೊಳ್ಳಲಿಕ್ಕಾಗಲಿಲ್ಲ. ಆದರೆ ಅದೇ ಸಮಯಕ್ಕೆ ತೊಡಕುಗಳಿದ್ದವು. ವಸತಿ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಕೆಲವು ಸ್ಥಳಗಳಲ್ಲಿ ಅದರಲ್ಲೂ ನಿರ್ದಿಷ್ಟವಾಗಿ ಗ್ರಾಮೀಣ ಭಾಗಗಳಲ್ಲಿ ಸೌಲಭ್ಯಗಳಿರುವುದಿಲ್ಲ, ಕುಟುಂಬಕ್ಕೆ ಅಗತ್ಯವಾದ ಜೀವನಾವಶ್ಯಕ ಸೌಕರ್ಯಗಳು ಮತ್ತು ಅನುಕೂಲಗಳು ಇರುವುದಿಲ್ಲ ಹಾಗೂ ವೇತನ ಶ್ರೇಣಿಗಳು ಕೂಡ ತೀರಾ ಕಡಿಮೆ ಎಂಬುದನ್ನು ನೋವಿನಿಂದ ಒಪ್ಪಿಕೊಳ್ಳುತ್ತೇನೆ. ಈ ಬಗ್ಗೆ ನಾನು ಸ್ವಲ್ಪ ಸಮಯದ ನಂತರ ಮಾತನಾಡುತ್ತೇನೆ. ಹಿಂದುಳಿದ ಪ್ರದೇಶಗಳಿಗೆ ಸೀಟುಗಳನ್ನು ಮೀಸಲಿಡುವ ಪ್ರಶ್ನೆಗೆ ಸಂಬಂಧಿಸಿದಂತೆ, ಇದು ರೂಪಿಸಲಾಗಿರುವಂತಹ ನಿಯಮಗಳಡಿ ಕಷ್ಟಸಾಧ್ಯ, ಆದರೆ ಖಂಡಿತವಾಗಿಯೂ, ನಾನು ಈ ಬೇಡಿಕೆಗಳನ್ನು ಗಮನದಲ್ಲಿಟ್ಟುಕೊಂಡಿದ್ದೇನೆಂದು ಹಾಗೂ ಈ ಮನವಿಗಳನ್ನು ಸಹಾನುಭೂತಿಯಿಂದ

ಪರಿಶೀಲಿಸುತ್ತೇನೆಂದು ನಾನು ಹೇಳಬೇಕು. ಶ್ರೀ ದೇವೇಗೌಡರವರು ವೈದ್ಯಕೀಯ ಶಾಲೆಗಳನ್ನು ಮುಚ್ಚುತ್ತಿರುವ ಬಗ್ಗೆ ಉಲ್ಲೇಖಿಸಿದ್ದಾರೆ, ನಾನು ವೈದ್ಯಕೀಯ ಶಿಕ್ಷಣದ ಬಗ್ಗೆ ಮಾತನಾಡುವಾಗ, ನಾನು ಆ ವಿಷಯದ ಬಗ್ಗೆ ಉತ್ತರ ನೀಡುತ್ತೇನೆ. ಆಯುರ್ವೇದಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಅವುಗಳಿಗೆ ಒದಗಿಸಲಾದಂಥ ಸೌಲಭ್ಯಗಳು, ಅವುಗಳಿಗೆ ಪೂರೈಸಲಾಗುವಂಥ ವೇತನ ಮತ್ತು ಔಷಧಿಗಳು ಅತ್ಯಲ್ಪವಾಗಿವೆ. ಅವರು ಹೇಳಿದ್ದನ್ನೇ ನಾನು ಹೇಳುತ್ತೀನಿ, ಈ ವಿಷಯಗಳ ಬಗ್ಗೆ ನನಗೆ ಗೊತ್ತಿದೆ. ಹಂಚಿಕೆಯಾದ ಮೊಬಲಗನ್ನು ಹೆಚ್ಚಿಸುವ ಮೂಲಕ ನಾವು ಎಷ್ಟು ಔಷಧಿಯ ಪ್ರಮಾಣವನ್ನು ಹೆಚ್ಚಿಸಬಹುದೆಂದು ತಾವು ಹೇಳಿದರೆ, ನಾನು ಅದನ್ನು ಖಂಡಿತವಾಗಿಯೂ ಪರಿಗಣಿಸುತ್ತೇನೆ.

ಸಮಗ್ರ ಪದ್ಧತಿಯಲ್ಲಿನ ನರ್ಸ್‌ಗಳು ಮತ್ತು ಎಲ್.ಎ.ಎಂ.ಎಸ್. ವೈದ್ಯರ ವೇತನಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಈ ವೈದ್ಯರು ನಿಜವಾಗಿಯೂ ತೀರಾ ಕಡಿಮೆ ವೇತನ ಪಡೆಯುತ್ತಿದ್ದಾರೆ. ಇದನ್ನು ಸಹ ಸರ್ಕಾರವು ಪರಿಗಣಿಸುವುದು. ಸರ್ಕಾರವು ವೇತನ ಮತ್ತು ಇತರ ಉಪಲಬ್ಧಿಗಳು, ಮೊದಲಾದವುಗಳನ್ನು ಹೆಚ್ಚಿಸುವ ಮೂಲಕ ತುರ್ತು ಕ್ರಮವಹಿ, ತುರ್ತು ಸಂದರ್ಭಗಳಲ್ಲಿ ನಾವು ಹೇಗೆ ಜನರನ್ನು ನಿಯೋಜನೆ ಮಾಡಿಕೊಳ್ಳಬಹುದು, ಜನರನ್ನು ನೇಮಕ ಮಾಡಿಕೊಳ್ಳಬಹುದು ಎಂಬ ಬಗ್ಗೆ ಈಗ ನಿಯಮಗಳನ್ನು ರೂಪಿಸುತ್ತಿದೆ. ಅವರ ವೇತನವನ್ನು ಸಹಜವಾಗಿ ಹೆಚ್ಚಿಸಲಾಗುವುದು ಎಂಬುದಾಗಿ ಅವರು ಹೇಳಿದರು.

15,000 ಜನಸಂಖ್ಯೆ ಇರುವ ಪ್ರದೇಶಗಳಲ್ಲಿ ಸಾರ್ವಜನಿಕ ವಂತಿಗೆ ಮೂಲಕ ಆಸ್ಪತ್ರೆಯ ಕಟ್ಟಡವನ್ನು ನಿರ್ಮಿಸಲು ಇರುವ ನಿಯಮಗಳು ಕ್ಲಿಷ್ಟವಾಗಿಲ್ಲವೆಂದು ತಿಳಿಸಿದರು. ನಗರದ ಆಸ್ಪತ್ರೆಗಳಲ್ಲಿ ಕೆಲಸ ಮಾಡುತ್ತಿರುವ ಕೆಳಹಂತದ ನೌಕರರ ಮಕ್ಕಳ ಪಾಲನಾ ಕೇಂದ್ರಗಳನ್ನು ನಡೆಸುತ್ತಿರುವ ಸಮಾಜ ಸೇವಾ ಸಂಸ್ಥೆಗಳಿಗೆ ಸೂಕ್ತ ಸಹಾಯ ನೀಡುವ ಕುರಿತಾದ ಸಲಹೆಯನ್ನು ಸರಕಾರ ಪರಿಶೀಲಿಸುತ್ತದೆ ಎಂದರು. ಆಸ್ಪತ್ರೆಗಳಲ್ಲಿ ಸರಬರಾಜಾಗುತ್ತಿರುವ ಆಹಾರದ ಕಳಪೆ ಗುಣಮಟ್ಟವನ್ನು ಪರಿಶೀಲಿಸಿ, ಉತ್ತಮ ಗುಣಮಟ್ಟದ ಆಹಾರವನ್ನು ರೋಗಿಗಳಿಗೆ ಒದಗಿಸಲಾಗುವುದೆಂದು ತಿಳಿಸಿದರು. 'ರಕ್ತ ನಿಧಿ'ಗಳನ್ನು ಎಲ್ಲಾ ಜಿಲ್ಲೆಗಳಲ್ಲೂ ಸ್ಥಾಪಿಸುವ ಬಗ್ಗೆ ಸರ್ಕಾರವು ಗಂಭೀರವಾಗಿ ಪರಿಶೀಲಿಸುತ್ತದೆಂದು ತಿಳಿಸಿದರು. ಬೆಂಗಳೂರು ನಗರದ ಎಲ್ಲಾ ಆಸ್ಪತ್ರೆಗಳಲ್ಲೂ ವಿದ್ಯುತ್ ಲಾಂಡ್ರಿ ಸೌಲಭ್ಯ ಒದಗಿಸಲು ಸುಮಾರು ನಾಲ್ಕು ಲಕ್ಷ ರೂಪಾಯಿಗಳ ಅವಶ್ಯಕತೆಯಿದೆ ಎಂದು ತಿಳಿಸಿದರು. ದೇಶದ ಪ್ರಜೆಗಳ ಆರೋಗ್ಯ ಮಟ್ಟದಲ್ಲಿ ಸುಧಾರಣೆಯಾದರೆ, ಅವರ ದಕ್ಷತೆಯ ಮಟ್ಟವೂ ಸಹ ಸುಧಾರಿಸುತ್ತದೆ ಎಂಬ ಅಭಿಪ್ರಾಯಕ್ಕೆ ತಮ್ಮ ಸಮ್ಮತಿ ಸೂಚಿಸಿದರು.

ಶ್ರೀ ದೇವೇಗೌಡ ಮತ್ತು ಇತರರು ಎತ್ತಿ ಹಿಡಿದಿರುವ ಮತ್ತೊಂದು ಅಂಶವು ಯಾವುದೆಂದರೆ ಆರೋಗ್ಯ ಘಟಕಗಳಿಗೆ ಜನರಿಂದ ನೀಡಲಾದ ನೆರವು ಮತ್ತು 15,000 ಜನಸಂಖ್ಯೆಗೆ ಇರುವ ಆರೋಗ್ಯ ಘಟಕಗಳ ಬಗ್ಗೆ ಆಗಿರುತ್ತದೆ. ಈ 15,000 ಜನಸಂಖ್ಯೆ ಬಗ್ಗೆ ಹೇಳುವುದಾದರೆ, ನಿಯಮಗಳು ತುಂಬಾ ಕಠಿಣವಾಗಿರುವುದಿಲ್ಲವೆಂದು ಹೇಳಲು ನಾನು ಇಚ್ಛಿಸುತ್ತೇನೆ. ಸಾಮಾನ್ಯವಾಗಿ, ಇದಕ್ಕೆ ಒಂದು ರೀತಿಯ ಸ್ಥಿರತೆಯನ್ನು ಮಾಡಬೇಕಾಗುತ್ತದೆ ಮತ್ತು ಸರ್ಕಾರದ ಪ್ರತಿಯೊಂದು ಕೆಲಸದಲ್ಲಿಯೂ, ಜನರ ನೆರವು ತುಂಬಾ ಅಗತ್ಯವಾಗಿರುತ್ತದೆ. ಆದರೆ, ಇದು ವಸ್ತು, ಕಟ್ಟಡಗಳು, ಪ್ಲಾಟ್‌ಗಳ ರೂಪದಲ್ಲಿರಬಹುದು ಅಥವಾ ಗುತ್ತಿಗೆದಾರರಿಗೂ ಕೂಡ ಅವರಿಗೆ ನಗದು ರೂಪದಲ್ಲಿ ಸಂದಾಯ ಮಾಡಲು ಕಷ್ಟವೆಂದು ಕಂಡು ಬಂದರೆ, ಮೊತ್ತವನ್ನು ಹೊಂದಿಸಿಕೊಳ್ಳಬಹುದು.

ಮಲೆನಾಡು ಪ್ರದೇಶಗಳು ಮತ್ತು ಇತರೆ ಗುಡ್ಡಗಾಡು ಅಥವಾ ಅರಣ್ಯ ಪ್ರದೇಶಗಳಲ್ಲಿ ವಿಸ್ತಾರವಾದ ಪ್ರದೇಶಗಳನ್ನು ಒಳಗೊಂಡ 15,000 ಜನಸಂಖ್ಯೆಯು ಅನಿವಾರ್ಯವಾಗಿ ಇರಬೇಕಾಗಿದ್ದು ಸರ್ಕಾರವು ಆ ಸ್ಥಳದ ಜನರ ಬೇಡಿಕೆಯ ನ್ಯಾಯ ಸಮ್ಮತತೆಯನ್ನು ಪರಿಗಣನೆಗೆ ತೆಗೆದುಕೊಳ್ಳುವ ಮೂಲಕ ಅಂಥ ವಿಷಯಗಳನ್ನು ಖಂಡಿತವಾಗಿಯೂ ಪರಿಗಣಿಸುತ್ತದೆ ಎಂಬುದು ಎತ್ತಿರುವಂತಹ ಇನ್ನೊಂದು ಪ್ರಶ್ನೆಯಾಗಿದೆ.

ಶ್ರೀಮತಿ ನಾಗರತ್ನಮ್ಮ ಹಿರೇಮಠ: ಅವರು ತಮ್ಮ ಹಾರೈಕೆಯನ್ನು ತಿಳಿಸಿದ್ದಾರೆ ಮತ್ತು ಆಶೀರ್ವಾದಿಸಿದ್ದಾರೆ.

ಶ್ರೀ ಸಿ.ಜೆ.ಮುಕ್ಕಣ್ಣಪ್ಪ: ಯಾರಿಗೆ?

**ಶ್ರೀ ಕೆ.ನಾಗಪ್ಪ ಆಳ್ವ:** ಸರ್ಕಾರಕ್ಕೆ ಮತ್ತು ಜನರಿಗೆ ಇವರು ತುಂಬಾ ಒಳ್ಳೆಯ ಸಲಹೆಗಳನ್ನು, ತುಂಬಾ ರಚನಾತ್ಮಕವಾದ ಸಲಹೆಗಳನ್ನು ನೀಡಿದ್ದಾರೆ ಮತ್ತು ಇವರು ವಿಶೇಷವಾಗಿ ಆಸ್ಪತ್ರೆಗಳ ಸಮಗ್ರ ಅಧ್ಯಯನ ಮಾಡಿದ್ದಾರೆ.

ನಗರದ ಆಸ್ಪತ್ರೆಗಳಲ್ಲಿರುವ ಕಡಿಮೆ ಸಂಬಳ ಪಡೆಯುವ ಸಿಬ್ಬಂದಿಯ ಮಕ್ಕಳಿಗೆ ಸೌಲಭ್ಯಗಳನ್ನು ಒದಗಿಸುವ ಬಗ್ಗೆ ನನ್ನ ಗಮನವನ್ನು ಸೆಳೆಯಲಾಗಿದ್ದು ಇದು ನಿಜವಾಗಿಯೂ ಗಮನ ಸೆಳೆಯುವ ಸಲಹೆಯಾಗಿದೆ. ಶಿಶುಪಾಲನಾ ಕೇಂದ್ರಗಳನ್ನು ಸಾಮಾಜಿಕ ಸಂಘ-ಸಂಸ್ಥೆಗಳಿಂದ ಸಂಘಟಿಸಲಾಗುತ್ತಿದ್ದು, ಈ ವಿಷಯದಲ್ಲಿ, ಸರ್ಕಾರವು ಹೇಗೆ ಸಂಘಟಿಸಬಹುದು ಅಥವಾ ಆ ರೀತಿಯ ಘಟಕಗಳನ್ನು ಸಂಘಟಿಸಲು ಇತರೆ ಸಂಘಟನೆಗಳು ಮುಂದು ಬಂದರೆ ಅಂಥ

ಸಂಘಟನೆಗಳು ಯಾವ ರೀತಿಯಲ್ಲಿ ಸರ್ಕಾರವು ನೆರವು ನೀಡಬಹುದು ಎಂಬುದನ್ನು ಪರಿಗಣಿಸುತ್ತದೆ.

**ಶ್ರೀ ಕೆ. ರೇವಣ್ಣ ಸಿದ್ದಪ್ಪ (ತಿಪಟೂರು):** ಇದು ಕಡಿಮೆ ಸಂಬಳ ಪಡೆಯುವ ನೌಕರರಿಗೆ ಮಾತ್ರ ಅನ್ವಯಿಸುತ್ತದೆಯೋ? ಬಡವರಿಗೂ ಅನ್ವಯಿಸುತ್ತದೆಯೋ?

**ಶ್ರೀ ಕೆ. ನಾಗಪ್ಪ ಆಳ್ವ:** ಅದು ಬೇರೆ ಆದ ಪ್ರಶ್ನೆ ಆಗಿರುತ್ತದೆ. ಬೇರೆ ಸ್ಥಳಗಳಲ್ಲಿ ಅದನ್ನು ಪರಿಗಣಿಸಬಹುದು.

ನಂತರ, ಆಂಬುಲನ್ಸ್ ಸೇವೆಗಳನ್ನು ಹೆಚ್ಚಿಸಬೇಕಾಗುವುದು.

ಆಹಾರದ ಬಗ್ಗೆ ಹೇಳುವುದಾದರೆ, ಕಳಪೆ ಗುಣಮಟ್ಟದ ಆಹಾರವನ್ನು ಪೂರೈಕೆ ಮಾಡಲಾಗಿದ್ದು ಇವರು ಗುತ್ತಿಗೆದಾರರ ಬಗ್ಗೆ ಕೆಲವು ಟೀಕೆಗಳನ್ನು ಮಾಡಿದ್ದಾರೆ. ಇವಕ್ಕೆ ಸದಸ್ಯರು ಸಲಹೆಗಳನ್ನು ನೀಡಬೇಕು ಮತ್ತು ಇದಕ್ಕೆ ಸರ್ಕಾರವು ಎಲ್ಲಿ ತಪ್ಪಾಗಿದೆ ಎಂಬುದನ್ನು ಕಂಡುಕೊಳ್ಳಬೇಕು ಮತ್ತು ಸರ್ಕಾರವು ಈ ವಿಷಯದ ಬಗ್ಗೆ ಖಂಡಿತವಾಗಿಯೂ ವಿಚಾರ ಮಾಡುತ್ತದೆ. ಈ ಬಗ್ಗೆ ಹೊರಗಡೆ ಹಲವು ಬಾರಿ ಮಾತನಾಡಿಕೊಳ್ಳಲಾಗಿದೆ.

ನಂತರ, ಕೇಂದ್ರ ರಕ್ತ ನಿಧಿ ಬಗ್ಗೆ ಹೇಳುವುದಾದರೆ, ಈಗಾಗಲೇ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಒಂದು ರಕ್ತ ನಿಧಿ ಇದೆ. ರಕ್ತ ನಿಧಿ ಘಟಕವನ್ನು ಸ್ಥಾಪಿಸುವುದು ತುಂಬಾ ಅಗತ್ಯವಾಗಿದ್ದು, ರಾಜ್ಯ ಎಲ್ಲಾ ಜಿಲ್ಲಾ ಕೇಂದ್ರ ಆಸ್ಪತ್ರೆಗಳಲ್ಲಿ ರಕ್ತ ನಿಧಿಗಳನ್ನು ಹೊಂದಿರಬೇಕು. ಸರ್ಕಾರವು, ಬೆಂಗಳೂರಿನಲ್ಲಿ ಮುಖ್ಯ ಘಟಕ ಮತ್ತು ಎಲ್ಲಾ ಜಿಲ್ಲೆಗಳಲ್ಲಿ ಇತರ ಘಟಕಗಳು ಇರುವಂತೆ ಒಂದು ರಕ್ತನಿಧಿ ಘಟಕವನ್ನು ಸ್ಥಾಪಿಸಲು ಗಂಭೀರವಾಗಿ ಪರಿಗಣಿಸಿರುತ್ತದೆ.

ಬೌರಿಂಗ್ ಆಸ್ಪತ್ರೆಯಲ್ಲಿರುವ ಕಬ್ಬಿಣದ ಕೋಶದ ಬಗ್ಗೆ ಇವರು ಇದಕ್ಕೆ ತುಕ್ಕು ಹಿಡಿದಿದ್ದು, ಇದನ್ನು ಮೂಲೆಗೆ ಎಸೆದಿರುವುದಾಗಿ ಹೇಳಿದ್ದಾರೆ. ಇದನ್ನು ದುರಸ್ತಿ ಮಾಡಲಾಗಿದ್ದು ಇದು ಬಳಕೆಯಲ್ಲಿರುತ್ತದೆ ಎಂಬ ಮಾಹಿತಿಯನ್ನು ಅವರಿಗೆ ನೀಡಬಯಸುತ್ತೇನೆ. ಇದನ್ನು ಸಾಮಾನ್ಯವಾಗಿ ಪೋಲೀಯೋ ಪ್ರಕರಣಗಳಲ್ಲಿ ಬಳಸಲಾಗುತ್ತಿದ್ದು ಇದೀಗ ಕೆಲಸ ಮಾಡುವ ಸ್ಥಿತಿಯಲ್ಲಿದೆ. ನಂತರ ಇವರು ಬೌರಿಂಗ್ ಆಸ್ಪತ್ರೆಯಲ್ಲಿರುವ ಲಾಂಡ್ರಿ ಬಗ್ಗೆ ಪ್ರಸ್ತಾಪಿಸಿರುತ್ತಾರೆ. ಈ ಆಸ್ಪತ್ರೆಯ ಸಂಬಂಧದಲ್ಲಿ ಎಲೆಕ್ಟ್ರಿಕ್ ಲಾಂಡ್ರಿಯು ತುಂಬಾ ಅಗತ್ಯವಾಗಿರುತ್ತದೆ ಎಂಬುದು ಮಹತ್ವದ ವಿಷಯವಾಗಿದ್ದು ಇದು ನಿಜವಾಗಿರುತ್ತದೆ ಆದರೆ. ಖರೀದಿಸಲಾದಂತಹ ಯಂತ್ರೋಪಕರಣಗಳಿಗೆ ಟ್ರಾನ್ಸ್‌ಮೀಟರ್‌ಗಳು ಅಗತ್ಯವಿದ್ದು, ಈ ದಿಸೆಯಲ್ಲಿ,

ಉದ್ಭವಿಸಿರುವ ಕೆಲವು ತೊಂದರೆಗಳು ಮತ್ತು ನಾವು ಎತ್ತಿದ ಕೆಲವು ಆಕ್ಷೇಪಣೆಗಳ ಕಾರಣದಿಂದಾಗಿ, ಇದು ವಿಳಂಬವಾಗಿದೆ. ಆದರೆ ತುಂಬಾ ಬೇಗ, ಅಂದರೆ ಒಂದು ಅಥವಾ ಎರಡು ತಿಂಗಳೊಳಗೆ, ನಾವು ಅಲ್ಲಿ ಎಲೆಕ್ಟ್ರಿಕ್ ಲಾಂಡ್ರಿಯು ಕಾರ್ಯ ನಿರ್ವಹಿಸುವಂತೆ ಮಾಡುತ್ತೇವೆ.

ಘಟಪ್ರಭಾ, ಮಲಪ್ರಭಾ ಮತ್ತು ಕೃಷ್ಣಾ ನದಿಗಳಲ್ಲಿ ಉಂಟಾಗಿರುವ ಮಾಲಿನ್ಯತೆಯಿಂದ ಕಾಲರಾ ರೋಗವು ಹರಡಿದೆಯೆಂದು ತಿಳಿಸಿ, ಕಾಲರಾ ರೋಗವನ್ನು ತಡೆಗಟ್ಟಲು ಪ್ರಾರಂಭದಲ್ಲಿ ಉಂಟಾದ ಅಡಚಣೆಯಲ್ಲಿ ನಿವಾರಿಸಿ, ಕ್ರಮೇಣ ರೋಗವನ್ನು ನಿಯಂತ್ರಿಸಲಾಯಿತೆಂದು ತಿಳಿಸಿದರು. ಸಾರ್ವಜನಿಕರೂ ಸಹ ತಮ್ಮ ಆರೋಗ್ಯದ ಬಗ್ಗೆ ಕಾಳಜಿ ಹೊಂದಿರಬೇಕೆಂದು ಮನವಿ ಮಾಡಿದರು. ಸರ್ಕಾರವು ಜನರಲ್ಲಿ ಜಾಗೃತಿ ಮೂಡಿಸಲು ಪ್ರಯತ್ನಿಸುತ್ತಿದ್ದರೂ ಸಾರ್ವಜನಿಕರಿಂದ ಸಹಕಾರ ನಿರೀಕ್ಷಿಸುವುದಾಗಿ ತಿಳಿಸಿದರು.

## ನದಿಗಳಲ್ಲಿ ಉಂಟಾಗಿರುವ ಮಾಲಿನ್ಯತೆಯಿಂದ ಹರಡುತ್ತಿರುವ ಕಾಲರಾ ರೋಗವನ್ನು ತಡೆಗಟ್ಟಲು ಕ್ರಮ.

ಇದನ್ನು ಅಣಿಗೊಳಿಸಲಾಗಿರುತ್ತದೆ. ಇದೆಲ್ಲಕ್ಕೂ ನಾಲ್ಕು ಲಕ್ಷ ರೂ.ಗಳು ಬೇಕಾಗುತ್ತದೆ. ಆ ತರುವಾಯ ನಗರದಲ್ಲಿನ ಎಲ್ಲಾ ಆಸ್ಪತ್ರೆಗಳಲ್ಲಿ ಬಟ್ಟೆಗಳನ್ನು ಇಲ್ಲಿ ಒಗೆಯುವಂತಹ ಸನ್ನಿವೇಶವು ನಿಮಗೆ ಕಾಣಬರುತ್ತದೆ. ಇದುವೇ ಸ್ಥಿತಿಯಾಗಿರುತ್ತದೆ.

ಶ್ರೀ ಸುಂತನ್‌ಕರ್ ಕೆಲವು ಟೀಕೆಗಳನ್ನು ಮಾಡಿರುತ್ತಾರೆ ಮತ್ತು ಕೆಲವು ತುಂಬಾ ಒಳ್ಳೆಯ ಸಲಹೆಗಳನ್ನು ನೀಡಿರುತ್ತಾರೆ. ಜನರ ಆರೋಗ್ಯದ ಮಟ್ಟವು ಸುಧಾರಿಸಿದರೆ, ಈ ದೇಶದಲ್ಲಿ ಹೆಚ್ಚಿನ ದಕ್ಷತೆ ಮತ್ತು ಉತ್ಪಾದನಾ ಸಾಮರ್ಥ್ಯವು ಉಂಟಾಗುತ್ತದೆ ಎಂಬುದಾಗಿ ಇವರು ಹೇಳಿದ್ದು ಇವರ ಮಾತನ್ನು ಪ್ರತಿಯೊಬ್ಬರು ಒಪ್ಪುತ್ತಾರೆ. ದೇಶದ ಅಮೂಲ್ಯ ಸಂಪತ್ತು ಅದರ ಆರೋಗ್ಯವೇ ಆಗಿದೆ. ಶ್ರೀ ಸುಂತನ್‌ಕರ್ ಇವರು ಗ್ರಾಮಗಳಲ್ಲಿರುವ ಜನರು ಸಾಕಷ್ಟು ವೈದ್ಯಕೀಯ ಚಿಕಿತ್ಸೆಯನ್ನು ಪಡೆಯಬೇಕು ಮತ್ತು ವೈದ್ಯಕೀಯ ಸಾಮಗ್ರಿಯ ಪೂರೈಕೆಯನ್ನು ಹೆಚ್ಚಿಸಬೇಕು ಎಂಬುದಾಗಿ ಹೇಳಿರುತ್ತಾರೆ. ಆರೋಗ್ಯದ ಸರಿಯಾದ ರಕ್ಷಣೆ ಮತ್ತು ಪೋಷಣೆಗಾಗಿ ಮಾನಸಿಕ ಪರಿಸ್ಥಿತಿಗಳು ಉತ್ತಮಗೊಳ್ಳುವಂತೆ ಮಾಡುವ ಅಗತ್ಯವಿರುತ್ತದೆ. ಎಂಬುದಾಗಿಯೂ ಸಹ ಅವರು ಹೇಳಿದ್ದಾರೆ. ಈ ಸಲಹೆಗಳಿಗೆ ಸಂಬಂಧಿಸಿದಂತೆ ಇವರ ಬಗ್ಗೆ ನನಗೆ ಯಾವುದೇ ರೀತಿಯಾದ ಭಿನ್ನಾಭಿಪ್ರಾಯವಿರುವುದಿಲ್ಲ. ಈ ಪ್ರದೇಶದಲ್ಲಿ ಕಾಲರಾ ಏಕಾಏಕಿ ಆರಂಭವಾಗಿರುವ ಬಗ್ಗೆ, ಅಗತ್ಯ ಸಿಬ್ಬಂದಿ ಮತ್ತು ಲಸಿಕೆಗಳು ಲಭ್ಯವಿರದಿದ್ದು ಇದರಿಂದಾಗಿ ಜನರು ತುಂಬಾ ತೊಂದರೆಯನ್ನು

ವಿಕ್ಟೋರಿಯಾ ಆಸ್ಪತ್ರೆಯಲ್ಲಿರುವ ಫಿಸಿಯೋ ಥೆರಪಿ ಘಟಕವನ್ನು ಮೇಲ್ದರ್ಜೆಗೇರಿಸುವುದಾಗಿ ಆಶ್ವಾಸನೆ ಕೊಟ್ಟರು. ಬಳ್ಳಾರಿ ಮತ್ತು ಹೈದರಾಬಾದ್-ಕರ್ನಾಟಕ ಜಿಲ್ಲೆಗಳ ಹಿಂದುಳಿದ ಪ್ರದೇಶಗಳ ವಿದ್ಯಾರ್ಥಿಗಳಿಗೆ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಮೀಸಲಾತಿ ನಿಗದಿಗೊಳಿಸಲು ಸರ್ಕಾರಕ್ಕೆ ಆ ಪ್ರದೇಶಗಳಲ್ಲಿರುವ ಶೈಕ್ಷಣಿಕ ಮತ್ತಿತರ ಅನಾನುಕೂಲತೆ ಮತ್ತು ಕೊರತೆಗಳ ಕುರಿತಾದ ಅರಿವು ಸರ್ಕಾರಕ್ಕಿದೆ ಎಂದು ತಿಳಿಸಿದರು.

## ಫಿಸಿಯೋ ಥೆರಪಿ ಘಟಕ ಮೇಲ್ದರ್ಜೆಗೆ

ವಿಕ್ಟೋರಿಯಾ ಆಸ್ಪತ್ರೆಯಲ್ಲಿರುವ ಫಿಸಿಯೋ ಥೆರಪಿ ಘಟಕದ ಬಗ್ಗೆ ಶ್ರೀ ಸುಂತನ್‌ಕರ್ ಇವರು ಕೆಲವು ಆಪಾದನೆಗಳನ್ನು ಮಾಡಿದ್ದಾರೆ. ಈಗ ಇದರ ಪರಿಸ್ಥಿತಿಯು ಹೆಚ್ಚು ಉತ್ತಮವಾಗಿದೆ. ನಾವು ಈ ಘಟಕವನ್ನು ಶೀಘ್ರದಲ್ಲಿಯೇ ಮೇಲ್ದರ್ಜೆಗೇರಿಸುತ್ತೇವೆ. ನಾವು ಅನೇಕ ಉತ್ತಮ ಉಪಕರಣಗಳನ್ನು ಹೊಂದಿದ್ದೇವೆ. ಇತರ ಸಹಾಯಕರೊಂದಿಗೆ ಒಬ್ಬ ಶಸ್ತ್ರ ವೈದ್ಯರು ಇದರ ಪ್ರಭಾರದಲ್ಲಿರುತ್ತಾರೆ. ನಾವು ಯುಕ್ತವಾಗಿ ತರಬೇತಿ ಹೊಂದಿದ ಎಲೆಕ್ಟ್ರಿಷಿಯನ್ ಅನ್ನೂ ಸಹ ಈ ಘಟಕಕ್ಕೆ ನೇಮಕ ಮಾಡಲಿದ್ದೇವೆ. ಸಾಧ್ಯವಾದಷ್ಟು ಬೇಗನೆ ಒಂದು ವ್ಯಾಯಾಮ ಶಾಲೆ ಮತ್ತು ಈಜುಕೊಳವನ್ನು ಸಹ ಒದಗಿಸುತ್ತೇವೆ.

**ಶ್ರೀ ಅಂಗಡಿ ಚನ್ನಬಸಪ್ಪ:** ಈಗ ನೀವು ಹೊಂದಿರುವ ಉಪಕರಣಗಳನ್ನು ನಿರ್ವಹಿಸಲು ನೀವು ಸಿಬ್ಬಂದಿಯನ್ನು ಹೊಂದಿರುವಿರಾ?

**ಶ್ರೀ ಕೆ. ನಾಗಪ್ಪ ಆಳ್ವ:** ಹೌದು ನಾವು ಹೊಂದಿದ್ದೇವೆ. ಶ್ರೀ ಸುಂತನ್‌ಕರ್ ಇವರು ಗ್ರಾಮೀಣ ಪ್ರದೇಶಗಳಲ್ಲಿನ ಶೌಚಗೃಹಗಳ ಬಗ್ಗೆ ಅಂದರೆ ಸಾಪ ಸಂಡಾಸ್ ಬಗ್ಗೆ ಮಾತನಾಡಿದ್ದಾರೆ. ಜನಾರೋಗ್ಯ ಇಲಾಖೆಯು, ಇಲಾಖೆಯಿಂದ ನೀಡಲಾದ ರಿಯಾಯಿತಿ ದರದಲ್ಲಿ ಜನರು ಇವುಗಳನ್ನು ಕೊಂಡುಕೊಳ್ಳುವಂತೆ ಪ್ರೋತ್ಸಾಹಿಸುತ್ತಿದೆ.

ಶ್ರೀ ಅಲ್ಲುಂ ಕರಿಬಸಪ್ಪ ಇವರು ಬಳ್ಳಾರಿ ಮತ್ತು ಹೈದ್ರಾಬಾದ್ ಕರ್ನಾಟಕ ಜಿಲ್ಲೆಗೆ ವೈದ್ಯಕೀಯ ಕಾಲೇಜುಗಳಲ್ಲಿ ಸ್ಥಾನಗಳನ್ನು ಮೀಸಲಿಡುವ ಬಗ್ಗೆ ಮಾತನಾಡಿದ್ದಾರೆ. ಪ್ರಸ್ತುತ ನಾನು ಭರವಸೆಯನ್ನು ನೀಡುವ ಪರಿಸ್ಥಿತಿಯಲ್ಲಿ ಇಲ್ಲ. ಆದರೆ, ಈ ಪ್ರದೇಶಗಳು ಶಿಕ್ಷಣ ಮತ್ತು ಇತರೆ ಸೌಲಭ್ಯಗಳಲ್ಲಿ ಹಿಂದುಳಿದಿವೆ ಎಂಬುದು ಸರ್ಕಾರಕ್ಕೆ ಗೊತ್ತಿದೆ. ನೀರು ಪೂರೈಕೆ ಬಗ್ಗೆ ಮಾತನಾಡುತ್ತಾ, ಇವರು ಏಕಕಾಲದಲ್ಲಿ

ಒಳಚರಂಡಿ ಕಾರ್ಯವನ್ನು ಕೈಗೆತ್ತಿಕೊಳ್ಳಬೇಕೆಂದು ಹೇಳಿರುತ್ತಾರೆ. ಆರೋಗ್ಯ ಇಲಾಖೆಗೆ ಇದರಲ್ಲಿ ತುಂಬಾ ಆಸಕ್ತಿ ಇದ್ದು ನಾವು ಸಂಬಂಧಪಟ್ಟ ಇಲಾಖೆಗಳ ಸಹಯೋಗದಲ್ಲಿ ಸಾಧ್ಯವಾದುದನ್ನೆಲ್ಲಾ ಮಾಡುತ್ತೇವೆ.

ಇತರ ವಿಷಯಗಳ ನಡುವೆ ಶ್ರೀ ವೆಂಕಟೇಗೌಡ ಇವರು, ವೈದ್ಯರು ಅತಿ ಶ್ರದ್ಧೆಯಿಂದ ಪ್ರೇರಿತರಾಗಿರಬೇಕು ಮತ್ತು ಸೇವಾ ಭಾವನೆಯಿಂದ ತಮ್ಮ ಕಾರ್ಯವನ್ನು ನಿರ್ವಹಿಸಬೇಕು ಎಂದು ಹೇಳಿದ್ದಾರೆ. ಇವರು ಸರಿಯಾಗಿಯೇ ಮಾತನಾಡಿದ್ದು ನಾನು ಇದನ್ನು ಒಪ್ಪಿಕೊಳ್ಳುತ್ತೇನೆ. ಐದು ಸಂಘಟಿತ ಕ್ಷೇತ್ರಗಳಲ್ಲಿ ಏಕರೂಪದ ನಿಯಮಗಳ ಕೊರತೆಯ ಕಾರಣದಿಂದ ಜನರು ಅನುಭವಿಸಿರುವ ತೊಂದರೆಗಳ ಬಗ್ಗೆಯೂ ಸಹ ಇವರು ಹೇಳಿದ್ದಾರೆ. ಸರ್ಕಾರವು ಶೀಘ್ರದಲ್ಲಿಯೇ ಈ ಪರಿಸ್ಥಿತಿಯನ್ನು ಸರಿಪಡಿಸುತ್ತದೆ. ಗ್ರಾಮಗಳಿಗೆ ಅನುಭವ ಹೊಂದಿರುವ ವೈದ್ಯರುಗಳನ್ನು ಕಳುಹಿಸುವ ಬಗ್ಗೆಯೂ ಸಹ ಶ್ರೀ ವೆಂಕಟೇಗೌಡರು ಮಾತನಾಡಿದ್ದಾರೆ. ಇದು ತುಂಬಾ ಸುಂದರವಾದ ನಾದಿಯಾಗಿದ್ದು ಒಳ್ಳೆಯ ಸಲಹೆಯಾಗಿರುತ್ತದೆ. ಗ್ರಾಮಗಳಿಗೆ ಹೊಸಬರನ್ನು ಕಳುಹಿಸುವುದು ಒಳ್ಳೆಯದಲ್ಲ. ಗ್ರಾಮಗಳಿಗೆ ಕಳುಹಿಸಿರುವ ವೈದ್ಯರು, ನಗರಗಳಲ್ಲಿರುವ ದೊಡ್ಡ ಆಸ್ಪತ್ರೆಗಳಲ್ಲಿ ಕನಿಷ್ಠ ಪಕ್ಷ ಒಂದು ಅಥವಾ ಎರಡು ವರ್ಷಗಳ ಅನುಭವವನ್ನು ಪಡೆಯಬೇಕು ಎಂಬುದು ಸರ್ಕಾರದ ಅಭಿಪ್ರಾಯವಾಗಿರುತ್ತದೆ.

ಶ್ರೀ ಎಂ. ಶ್ರೀನಿವಾಸ ನಾಯಕ್ ಇವರು, ವೈದ್ಯರ ನಿವೃತ್ತಿ ವಯಸ್ಸಿನ ಬಗ್ಗೆ ಕೆಲವು ಸಲಹೆಗಳನ್ನು ನೀಡಿದ್ದಾರೆ. ಇವುಗಳು ಪರಿಗಣನೆಗೆ ತೆಗೆದುಕೊಳ್ಳಲಾಗುವಂತಹ ಸಲಹೆಗಳಾಗಿರುತ್ತವೆ. ಆದರೆ ಪ್ರಸ್ತುತ, ವೈದ್ಯರುಗಳನ್ನು ಹೇಗೆ ಮರುನೇಮಕ ಮಾಡಿಕೊಳ್ಳಬಹುದು ಎಂಬುದರ ಸಂಬಂಧವಾಗಿ ಕೆಲವು ರಿಯಾಯಿತಿಗಳ ಬಗ್ಗೆ ಮಾತ್ರ ನಾವು ಯೋಚಿಸಬೇಕಾಗಿದೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:** ನಿವೃತ್ತಿಯಾಗಿರುವ ವ್ಯಕ್ತಿಗಳನ್ನು ನೇಮಕ ಮಾಡಿಕೊಳ್ಳಲು ಏನು ತೊಂದರೆ?

**ಶ್ರೀ ನಾಗಪ್ಪ ಆಳ್ವ:** ನಾವು ಕೆಲವು ನಿಯಮಗಳನ್ನು ರೂಪಿಸಬೇಕಾಗಿದೆ. ಸಾಮಾನ್ಯವಾಗಿ, ಅವರು ಪ್ರಸ್ತುತ ವೇತನಕ್ಕೆ ಬರುವುದಿಲ್ಲ. ಮರು ನೇಮಕದ ಬಗ್ಗೆ ಈಗಾಗಲೇ ಕೆಲವು ನಿಯಮಗಳಿವೆ. ಇವುಗಳನ್ನು ನಾವು ಸಡಿಲಿಸಿ, ಸದರಿ ನಿಯಮಗಳನ್ನು ಆಕರ್ಷಣೀಯವನ್ನಾಗಿ ಮಾಡಬೇಕು, ಆಗ ಮಾತ್ರ ಅವರು ಬರುತ್ತಾರೆ. ಶ್ರೀ ಶ್ರೀನಿವಾಸ ನಾಯಕ್ ಇವರು ಮಂಗಳೂರಿನಲ್ಲಿ ಕುಷ್ಠರೋಗ ಆಸ್ಪತ್ರೆ ಅಥವಾ ಕಾಲೋನಿಯನ್ನು ಪ್ರಾರಂಭಿಸುವ ಬಗ್ಗೆ ಹಾಗೂ ಮಕ್ಕಳ ಆಸ್ಪತ್ರೆ

ಬಗ್ಗೆಯೂ ಸಹ ಮಾತಾಡಿದ್ದಾರೆ. ಮಕ್ಕಳ ಚಿಕಿತ್ಸೆ ಮತ್ತು ಮಕ್ಕಳನ್ನು ಕರೆತರುವ ಬಗ್ಗೆ ಈ ತರುವಾಯ ನಾನು ಮಾತನಾಡುತ್ತೇನೆ.

ಔಷಧಿಗಳ ಖರೀದಿ ಸಂಬಂಧವಾಗಿ ಹೇಳುವುದಾದರೆ, ಜಿಲ್ಲಾ ವೈದ್ಯಾಧಿಕಾರಿ ಒಂದೇ ಬಾರಿಗೆ 500 ರೂ.ಗಳ ಔಷಧಗಳನ್ನು ಖರೀದಿಸಲು ಅಧಿಕಾರವನ್ನು ಹೊಂದಿರುತ್ತಾರೆ. ಹಾಗಾಗಿ ಕೆಲವು ಸದಸ್ಯರು ಹೇಳಿರುವಂತೆ ಯಾವುದೇ ಅಂಥ ತೊಂದರೆಗಳು ನಮಗೆ ಕಂಡುಬಂದಿಲ್ಲ. ಈ ಸಂಬಂಧವಾಗಿ, ಆಯುರ್ವೇದಿಕ್ ಮತ್ತು ಯುನಾನಿ ಔಷಧಾಲಯಗಳಿಗೆ ಔಷಧಗಳನ್ನು ಸರ್ಕಾರದ ಔಷಧ ಸಂಗ್ರಹಾಲಯದಿಂದ ಪೂರೈಸಲಾಗುತ್ತಿದೆ ಮತ್ತು ಔಷಧ ಸಂಗ್ರಹಾಲಯವು ಔಷಧಿಗಳನ್ನು ದಾಸ್ತಾನು ಮಾಡದಿದ್ದು ಔಷಧಗಳನ್ನು ಕೇಂದ್ರ ಔಷಧ ಸಂಗ್ರಹಾಲಯದಿಂದ ದಾಸ್ತಾನಿಲ್ಲದ ಪ್ರಮಾಣಪತ್ರವನ್ನು ಪಡೆದುಕೊಂಡ ನಂತರ ಅನುಮೋದಿತ ಫರ್ಮ್‌ಗಳಿಂದ ಸಂಸ್ಥೆಗಳ ಮುಖ್ಯಸ್ಥರ ಮೂಲಕ ಖರೀದಿಸಲಾಗುವುದು ಎಂಬುದಾಗಿ ಹೇಳಲಿಚ್ಛಿಸುತ್ತೇನೆ. ಕೇಂದ್ರ ಔಷಧ ಸಂಗ್ರಹಾಲಯಗಳಲ್ಲಿ ಎಲ್ಲಾ ರೀತಿಯ ಔಷಧಿಗಳ ಸಾಕಷ್ಟು ದಾಸ್ತಾನನ್ನು ಹೊಂದಿರುವ ಹಾಗೆ ಎಲ್ಲಾ ಪ್ರಯತ್ನಗಳನ್ನು ಮಾಡಲಾಗಿದೆ. ಅದೇ ರೀತಿಯಾಗಿ ನಾವು ಮಾನ್ಯತೆ ಪಡೆದ ಔಷಧಗಳ ಮಳಿಗೆಯನ್ನು ಹೊಂದಿದ್ದು ನಾವು ಅತ್ಯಂತ ಹೆಚ್ಚಿನ ಔಷಧಗಳ ದಾಸ್ತಾನು ಮಾಡುವ ಸ್ಥಿತಿಯಲ್ಲಿದ್ದೇವೆ.

ಶ್ರೀ ಗೌಡಯ್ಯನವರು, ಆಯವ್ಯಯದ ಅರ್ಧದಷ್ಟು ಮೊತ್ತವನ್ನು ಈ ವಸ್ತುಗಳ ಖರೀದಿಗಾಗಿಯೇ ಖರ್ಚು ಮಾಡಲಾಗುತ್ತಿದೆ ಎಂದು ಹೇಳುವ ಮೂಲಕ ವೈದ್ಯಕೀಯ ಕಾಲೇಜುಗಳ ಬಗ್ಗೆ ಕೊಂಚ ಟೀಕೆ ಮಾಡಿದ್ದಾರೆ. ಅಷ್ಟೊಂದು ಹಣವನ್ನು ಖರ್ಚು ಮಾಡಲಾಗಿದೆ ಎಂಬುದನ್ನು ನಾನು ಒಪ್ಪುವುದಿಲ್ಲ. ಇದಕ್ಕೆ ಯಾವುದಾದರೂ ಹಣವನ್ನು ಖರ್ಚು ಮಾಡಿದ್ದರೆ ಅದು ಉಪಯುಕ್ತವಾಗಿ ಖರ್ಚು ಮಾಡಿರುವುದಾಗಿರುತ್ತದೆ. ಏಕೆಂದರೆ ನಾವು ಒಳ್ಳೆ ಗುಣಮಟ್ಟದ ವೈದ್ಯಕೀಯ ಕಾಲೇಜುಗಳನ್ನು ಹೊಂದಿದ್ದೇವೆ ಹಾಗೂ ನಾವು ಸಾಕಷ್ಟು ಸಂಖ್ಯೆಯಲ್ಲಿ ಕಾಲೇಜುಗಳಿಂದ ಹೊರಬರುವಂತಹ ವೈದ್ಯರುಗಳನ್ನು ಹೊಂದಿರುವ ಹೊರತು ವೈದ್ಯಕೀಯ ಅಥವಾ ಸಾರ್ವಜನಿಕ ಆರೋಗ್ಯದಂಥ ಸೌಲಭ್ಯಗಳು ಗ್ರಾಮಗಳಿಗೆ ತಲುಪುವಂತೆ ನೋಡಿಕೊಳ್ಳಲು ನಮಗೆ ಸಾಧ್ಯವಾಗುವುದಿಲ್ಲ.

ಶ್ರೀ ಗೌಡಯ್ಯ ಇವರು ಕಾಲೇಜುಗಳ ಮಾನ್ಯತೆಯ ಬಗ್ಗೆಯೂ ಸಹ ಮಾತಾಡಿದ್ದಾರೆ. ಇದರ ಬಗ್ಗೆಯೂ ಕೂಡ ನಾನು ಕೆಲವು ನಿಮಿಷಗಳ ತರುವಾಯ ಹೇಳುತ್ತೇನೆ.

ಬಿ.ಸಿಜಿ. ಲಸಿಕೆ ಬಗ್ಗೆ ಸಮೀಕ್ಷೆ ಕಾರ್ಯವನ್ನು ಹಮ್ಮಿಕೊಳ್ಳಲಾಗುವುದು ಮತ್ತು ವರದಿಯನ್ನು ಪಡೆದುಕೊಳ್ಳಲಾಗುವುದು. ಯಾವಾಗಲೂ ಯಾವುದೇ ಒಳ್ಳೆ ವ್ಯವಸ್ಥೆಯ ಪ್ರಯತ್ನಗಳನ್ನು ಮಾಡುವುದು ಅಗತ್ಯವಾಗಿದ್ದು, ಹಾಗಾಗಿ ನಾವು ಜನರ ಮುಂದೆ ಹೋಗಿ ಇವರ ಬಗ್ಗೆ ಅವರಿಗೆ ಮನವರಿಕೆ ಮಾಡಬಹುದು.

ಶ್ರೀ ರಾಮೇಗೌಡ ಇವರು ಗ್ರಾಮಗಳು ಮತ್ತು ಪಟ್ಟಣಗಳಲ್ಲೂ ಸಹ ಇರುವ ಆಸ್ಪತ್ರೆಗಳ ಪರಿಸ್ಥಿತಿಯ ಬಗ್ಗೆ ಗೊತ್ತುವಳಿಯನ್ನು ತಂದಿದ್ದಾರೆ. ಅಲ್ಲದೆ, ಇವರು ಆರೋಗ್ಯ ಘಟಕಗಳು, ಔಷಧಾಲಯಗಳು ಅಥವಾ ಆಸ್ಪತ್ರೆಗಳ ಕಟ್ಟಡದ ಬಗ್ಗೆ ಮತ್ತು ವೈದ್ಯರುಗಳ ವಸತಿ ಬಗ್ಗೆಯೂ ಪ್ರಾತನಾಡಿದ್ದಾರೆ. ಇದು,...... ಪರಿಸ್ಥಿತಿಯಾಗಿದೆ ಎಂಬುದು ನಿಜವಾಗಿರುತ್ತದೆ.

**ಶ್ರೀ ಎಸ್. ಶಿವಪ್ಪ (ಶ್ರವಣ ಬೆಳಗೊಳ):** ಕ್ರಮ ವಿಚಾರ ಕುರಿತಂತೆ ಮಂತ್ರಿಗಳಾದ ಶ್ರೀ ಬಿ.ಡಿ. ಜತ್ತಿಯವರು ತಮ್ಮ ಕೊಠಡಿ (ಛೇಂಬರ್)ಯಲ್ಲಿ ಮಾಡಬೇಕಾಗಿರುವ ಕಡತಗಳ ವಿಲೇವಾರಿಯನ್ನು ವಿಧಾನ ಸಭಾಂಗಣದಲ್ಲಿ ಮಾಡುವುದು ಕ್ರಮಾನುಸಾರವಾಗಿದೆಯೆ?

**ಮಾನ್ಯ ಸಭಾಧ್ಯಕ್ಷರು:** ಮಂತ್ರಿಗಳು ಕಾರ್ಯವನ್ನು ನಿರ್ವಹಿಸಲು ನಾನು ಆಕ್ಷೇಪಿಸುವಂತಿಲ್ಲ. ಅವರು ಯಾವ ಕಾರ್ಯವನ್ನು ನಿರ್ವಹಿಸುತ್ತಾರೆ ಎಂಬುದು ನನಗೆ ಗೊತ್ತಿಲ್ಲ. ವಿರೋಧ ಪಕ್ಷದ ನಾಯಕರು ...... ಕಡತವನ್ನು ನೋಡಿದ್ದರೆ ......

**ಶ್ರೀ ಎಸ್. ಶಿವಪ್ಪ:** ಇಲ್ಲಿ ಅವರು ಕಚೇರಿ ಕೆಲಸವನ್ನು ಮಾಡಲು ಅನುಮತಿ ನೀಡಲಾಗಿದೆಯೆ?

**ಮಾನ್ಯ ಸಭಾಧ್ಯಕ್ಷರು:** ವಿರೋಧ ಪಕ್ಷದ ನಾಯಕರು ಯಾವುದೇ ನಿಯಮದ ಬಗ್ಗೆ ನನ್ನ ಗಮನವನ್ನು ಸೆಳೆಯಲು ಇಚ್ಛಿಸುವರೆ? ನೀವು ಉತ್ತರಿಸುವ ಬಗ್ಗೆ ಯಾವುದಾದರೂ ನಿಯಮ ಅಥವಾ ರೀತಿನೀತಿ ಇದೆಯೆ?

**ಶ್ರೀ ಎಸ್. ಶಿವಪ್ಪ:** ಮಂತ್ರಿಗಳು ಸದನದಲ್ಲಿ ಕಚೇರಿ ಕೆಲಸವನ್ನು ಮಾಡದಿರುವುದು ಸಂಸದೀಯ ಕಾರ್ಯವಿಧಾನವಾಗಿದೆ.

ರಾಜ್ಯದಲ್ಲಿ ಏಕೀಕರಣಗೊಂಡ ಐದು ಪ್ರದೇಶಗಳಲ್ಲಿ ಏಕರೂಪ ನಿಯಮಗಳ ಕೊರತೆ ನೀಗಿಸಲು ಸರ್ಕಾರವು ಶೀಘ್ರವೇ ಕ್ರಮಕೈಗೊಳ್ಳುವುದೆಂದು ತಿಳಿಸಿದರು. ಗ್ರಾಮೀಣ ಪ್ರದೇಶಗಳಲ್ಲಿರುವ ಆಸ್ಪತ್ರೆಗಳಿಗೆ ಅನುಭವಿ ವೈದ್ಯರನ್ನು ನಿಯೋಜಿಸಲು

ಸರ್ಕಾರವು ಸಮ್ಮತಿಸುತ್ತದೆಂದು ಹೇಳಿದರು. ವೈದ್ಯರುಗಳನ್ನು ಪುನರ್ ನೇಮಕ ಮಾಡಲು ನಿಯಮಗಳನ್ನು ಸಡಿಲಿಸಬೇಕೆಂದು ತಿಳಿಸಿದರು.

## ಏಕೀಕರಣಗೊಂಡ ಪ್ರದೇಶಗಳಲ್ಲಿ ಏಕರೂಪ ನಿಯಮಗಳ ಜಾರಿ

**ಮಾನ್ಯ ಸಭಾಧ್ಯಕ್ಷರು:** ಇವರು ಉತ್ತರಿಸುವ ಬಗ್ಗೆ ಇರುವ ರೀತಿನೀತಿಯ ಅಧ್ಯಾಯ ಮತ್ತು ಭಾಗವನ್ನು ನಾನು ಪಡೆದುಕೊಳ್ಳಲು ಇಚ್ಛಿಸುತ್ತೇನೆ.

**ಶ್ರೀ ನಾಗಪ್ಪ ಆಳ್ವ:** ಪದೇ ಪದೇ ಆಗುವ ವರ್ಗಾವಣೆಗಳು ಮತ್ತು ಕೆಲವು ಸ್ಥಳಗಳಲ್ಲಿ ಭರ್ತಿ ಮಾಡದೆ ಹಾಗೇ ಇಟ್ಟಿರುವ ಖಾಲಿ ಸ್ಥಾನಗಳ ಕಾರಣದಿಂದಾಗಿ ಜನರಿಗೆ ಉಂಟಾಗಿರುವ ತೊಂದರೆಗಳನ್ನು ಶ್ರೀ ರಾಮೇಗೌಡರು ವಿವರಿಸಿದ್ದಾರೆ. ಇದರ ಬಗ್ಗೆ ವಿಚಾರ ಮಾಡಲಾಗುವುದು.

ಶ್ರೀ ರಾಮೇಗೌಡ ಇವರು ಪ್ರಯೋಗಾಲಯದ ಬಗ್ಗೆ ಇನ್ನೊಂದು ಸಲಹೆ ಮಾಡಿದ್ದಾರೆ. ಕಡೇ ಪಕ್ಷ ತಾಲ್ಲೂಕು ಕೇಂದ್ರ ಕಾರ್ಯಸ್ಥಾನಗಳಲ್ಲಿ ಪ್ರಯೋಗಾಲಯ ಸೌಲಭ್ಯಗಳು ಇರಬೇಕೆಂದು ಇವರು ಸಲಹೆ ಮಾಡಿದ್ದಾರೆ. ನಾವು ಈಗಾಗಲೇ ಹನ್ನೆರಡು ಜಿಲ್ಲಾ ಕೇಂದ್ರಸ್ಥಾನಗಳಲ್ಲಿ ನಿರಂತರವಾಗಿ ಕಾರ್ಯನಿರ್ವಹಿಸುವ ಪ್ರಯೋಗಾಲಯಗಳನ್ನು ಪ್ರಾರಂಭಿಸಿದ್ದೇವೆ ಮತ್ತು ಅನೇಕ ತಾಲ್ಲೂಕುಗಳಲ್ಲಿಯೂ ಸಹ ಈ ಸೌಲಭ್ಯಗಳನ್ನು ನಾವು ಹೊಂದಿದ್ದೇವೆ. ಆರೋಗ್ಯ ಘಟಕಗಳಲ್ಲಿಯೂ ಸಹ ನಾವು ಸಣ್ಣ ಪ್ರಯೋಗಾಲಯಗಳನ್ನು ಹೊಂದಲಿದ್ದೇವೆ.

ಮರಣೋತ್ತರ ಪರೀಕ್ಷೆಯನ್ನು ನಡೆಸುವಲ್ಲಿ ಉಂಟಾಗುವ ವಿಳಂಬದ ಬಗ್ಗೆ, ವಿಚಾರ ಮಾಡುವುದಾಗಿ ನಾನು ಹೇಳಬಯಸುತ್ತೇನೆ. ವೈದ್ಯರುಗಳು ಅಥವಾ ಸಂಬಂಧಪಟ್ಟ ಯಾರೇ ವ್ಯಕ್ತಿಯ ಕಡೆಯಿಂದ ಅಂಥ ಕರ್ತವ್ಯ ನಿರ್ಲಕ್ಷ್ಯವಾಗಿದ್ದರೆ ಅದನ್ನು ಸರ್ಕಾರದ ಗಮನಕ್ಕೆ ತರುವುದು ಒಳ್ಳೆಯದೆಂದು ನಾನು ಮಾನ್ಯ ಸದಸ್ಯರಿಗೆ ಸೂಚಿಸಬಯಸುತ್ತೇನೆ. ಹಾಗೆ ಮಾಡುವುದಾದರೆ, ಅದರ ಬಗ್ಗೆ ಆಗಿಂದಾಗಲೇ ವಿಚಾರ ಮಾಡಲಾಗುವುದು.

ದಾಂಡೇಲಿಯಲ್ಲಿ ತಲೆದೋರಿರುವ ಹೊಸ ಖಾಯಿಲೆಗಳ ಬಗ್ಗೆ ಶ್ರೀ ದಯಾನಂದ ಕಾಳೆಯವರು ಪ್ರಶ್ನೆಯನ್ನು ಕೇಳಿದ್ದಾರೆ. ದಾಂಡೇಲಿಯಲ್ಲಿ ತಲೆದೋರಿರುವ ಹೊಸ ಕಾಯಿಲೆಗಳ ಬಗ್ಗೆ ನಮಗೆ ತಿಳಿದುಬಂದಿದ್ದು, ಇದಕ್ಕಾಗಿ ತಡವಿಲ್ಲದಂತೆ ಕ್ರಮವನ್ನು ಕೈಗೊಳ್ಳಲಾಗಿರುತ್ತದೆ. ವಾಸ್ತವವಾಗಿ, ಅನೇಕ ಜನರನ್ನು ಹುಬ್ಬಳ್ಳಿ ವೈದ್ಯಕೀಯ ಕಾಲೇಜು ಆಸ್ಪತ್ರೆಗೆ ಕರೆತರಲಾಗಿದ್ದು, ತನಿಖೆಯನ್ನು ನಡೆಸಲಾಗುತ್ತಿದೆ. ರೋಗಿಗಳು ತಮ್ಮ ಪರಿಹಾರ ಮುಂತಾದವುಗಳಿಗೆ ಹಿಂದಿರುಗಿ

ಹೋಗಲು ಬಯಸಿದ್ದರಿಂದ ಹೆಚ್ಚಿನ ತನಿಖೆಯನ್ನು ನಡೆಸಲು ಸಾಧ್ಯವಾಗದಿದ್ದು ಕಷ್ಟಕರವಾದ ಪರಿಸ್ಥಿತಿಯಾಗಿತ್ತು, ಹಾಗಾಗಿ ತನಿಖೆಯನ್ನು ಮುಂದುವರೆಸುವ ಅವಕಾಶವು ಇರಲಿಲ್ಲ. ಆದರೆ, ಹೊಸ ಖಾಯಿಲೆ ಬಗ್ಗೆ ನಮಗೆ ತಿಳಿದುಬಂದಾಗಲೆಲ್ಲ ಪ್ರತಿಯೊಂದು ಕ್ರಮವನ್ನು ತೆಗೆದುಕೊಳ್ಳಲಾಗಿದೆ. ಸಂಶೋಧನಾ ಕಾರ್ಯವನ್ನೂ ಸಹ ಮಾಡಲಾಗಿದೆ.

ಸನ್ಮಾನ್ಯ ಸದಸ್ಯರಾದ ಶ್ರೀಮತಿ ರತ್ನಮ್ಮ ಮಹದೇವ ರಾವ್ ಇವರು ಜನಾರೋಗ್ಯ ಮತ್ತು ವೈದ್ಯಕೀಯ ಇಲಾಖೆಗಳನ್ನು ಒಟ್ಟುಗೂಡಿಸುವ ಬಗ್ಗೆ ಮಾತಾಡಿದ್ದಾರೆ. ಅದರ ಬಗ್ಗೆಯೂ ಸಹ ನಾನು ಆಮೇಲೆ ಮಾತನಾಡುತ್ತೇನೆ. ಹಾರ್ನಹಳ್ಳಿಯಲ್ಲಿ ಔಷಧಾಲಯವನ್ನು ಪ್ರಾರಂಭಿಸಲು ಕೋರಿಕೆಯನ್ನು ಸಲ್ಲಿಸಿರುತ್ತಾರೆ. ಅದನ್ನು ಪರಿಗಣಿಸಲಾಗುವುದು. ಆದರೆ, ಈಗ ಅವರು ನಿರೀಕ್ಷಿಸಿದಂತೆ ಭರವಸೆ ನೀಡಲು ಸಾಧ್ಯವಿಲ್ಲ.

ಜಿಲ್ಲಾ ವೈದ್ಯಾಧಿಕಾರಿಗಳಿಗೆ 5000 ರೂಪಾಯಿಗಳಷ್ಟು ಔಷಧಿ ಖರೀದಿ ಮಾಡಲು ಅಧಿಕಾರವಿರುವುದರಿಂದ ಸದಸ್ಯರು ಭಾವಿಸುವಂತೆ ಸರ್ಕಾರಕ್ಕೆ ಯಾವುದೇ ತೊಂದರೆ ಇಲ್ಲವೆಂದು ತಿಳಿಸಿದರು. ಕೇಂದ್ರ ಫಾರ್ಮಸಿಯಲ್ಲಿ ಸಾಕಷ್ಟು ಔಷಧಿಗಳ ದಾಸ್ತಾನು ಇರಲು ಎಲ್ಲಾ ಪ್ರಯತ್ನ ಮಾಡುವುದಾಗಿ ಹೇಳಿದರು.

## ಕೇಂದ್ರ ಫಾರ್ಮಸಿಯಲ್ಲಿ ಔಷಧಿಗಳ ದಾಸ್ತಾನಿಗೆ ಕ್ರಮ

ಸನ್ಮಾನ್ಯ ಸದಸ್ಯರಾದ ಮಾದೇಗೌಡರು, ಉನ್ನತ ಶಿಕ್ಷಣಕ್ಕಾಗಿ ವಿದೇಶಕ್ಕೆ ಹೋಗಿ ಅಲ್ಲಿಯೇ ಅನಿಶ್ಚಿತವಾಗಿ ಉಳಿದುಕೊಳ್ಳುವ ವಿದ್ಯಾರ್ಥಿಗಳ ಬಗ್ಗೆ ಮಾತಾಡಿದ್ದಾರೆ. ಅಂಥ ಪ್ರಕರಣಗಳು ಸಂಭವಿಸಿದ್ದು ಸರ್ಕಾರವು ಇನ್ನುಮುಂದೆ ಅಂಥ ವಿಷಯಗಳಿಗೆ ಪ್ರೋತ್ಸಾಹ ನೀಡುವುದಿಲ್ಲ. ದೆಹಲಿ, ಕಲ್ಕತ್ತಾ ಮುಂತಾದ ಸ್ಥಳಗಳಲ್ಲಿ ಸ್ನಾತಕೋತ್ತರ ಕೋರ್ಸ್‌ಗಳ ಅಧ್ಯಯನಕ್ಕಾಗಿ ಮತ್ತು ವಿಶೇಷ ಜ್ಞಾನವನ್ನು ಪಡೆಯುವುದಕ್ಕಾಗಿ ಏರ್ಪಾಟುಗಳನ್ನು ಮಾಡಲಾಗುವುದು.

ನಾವು ಹಲವಾರು ಕುಟುಂಬ ಯೋಜನಾ ಕೇಂದ್ರಗಳನ್ನು ಹೊಂದಿದ್ದೇವೆ. ಕುಟುಂಬ ಯೋಜನಾ ಮಂಡಲಿಗಳಿದ್ದು, ಜಿಲ್ಲೆಗಳಲ್ಲಿಯೂ ಸಹ ಸಮಿತಿಗಳು ಇರುತ್ತವೆ. ಆದರೆ ಜನರ ನಿರೀಕ್ಷೆಯ ಮಟ್ಟಕ್ಕೆ ಕಾರ್ಯಪ್ರಗತಿ ಆಗಿರುವುದಿಲ್ಲ ಎಂಬುದನ್ನು ನಾನು ಒಪ್ಪಿಕೊಳ್ಳಲೇಬೇಕು. ಅದಕ್ಕೆ ಮುಖ್ಯ ಕಾರಣವೆಂದರೆ, ಆರೋಗ್ಯ ಶಿಕ್ಷಣದ ಬಗ್ಗೆ ಪ್ರಚಾರವನ್ನು ಮಾಡಬೇಕಾಗಿದ್ದು ಈ ಸಂಬಂಧವಾಗಿ ಇದು

ತಲುಪಿರುವುದಿಲ್ಲ ಅಥವಾ ಅವರಿಗೆ ಮನವರಿಕೆ ಮಾಡಿರುವುದಿಲ್ಲ. ಯೋಜನೆಯ ಯಶಸ್ಸಿಗಾಗಿ ಸಾಮಾನ್ಯ ವ್ಯಕ್ತಿಗೆ ಇವನ್ನು ಮನವರಿಕೆ ಮಾಡುವಂತಿರುವ ಜನರು ಮುಂದೆ ಬರಬೇಕಾಗಿರುವುದು ತುಂಬಾ ಅವಶ್ಯಕವಾಗಿದೆ. ಈ ಅಂಶವಾಗಿ ಅಪೇಕ್ಷೆ ಮತ್ತು ಆಸಕ್ತಿಯುಳ್ಳ ಈ ವ್ಯಕ್ತಿಗಳು ಪ್ರಚಾರ ಕಾರ್ಯವನ್ನು ಮಾಡಲು ಮುಂದೆಬರಬೇಕು ಮತ್ತು ಹಲವಾರು ಏಜೆನ್ಸಿಗಳ ನಡುವೆ ಅಂದರೆ, ಆರೋಗ್ಯ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಸಮಾಜ ಕಲ್ಯಾಣ ಮಂಡಳಿ ಮತ್ತು ಖಾಸಗಿ ಏಜೆನ್ಸಿಗಳ ಮಧ್ಯೆ ಈ ಕಾರ್ಯದ ಬಗ್ಗೆ ಅನ್ಯೋನ್ಯ ಸಂಬಂಧವು ಇರಬೇಕು.

ಆಯವ್ಯಯದಲ್ಲಿ ನಿಗದಿಪಡಿಸಿರುವ ಹಣದಲ್ಲಿ ಶೇಕಡ 50ರಷ್ಟನ್ನು ವೈದ್ಯಕೀಯ ಮಹಾವಿದ್ಯಾಲಯಗಳಿಗೆ ಖರ್ಚು ಮಾಡುತ್ತಿರುವ ಬಗ್ಗೆ ಸದಸ್ಯರು ಮಾಡಿದ ಟೀಕೆಗೆ ಉತ್ತರಿಸುತ್ತ, ಉತ್ತಮ ಗುಣಮಟ್ಟದ ಮಹಾವಿದ್ಯಾಲಯಗಳ ಮತ್ತು ಸಾಕಷ್ಟು ಪ್ರಮಾಣದ ವೈದ್ಯರುಗಳು ಲಭ್ಯವಾಗದಿದ್ದಲ್ಲಿ, ಆರೋಗ್ಯ ಇಲಾಖೆಯ ಸೌಲಭ್ಯಗಳು ಗ್ರಾಮಗಳಿಗೆ ತಲುಪಲು ಅಸಾಧ್ಯವೆಂದು ಅಭಿಪ್ರಾಯಪಟ್ಟರು.

## ಆರೋಗ್ಯ ಸೌಲಭ್ಯಗಳು ಜನಸಾಮಾನ್ಯರನ್ನು ಮುಟ್ಟಲು ವೈದ್ಯರ ಅಗತ್ಯದ ಸಮರ್ಥನೆ

ನಮ್ಮ ರಾಜ್ಯದ ಮಕ್ಕಳ ಬಗ್ಗೆ ಹೇಳುವುದಾದರೆ, ನಾನು ಕೆಲವು ಮಾತುಗಳನ್ನು ಹೇಳಲು ಬಯಸುತ್ತೇನೆ. ಮಕ್ಕಳು ನಮ್ಮ ರಾಷ್ಟ್ರದ ಸಂಪತ್ತು. ಈಗಿರುವಂತೆ ನಮ್ಮ ರಾಜ್ಯದಲ್ಲಿ ಮಕ್ಕಳಿಗೆ ನೀಡುತ್ತಿರುವ ಚಿಕಿತ್ಸೆಯು ಯಾವುದೇ ರೀತಿಯಲ್ಲಿ ತೃಪ್ತಿಕರವಾಗಿಲ್ಲ. ನಾವು ಪ್ರತ್ಯೇಕವಾದ ಮಕ್ಕಳ ಆಸ್ಪತ್ರೆಯನ್ನು ಹೊಂದಿಲ್ಲ. ಮೂರು ಅಥವಾ ನಾಲ್ಕು ಸ್ಥಳಗಳಲ್ಲಿ ಮಾತ್ರ ಮಕ್ಕಳ ವಾರ್ಡುಗಳನ್ನು ಹೊಂದಿದ್ದು, ಅದೃಷ್ಟವಶಾತ್, ವಿಶ್ವ ಆರೋಗ್ಯ ಸಂಸ್ಥೆಯು ನಮಗೆ ಎಲ್ಲಾ ರೀತಿಯ ನೆರವನ್ನು ನೀಡುತ್ತಿದ್ದು, ಮಕ್ಕಳಿಗಾಗಿ ಆರೋಗ್ಯ ಸೌಲಭ್ಯಗಳನ್ನು ವ್ಯವಸ್ಥೆ ಮಾಡುವಲ್ಲಿ ಸಹಾಯ ಮಾಡುತ್ತಿದೆ. ಮಕ್ಕಳು ಆರೋಗ್ಯದಿಂದಿದ್ದು ಸರಿಯಾದ ವಾತಾವರಣದಲ್ಲಿ ಬೆಳೆಯುತ್ತಿದ್ದರೆ ಮಾತ್ರ ಜನರಿಗೆ ಸಂತೋಷ ಮತ್ತು ಮನಃಶಾಂತಿ ಇರುತ್ತದೆ. ಅಂಗವಿಕಲ ಸರಾಸರಿಯು ಶೇ. 10 ರಷ್ಟಿರುವುದಾಗಿ ಕಂಡುಬಂದಿದೆ. ಮಾನಸಿಕ ಮತ್ತು ದೈಹಿಕ ಅಂಗವಿಕಲತೆಯು ಇದೆ. ಜೀವಸತ್ವ ಪ್ರೊಟೀನ್‌ಗಳ ಅಥವಾ ಖನಿಜಾಂಶಗಳ ಕೊರತೆಯು ಇದೆ. ಇದಕ್ಕೆ, ಸರಳ ಪರಿಹಾರೋಪಾಯಗಳು ಸಾಕಾಗುತ್ತದೆ. ಸುಮಾರು ಶೇ. 5ರಷ್ಟು ಅಥವಾ ಹೆಚ್ಚೆಂದರೆ ಶೇ. 10ರಷ್ಟು ಮಕ್ಕಳ ಸಂಬಂಧದಲ್ಲಿ ಮಾತ್ರ ಆಸ್ಪತ್ರೆಗಳಲ್ಲಿ ಅಥವಾ ತಜ್ಞರಿಂದ ಅಗತ್ಯವಾಗಿರುತ್ತದೆ. ಅದಕ್ಕಾಗಿ ಶಾಲಾ ಆರೋಗ್ಯ ಸೇವೆಗಳೆಂದು ಕರೆಯಲ್ಪಡುವ ವ್ಯವಸ್ಥೆಗಳ ಮೂಲಕ ಏರ್ಪಾಟುಗಳನ್ನು ಮಾಡಲಾಗುವುದು.

ಇದನ್ನು ಸರಿಯಾಗಿ ವ್ಯವಸ್ಥೆ ಮಾಡಲಾಗಿರುವುದಿಲ್ಲ ಮತ್ತು ಕೆಲವು ಸ್ಥಳಗಳಲ್ಲಿ ಮಕ್ಕಳ ಆರೋಗ್ಯ ಪರೀಕ್ಷೆಯನ್ನು ಮಾಡಲಾಗಿರುವುದಿಲ್ಲ. ಅವಶ್ಯಕವಿದ್ದಲ್ಲೆಲ್ಲಾ ಅವರ ಆರೋಗ್ಯ ಪರೀಕ್ಷೆ ಮಾಡಿದ ನಂತರ, ಅವರ ಆಹಾರಕ್ಕೆ ಸ್ವಲ್ಪಮಟ್ಟಿನ ಜೀವಸತ್ವಗಳನ್ನು ಸೇರಿಸುವ ಮೂಲಕ ಅವಶ್ಯವಾಗಿರುವಲ್ಲಿ ಇದನ್ನು ಮುಂದುವರೆಸಬೇಕು. ಇವರನ್ನು ಕೇಂದ್ರ ಕಾರ್ಯಸ್ಥಾನದ ಆಸ್ಪತ್ರೆಗಳಿಗೆ, ಅಗತ್ಯವಾದರೆ ಅಂಗವಿಕಲತೆಯ ಪರಿಹಾರೋಪಾಯದ ಎಲ್ಲಾ ಸೌಲಭ್ಯಗಳಿರುವ ರಾಜ್ಯ ಅಥವಾ ನಗರ ಆಸ್ಪತ್ರೆಗಳಿಗೆ ಕರೆದುಕೊಂಡು ಹೋಗಲು ಏರ್ಪಾಡುಗಳನ್ನು ಮಾಡಬೇಕು.

ಜಿಲ್ಲಾ ಹಾಗೂ ತಾಲ್ಲೂಕು ಕೇಂದ್ರಸ್ಥಾನದಲ್ಲಿ ಪ್ರಯೋಗ ಶಾಲೆಗಳು ಸ್ಥಾಪಿಸಲು ಸರ್ಕಾರವು ಈಗಾಗಲೇ ಕ್ರಮ ತೆಗೆದುಕೊಂಡಿದೆಯೆಂದು ಅವರು, ಮರಣೋತ್ತರ ಪರೀಕ್ಷೆಯನ್ನು ಸಕಾಲದಲ್ಲಿ ನಡೆಸಲು ವಿಳಂಬವಾಗುತ್ತಿರುವ ಕುರಿತಂತೆ ವ್ಯಕ್ತವಾದ ಟೀಕೆಗೆ ಉತ್ತರಿಸುತ್ತಾ, ಈ ವಿಷಯವನ್ನು ವಿಚಾರಣೆ ಮಾಡುತ್ತೇನೆಂದು ಭರವಸೆ ನೀಡಿದರು. ದಾಂಡೇಲಿ ಪ್ರದೇಶದಲ್ಲಿ ಕಂಡುಬಂದಿರುವ ಹೊಸ ಬಗೆಯ ರೋಗದ ಬಗ್ಗೆ, ರೋಗಿಗಳಿಗೆ ಹುಬ್ಬಳ್ಳಿ ವೈದ್ಯಕೀಯ ಮಹಾವಿದ್ಯಾಲಯ ಆಸ್ಪತ್ರೆಯಲ್ಲಿ ಶುಶ್ರೂಷೆ ಮಾಡಿದ್ದರಿಂದ ಅನೇಕ ರೋಗಿಗಳು ಗುಣಮುಖರಾಗಿ ವಾಪಸ್ಸು ತೆರಳಿರುವ ಪ್ರಯುಕ್ತ ಪೂರ್ಣ ಪ್ರಮಾಣದ ತನಿಖೆ ನಡೆಸಲು ಸಾಧ್ಯವಾಗಿಲ್ಲವೆಂದೂ, ಆದರೂ ಈ ನಿಟ್ಟಿನಲ್ಲಿ ಸಂಶೋಧನೆ ಮುಂದುವರೆದಿದೆ ಎಂದು ಹೇಳಿದರು.

## ಆಸ್ಪತ್ರೆಗಳಲ್ಲಿ ಪ್ರಯೋಗಶಾಲೆ ಸ್ಥಾಪನೆಗೆ ಕ್ರಮ

ಉನ್ನತ ಶಿಕ್ಷಣ ಪಡೆಯಲು ವಿದೇಶಗಳಿಗೆ ಹೋಗಿ ಸ್ವದೇಶಕ್ಕೆ ಬಾರದೇ ಅಲ್ಲಿಯೇ ಉಳಿಯುತ್ತಿರುವ ಕುರಿತು ಪ್ರಸ್ತಾಪಿಸಿದ ವಿಚಾರಗಳ ಕುರಿತು ಸ್ಪಂದಿಸಿದ ಅವರು, ಆ ವಿಷಯ ಸರ್ಕಾರದ ಗಮನಕ್ಕೆ ಬಂದಿದ್ದು, ಸ್ನಾತಕೋತ್ತರ ಮತ್ತು ಸ್ಪೆಷಲೈಜೇಶನ್ ಕೋರ್ಸ್‌ಗಳನ್ನು ದೆಹಲಿ ಮತ್ತು ಕಲ್ಕತ್ತಾ ನಗರಗಳಲ್ಲಿ ನಡೆಸಲು ಏರ್ಪಾಡು ಮಾಡಲಾಗುವುದೆಂದು ಹೇಳಿದರು.

## ಸ್ನಾತಕೋತ್ತರ ಶಿಕ್ಷಣಕ್ಕೆ
## ದೇಶಾದ್ಯಂತ ವ್ಯವಸ್ಥೆ

ಕುಟುಂಬ ಯೋಜನಾ ಕಾರ್ಯಕ್ರಮದ ಬಗ್ಗೆ ಜನರಲ್ಲಿ ಅರಿವು ಮೂಡಿಸಲು ಆಸಕ್ತಿ ಇರುವವರು ಮುಂದೆ ಬಂದು ಪ್ರಚಾರ ಮಾಡಬೇಕೆಂದು ಮನವಿ ಮಾಡಿದರು. ಮಕ್ಕಳ ಆರೋಗ್ಯದ ಬಗ್ಗೆ ಸರ್ಕಾರವು ಹೆಚ್ಚು ಒತ್ತು ನೀಡಿ ಶಾಲಾ ಆರೋಗ್ಯ

ಸೇವೆಯನ್ನು ಏರ್ಪಾಡು ಮಾಡಲಾಗುವುದೆಂದು ತಿಳಿಸುತ್ತಾ, ಮಕ್ಕಳ ಆರೋಗ್ಯ ತಪಾಸಣೆ ನಡೆಸಲು ಏರ್ಪಾಡು ಮಾಡಲಾಗುವುದು ಎಂದು ಹೇಳಿದರು. ಮಧ್ಯಾಹ್ನದ ಊಟ ಅಥವಾ ಪೌಷ್ಟಿಕ ಆಹಾರ ಸರಬರಾಜು ಮಾಡುವ ಬಗ್ಗೆ ಆರೋಗ್ಯ ಮತ್ತು ವಿದ್ಯಾ ಇಲಾಖೆ ಹಾಗೂ ಸಮಾಜ ಕಲ್ಯಾಣ ಇಲಾಖೆಗಳು ಜಂಟಿಯಾಗಿ ಕಾರ್ಯಕ್ರಮ ಹಮ್ಮಿಕೊಳ್ಳುವುದು ಅವಶ್ಯವೆಂದು ಅಭಿಪ್ರಾಯಪಟ್ಟರು. ಗರ್ಭಿಣಿ ಸ್ತ್ರೀಯರು ಸಹ ತಮ್ಮ ಆರೋಗ್ಯದ ಬಗ್ಗೆ ಗಮನ ನೀಡಿ ಆರೋಗ್ಯವಂತ ಮಕ್ಕಳ ಜನನಕ್ಕೆ ಸಹಾಯಕವಾಗಬೇಕೆಂದು ತಿಳಿಸಿದರು. ಔಷಧ ನಿಯಂತ್ರಣ ಇಲಾಖೆಯನ್ನು ಪ್ರತ್ಯೇಕ ಘಟಕವೆಂದು ಮಾಡುವುದು ಅವಶ್ಯವೆಂದು ಹೇಳಿದರು.

ಈ ಸಂಬಂಧವಾಗಿ, ನಮ್ಮ ರಾಜ್ಯದ ಮಕ್ಕಳಿಗೆ ಲಭ್ಯವಾಗುವಂತೆ ಮಾಡಬೇಕಾದ ಮಧ್ಯಾಹ್ನದ ಊಟ ಅಥವಾ ಹಾಲಿನ ಪುಡಿ ಅಥವಾ ಪ್ರೋಟೀನ್‌ಯುಕ್ತ ಆಹಾರದ ಬಗ್ಗೆ ಕೆಲವು ವಿಷಯಗಳನ್ನು ಹೇಳಲು ಬಯಸುತ್ತೇನೆ. ಇದು ಸಂಪೂರ್ಣವಾಗಿ ಆರೋಗ್ಯ ಮಂತ್ರಿಯವರ ಕಾರ್ಯಕ್ಷೇತ್ರವಾಗಿದ್ದಾಗ್ಯೂ, ಆರೋಗ್ಯ, ಶಿಕ್ಷಣ ಮತ್ತು ಸಮಾಜ ಕಲ್ಯಾಣ ಇಲಾಖೆಗಳ ಮಂತ್ರಿಗಳು ಒಟ್ಟಿಗೆ ಕೆಲಸ ಮಾಡಿ ಮತ್ತು ಇವುಗಳೆಲ್ಲವನ್ನು ಒದಗಿಸಲು, ವಿತರಿಸಲು ಮತ್ತು ಲೆಕ್ಕ ಕೊಡಲು ಸರಿಯಾದ ಆಡಳಿತ ಯಂತ್ರವನ್ನು ಸ್ಥಾಪಿಸುವಂತೆ ನೋಡಿಕೊಳ್ಳುವುದು ಅಗತ್ಯವಾಗಿರುವುದಾಗಿ ಮತ್ತು ಕಾರ್ಯಸಾಧ್ಯವಾಗಿರುವುದಾಗಿ ನಮಗೆ ಕಂಡುಬಂದಿದೆ. ಯಾವುದೇ ಸರಿಯಾದ ಆಡಳಿತ ಯಂತ್ರವು ಇರದಿದ್ದು, ಯಾವುದೇ ಆಡಳಿತ ಯಂತ್ರ ಇದ್ದುದಾಗಿದ್ದರೆ ಅವುಗಳು ನ್ಯೂನತೆವುಳ್ಳವು ಆಗಿದ್ದವು. ಈಗಾಗಲೇ ಈ ದಿಶೆಯಲ್ಲಿ ಕೆಲವು ಕ್ರಮಗಳನ್ನು ಕೈಗೊಳ್ಳಲಾಗಿದ್ದು ಅನ್ಯೋನ್ಯ ಸಂಬಂಧದ ಪ್ರಯತ್ನಗಳೊಂದಿಗೆ ಈ ಕಾರ್ಯಗಳಿಗೆ ದೀರ್ಘ ಸಮಯವು ಬೇಕಾಗಿದ್ದು ಆಗ ನಾವು ಊಟ, ಬಹು ಉದ್ದೇಶಿತ ಆಹಾರ ಅಲ್ಲದೆ ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳು ಮತ್ತು ಗರ್ಭಿಣಿ ಸ್ತ್ರೀಯರಿಗೆ ಪೂರಕ ಹಾಲಿನ ಪುಡಿಗಳನ್ನು ಪೂರೈಸುವ ಸ್ಥಿತಿಯನ್ನು ನಾವು ತಲುಪಬಹುದೆಂಬ ವಿಶ್ವಾಸವು ನನಗಿದೆ. ಈ ಸಂಬಂಧದಲ್ಲಿ ತಂದೆತಾಯಿಯರ ಮತ್ತು ಅಂತೆಯೇ ಸರ್ಕಾರದ ಜವಾಬ್ದಾರಿಯು ಮಗು ತಾನು ಗರ್ಭಾಶಯದಲ್ಲಿರುವಾಗಲೇ ಪ್ರಾರಂಭವಾಗುತ್ತದೆಂದು ನಾನು ಹೇಳಲು ಬಯಸುತ್ತೇನೆ. ಹಾಗಾಗಿ, ಮಗು ಆರೋಗ್ಯದಿಂದಿರಬೇಕಾದರೆ, ಗರ್ಭಿಣಿ ಸ್ತ್ರೀ ಕೂಡ ಆರೋಗ್ಯಳಾಗಿರಬೇಕು ಎಂಬುದು ತುಂಬಾ ಅಗತ್ಯ. ಆಕೆ ಆರೋಗ್ಯದ ಎಲ್ಲಾ ನಿಯಮಗಳನ್ನು ತಿಳಿದುಕೊಂಡಿರಬೇಕು ಮತ್ತು ಆಕೆ ಒಳ್ಳೆಯ ಆಹಾರವನ್ನು ತೆಗೆದುಕೊಳ್ಳುವ ಮೂಲಕ ಮತ್ತು ಉತ್ತಮ ಪರಿಸರದಲ್ಲಿ ವಾಸವಾಗಿರುವ ಮೂಲಕ ತನ್ನ ಆರೋಗ್ಯದ ಬಗ್ಗೆ ಎಚ್ಚರಿಕೆ ವಹಿಸಬೇಕು ಹಾಗೂ ಆಕೆಯನ್ನು ಯಾವುದೇ

ಖಾಯಿಲೆಯಿಂದ ಬಳಲದಂತೆಯೂ ಸಹ ನೋಡಿಕೊಳ್ಳಬೇಕು. ಅಂತೆಯೇ ಮಗು ಹುಟ್ಟಿದಂದಿನಿಂದ, ತಾಯಿ ಮತ್ತು ಮಗುವಿನ ಆರೈಕೆಯನ್ನು ಮುಂದುವರೆಸಬೇಕು. ನಾವು ಈ ಮಕ್ಕಳನ್ನು ನೋಡಿಕೊಳ್ಳುವ ಏರ್ಪಾಟುಗಳನ್ನು ಮಾಡುವ ಕಾಲದಲ್ಲಿ, ಖಾಸಗಿ ಏಜೆನ್ಸಿಗಳು ಮತ್ತು ಸಾಮಾಜಿಕ ಕಾರ್ಯಕರ್ತರು ಮತ್ತು ಸಂಸ್ಥೆಗಳ ಸಹಾಯವನ್ನೂ ಸಹ ಪಡೆದುಕೊಳ್ಳಬೇಕು. ಔಷಧ ನಿಯಂತ್ರಣ ಆಡಳಿತ ನಿರ್ವಹಣೆಯು ಇರುತ್ತದೆ. ಇದು ಜನರಿಂದ ನಕಲಿ ಔಷಧಿಗಳು ಮತ್ತು ಕಳಪೆ ಗುಣಮಟ್ಟದ ಔಷಧಿಗಳನ್ನು ಮಾರಾಟ ಮಾಡದಂತೆ ಅಥವಾ ಸಿದ್ಧಪಡಿಸದಂತೆ ಅಥವಾ ತಯಾರಿಸದಂತೆ ನೋಡಿಕೊಳ್ಳುತ್ತದೆ ಮತ್ತು ಬಡ ಜನರಿಗೆ ಸರಿಯಾದ ಔಷಧಿಗಳು ಸರಿಯಾದ ಸಮಯದಲ್ಲಿ ಲಭ್ಯವಾಗುವಂತೆ ನೋಡಿಕೊಳ್ಳುತ್ತದೆ. ಈ ಔಷಧ ನಿಯಂತ್ರಣ ಇಲಾಖೆಯಿಂದ ಉತ್ತಮವಾದ ಕೆಲಸವನ್ನು ಮಾಡಲಾಗಿದ್ದು ಸರ್ಕಾರಕ್ಕೆ ಇದನ್ನು ಪ್ರತ್ಯೇಕವಾದ ಮತ್ತು ಸ್ವತಂತ್ರ್ಯವಾದ ವಿಭಾಗವನ್ನಾಗಿ ಮಾಡಬೇಕಾದ ಅಗತ್ಯತೆಯು ಕಂಡುಬಂದಿರುತ್ತದೆ. ಔಷಧ ವಿಜ್ಞಾನದಲ್ಲಿ (ಫಾರ್ಮಸಿ) ಡಿಪ್ಲೋಮೊ ಮತ್ತು ಪದವಿ ಕೋರ್ಸುಗಳನ್ನು ಪ್ರಾರಂಭಿಸುವ ಯೋಜನೆಯು ಸರ್ಕಾರದ ತೀವ್ರ ಪರಿಶೀಲನೆಯಲ್ಲಿದೆ. ಆಹಾರ ಪದಾರ್ಥಗಳಲ್ಲಿ ಕಲಬೆರಕೆ ಮಾಡುವುದು ಅಪಾಯಕಾರಿಯಾಗಿರುತ್ತದೆ. ಆದರೆ ನಕಲಿ ಅಥವಾ ಕಳಪೆ ಗುಣಮಟ್ಟದ ಔಷಧಿಗಳ ತಯಾರಿಕೆ ಮತ್ತು ಮಾರಾಟವು ಇದಕ್ಕಿಂತಲೂ ಹೆಚ್ಚು ಅಪಾಯಕಾರಿಯಾಗಿರುತ್ತದೆ. ಮೊದಲನೆಯದು ಆಹಾರ ಪದಾರ್ಥಗಳಲ್ಲಿ ಕಲಬೆರಕೆ ಮಾಡುವುದಾದರೆ ನಂತರದ್ದು ಔಷಧಗಳಲ್ಲಿ ಕಲಬೆರಕೆ ಮಾಡುವುದಾಗಿರುತ್ತದೆ. ಇದನ್ನು ರಾಷ್ಟ್ರ ವಿರೋಧಿ ಕ್ರಮವನ್ನಾಗಿ ಪರಿಗಣಿಸಬೇಕು. ಇದನ್ನು ಸರ್ಕಾರವು ತಾನು ಅಧೀನದಲ್ಲಿಟ್ಟುಕೊಳ್ಳಬಹುದಾದ ಬಲ ಮತ್ತು ಶಕ್ತಿಯಿಂದ ವಿಚಾರಿಸಿಕೊಳ್ಳಬೇಕಾಗುತ್ತದೆ.

ಕಲಬೆರಕೆ ಮತ್ತು ಕಳಪೆ ಗುಣಮಟ್ಟದ ಔಷಧ ಮಾರಾಟವನ್ನು ತಡೆಗಟ್ಟಲು ಸರ್ಕಾರವು ಕಠಿಣ ಕ್ರಮ ತೆಗೆದುಕೊಳ್ಳುವುದೆಂದು ಹೇಳಿದರು. ಕಲಬೆರಕೆ ಆಹಾರ ಮತ್ತು ಔಷಧಿ ಮಾರಾಟವನ್ನು ತಡೆಗಟ್ಟುವಲ್ಲಿ ಇಡೀ ರಾಜ್ಯಕ್ಕೆ ಅನ್ವಯವಾಗುವಂತೆ ಇರುವ ಕಾಯಿದೆಯನ್ನು ತಿದ್ದುಪಡಿ ಮಾಡಬೇಕಾಗಿದೆ ಎಂದು ಸದನಕ್ಕೆ ತಿಳಿಸಿದರು.

## ಔಷಧ ಮಾರಾಟಕ್ಕೆ ತಡೆ

ಆಹಾರ ಪದಾರ್ಥಗಳ ಕಲಬೆರಕೆಗೆ ಸಂಬಂಧಿಸಿದಂತೆ, ಮೈಸೂರು ಆಹಾರ ಪದಾರ್ಥಗಳ ಕಲಬೆರಕೆ ಪ್ರತಿಬಂಧಕ ನಿಯಮ, 1960 ಜಾರಿಯಲ್ಲಿರುತ್ತದೆ. ಇದು 1954ರ ಕೇಂದ್ರಾಧಿನಿಯಮವಾಗಿರುತ್ತದೆ. ಇದಕ್ಕೆ ಸೂಕ್ತವಾಗಿ ತಿದ್ದುಪಡಿ

ಮಾಡಬೇಕಾಗಿರುತ್ತದೆ. ಇಂದಿನ ಪರಿಸ್ಥಿತಿ ಹೀನಾಗಿದೆ ಎಂದರೆ. ಕಲಬೆರಕೆಯಾಗದಂಥ ಯಾವುದೇ ರೀತಿಯ ಆಹಾರ ಪದಾರ್ಥವು ಇರುವುದಿಲ್ಲ. ಕೇಂದ್ರ ಸರ್ಕಾರವು ಇದನ್ನು ಒಪ್ಪಿಕೊಂಡಿದೆ ಮತ್ತು ರಾಜ್ಯ ಸರ್ಕಾರವು ಇದನ್ನು ಒಪ್ಪಿಕೊಂಡಿದೆ ಹಾಗೂ ಜನರು ಇದನ್ನು ಯಾತನಾಮಯವಾಗಿ ಅರಿತವರಾಗಿದ್ದಾರೆ. ಈ ಅಧಿನಿಯಮಕ್ಕೆ ಸೂಕ್ತವಾಗಿ ತಿದ್ದುಪಡಿ ಮಾಡದ ಹೊರತು, ನಾವು ಇದನ್ನು ಜಾರಿಗೊಳಿಸಲು ಸಾಧ್ಯವಾಗುವುದಿಲ್ಲ. ಇದಕ್ಕೂ ಸಹ, ಜನರ ಸಹಕಾರವು ತುಂಬಾ ತುಂಬಾ ಅಗತ್ಯವಾಗಿರುತ್ತದೆ. ಇಲ್ಲದಿದ್ದಲ್ಲಿ ಕೇವಲ ಪ್ರತಿಬಂಧಕ ಅಧಿನಿಯಮದ ಜಾರಿ ರೀತಿಯಾಗಿ ಮಾತ್ರ ಆಗುತ್ತದೆ. ಇಲ್ಲಿ, ಈಗಿರುವಂತೆಯೇ ಸ್ಥಳೀಯ ಮಂಡಳಿಗಳು ಮಾತ್ರ ತಮ್ಮ ಆರೋಗ್ಯ ಇಲಾಖೆಗಳ ಮೂಲಕ ಕ್ರಮ ತೆಗೆದುಕೊಳ್ಳುತ್ತವೆ ಇದು ಗ್ರಾಮಗಳಿಗೂ ಹರಡಿರುತ್ತದೆ. ಗ್ರಾಮಗಳಲ್ಲಿಯೂ ಕೂಡ ಜನರ ನೈತಿಕ ಮಟ್ಟವು ಗಣನೀಯವಾಗಿ ಕಡಿಮೆಯಾಗಿರುತ್ತವೆ. ಆಹಾರ ಪದಾರ್ಥಗಳ ಕಲಬೆರಕೆಯು ನಗರಗಳಲ್ಲಿ ಭಯಂಕರವಾಗಿದೆ. ಇಂತಹ ಕೆಲವು ಪ್ರಕರಣಗಳನ್ನು ಹಿಂದಕ್ಕೆ ಪಡೆದುಕೊಂಡಿರುವ ಘಟನೆಗಳು ನಡೆದಿರುತ್ತವೆ. ಬಹುತೇಕ ಪ್ರಕರಣಗಳಲ್ಲಿ, ಅವರುಗಳನ್ನು ಅಪರಾಧಿಗಳೆಂದು ತೀರ್ಮಾನಿಸಿರುವುದಿಲ್ಲ. ಕಾನೂನಿನ ನಿಯಮಗಳಿಂದ ತಪ್ಪಿಸಿಕೊಳ್ಳುವ ಉಪಾಯಗಳ ಕಾರಣದಿಂದ ಅಥವಾ ನಾವು ಈ ವಸ್ತುಗಳನ್ನು ವಿಶ್ಲೇಷಣೆ ಮಾಡಿ ತಪ್ಪಿತಸ್ಥರನ್ನು ಶಿಕ್ಷಿಸುವಂತಹ ಸುಸಜ್ಜಿತವಾದ ಆಧುನಿಕ ಪ್ರಯೋಗಾಲಯಗಳು ನಮ್ಮಲ್ಲಿ ಇಲ್ಲದಿರುವುದರ ಕಾರಣದಿಂದ ಅವರುಗಳು ಹೊರಬರುತ್ತಿದ್ದಾರೆ. ಹಾಗಾಗಿ, ಈ ಆಹಾರ ಪದಾರ್ಥಗಳ ಕಲಬೆರಕೆ ಅಧಿನಿಯಮಕ್ಕೆ ಸೂಕ್ತವಾಗಿ ತಿದ್ದುಪಡಿ ಮಾಡಿ ಇದು ಇಡೀ ರಾಜ್ಯಕ್ಕೆ ಅನ್ವಯವಾಗುವಂತೆ ಮಾಡಬೇಕು ಎಂಬುದು ನನ್ನ ಭಾವನೆಯಾಗಿರುತ್ತದೆ.

**ಶ್ರೀ ವಿ.ಎಸ್. ಪಾಟೀಲ್ (ಬೆಳಗಾವಿ 1):** ಉದ್ದೇಶಿತ ತಿದ್ದುಪಡಿ ಅಧಿನಿಯಮವನ್ನು ಅಂಗೀಕರಿಸುವ ಮೂಲಕ ವಿಶ್ಲೇಷಣೆ ಮಾಡುವುದಕ್ಕಾಗಿ ನಾವು ಉತ್ತಮ ರೀತಿಯ ಪ್ರಯೋಗಾಲಯವನ್ನು ಪಡೆಯಲಿದ್ದೇವೆಯೇ ಎಂಬುದನ್ನು ಮಾನ್ಯ ಮಂತ್ರಿಗಳು ತಿಳಿಸಬೇಕಾಗಿ ನಾನು ವಿನಂತಿಸುತ್ತೇನೆ.

**ಶ್ರೀ ಕೆ. ನಾಗಪ್ಪ ಆಳ್ವ:** ನಾನು ಹೇಳಿರುವುದು ಅದನ್ನೇ. ಈಗಾಗಲೇ ಸರ್ಕಾರವು ಅಂತಹ ರೀತಿಯ ಪ್ರಯೋಗಾಲಯವನ್ನು ಸ್ಥಾಪಿಸಲು ನಿರ್ಧರಿಸಿದೆ.

ನಂತರ, ಆರೋಗ್ಯ ಮತ್ತು ಔಷಧಶಾಸ್ತ್ರ ಈ ಎರಡೂ ಇಲಾಖೆಗಳ ಸಂಯೋಜನೆ ಬಗ್ಗೆ, ಇದು ತುಂಬಾ ಅಗತ್ಯವಾಗಿರುತ್ತದೆ ಎಂಬುದು ನನ್ನ ಅಭಿಪ್ರಾಯವಾಗಿದೆ. ಈಗಾಗಲೇ ಇದು ತಾಲ್ಲೂಕು ಮತ್ತು ಜಿಲ್ಲಾ ಮಟ್ಟಕ್ಕೆ ಬಂದಿದ್ದು ಶೀಘ್ರವಲ್ಲಿಯೇ ಇವೆರಡನ್ನು ಒಬ್ಬ ನಿರ್ದೇಶಕರ ಪ್ರಭಾರದಲ್ಲಿಡಲಾಗುವುದು.

ರಾಷ್ಟ್ರೀಯ ಆನೆಕಾಲು ರೋಗ ನಿಯಂತ್ರಣ ಕಾರ್ಯಕ್ರಮದ ಅಡಿಯಲ್ಲಿ ಸರ್ಕಾರ ಗರಿಷ್ಠ ಮಟ್ಟದಲ್ಲಿ ತನ್ನ ವೈದ್ಯಕೀಯ ಪರಿಹಾರೋಪಾಯಗಳನ್ನು ಕೈಗೊಳ್ಳುತ್ತಿದ್ದು ಇದಕ್ಕೆ ಪೂರಕವಾಗಿರುವ ಕುಡಿಯುವ ನೀರು ಮತ್ತು ಒಳ ಚರಂಡಿ ವ್ಯವಸ್ಥೆಯಲ್ಲಿ ಪ್ರಗತಿ ಸಾಧಿಸಬೇಕಾಗಿದೆ. ಈ ಕುರಿತು ಕೇಂದ್ರ ಸರ್ಕಾರದ ಆರ್ಥಿಕ ಸಹಕಾರಕ್ಕೆ ಪ್ರಯತ್ನಿಸುವುದು ಅವಶ್ಯಕ ಎಂದು ಪ್ರತಿಪಾದಿಸಿದರು. ಹಾಗೆ ಮಲೇರಿಯಾ, ಕುಷ್ಠರೋಗ, ಕ್ಷಯ ರೋಗಗಳ ನಿಯಂತ್ರಣ ಗುರಿಮುಟ್ಟುವಲ್ಲಿ ಸಾರ್ವಜನಿಕರು ಅರಿವು ಮೂಡಿಸಿಕೊಂಡು ಸರ್ಕಾರದ ಕಾರ್ಯಕ್ರಮಗಳಿಗೆ ಸ್ಪಂದಿಸಬೇಕೆಂದರು.

## ರೋಗಗಳ ನಿಯಂತ್ರಣಕ್ಕೆ
## ಜನರ ಸಹಕಾರ ಅಗತ್ಯ

ಮಲೇರಿಯಾ ನಿರ್ಮೂಲನಾ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ, 1964ರ ಹೊತ್ತಿಗೆ ನಮ್ಮ ರಾಜ್ಯದಲ್ಲಿ ಮಲೇರಿಯಾವನ್ನು ನಿರ್ಮೂಲನೆ ಮಾಡುವ ಸ್ಥಿತಿಯಲ್ಲಿರಬೇಕಾಗಿದ್ದು, ಹಾಗೆಯೇ ಈ ಹಂತಕ್ಕೆ ನಾವು ಬಂದಿರುತ್ತೇವೆ.

ನಂತರ ನಾವು ರಾಷ್ಟ್ರೀಯ ಫೈಲೇರಿಯಾ ನಿಯಂತ್ರಣ ಕಾರ್ಯಕ್ರಮವನ್ನು ಹಾಕಿಕೊಳ್ಳಬೇಕಾಗುತ್ತದೆ. ಇದು ತುಂಬಾ ಭಯಾನಕವಾದ ರೋಗವಾಗಿರುತ್ತದೆ. ಎಲ್ಲಾ ಪ್ರಮುಖ ನಗರಗಳು ಮತ್ತು ಪಟ್ಟಣಗಳಲ್ಲಿ ಸಮೀಕ್ಷೆಯನ್ನು ನಡೆಸಲಾಗಿದೆ. ಈ ನಿಯಂತ್ರಣ ಕಾರ್ಯಕ್ರಮವು ಮುಂದುವರೆಯುವುದು ಫೈಲೇರಿಯಾವನ್ನು ಸಂಪೂರ್ಣವಾಗಿ ನಿಯಂತ್ರಿಸಲು ಸಾಧ್ಯವಿಲ್ಲ. ಹಾಗೂ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಗಳನ್ನು ಎಲ್ಲಾ ಕಡೆ ಸಮರ್ಪಕವಾಗಿ ಮಾಡದ ಹೊರತು ಇವನ್ನು ನಿರ್ಮೂಲ ಮಾಡಲು ಸಾಧ್ಯವಿಲ್ಲ. ನೀರು ಸರಬರಾಜು ಮತ್ತು ಒಳಚರಂಡಿ ವಿಷಯವು ಸರ್ಕಾರದ ಗಮನವನ್ನು ಸೆಳೆದಿರುತ್ತದೆ. ಇದು ಮುಖ್ಯವಾಗಿ ಕೇಂದ್ರಕ್ಕೆ ಸಂಬಂಧಿಸಿದ ವಿಷಯವಾಗಿದ್ದು, ಕೇಂದ್ರದ ಸಹಾಯದೊಂದಿಗೆ ಹಾಗೂ ರಾಜ್ಯ ಆಯವ್ಯಯದಲ್ಲಿ ಒದಗಿಸಿದ ನಿಧಿಗಳಿಂದ, ಕುಡಿಯುವ ನೀರು ಸರಬರಾಜು ಮತ್ತು ಚರಂಡಿ ಸೌಲಭ್ಯಗಳನ್ನು ನೀಡಿ ಈ ರೋಗವನ್ನು ನಿಯಂತ್ರಿಸುವಂತೆ ಪ್ರಯತ್ನಪಡಲು ಸಾಧ್ಯವಾಗಬಹುದು.

ಕುಷ್ಠರೋಗ ತಡೆಗಟ್ಟಲು ಸರ್ಕಾರವು ನಾಲ್ಕೈದು ಕುಷ್ಠರೋಗ ನಿಯಂತ್ರಣ ಮತ್ತು ಪುನರ್ವಸತಿ ಕೇಂದ್ರಗಳನ್ನು ರಾಜ್ಯದಲ್ಲಿ ತೆರೆಯಲು ಕ್ರಮ ತೆಗೆದುಕೊಳ್ಳಲಾಗುವುದೆಂದು ಭರವಸೆ ನೀಡಿದರು. ಕ್ಷಯ ರೋಗ ನಿವಾರಣೆ ಕಾರ್ಯಕ್ರಮವನ್ನು ಹೆಚ್ಚು ಜಿಲ್ಲೆಗಳಿಗೆ ವಿಸ್ತರಿಸಲಾಗುವುದು ಎಂದು ಹೇಳಿದರು.

ಮತ್ತು 72 ಗಂಟೆಗಳವರೆಗೆ ಸಂರಕ್ಷಿಸಬೇಕಾಗುತ್ತದೆ. ಈ ಕಾರ್ನಿಯವನ್ನು ತಾಜಾತನದಲ್ಲಿ ಆರು ಗಂಟೆಗಳ ಒಳಗಾಗಿ ಮೃತ ದೇಹದಿಂದ ತೆಗೆಯಬೇಕಾಗುತ್ತದೆ. ಇದು ಶಸ್ತ್ರಚಿಕಿತ್ಸೆಯ ವಿಶೇಷ ಶಾಖೆಯಾಗಿದ್ದು ಭಾವನಾತ್ಮಕ ಆಕ್ಷೇಪಣೆಗಳು ಮತ್ತು ಕಾನೂನು ದೋಷಗಳ ಕಾರಣದಿಂದ ಇದನ್ನು ವೃದ್ಧಿಪಡಿಸಲು ಮತ್ತು ಬಳಕೆ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಅದನ್ನು ಶೀಘ್ರವಾಗಿ ಮಾಡಬೇಕಾಗುತ್ತದೆ. ನಮ್ಮ ಕೆಲವು ರಾಜ್ಯಗಳಲ್ಲಿ ಈಗಾಗಲೇ ಈ ಅಧಿನಿಯಮವು ಜಾರಿಯಲ್ಲಿದ್ದು ಹಾಗೆಯೇ ಶಸ್ತ್ರಚಿಕಿತ್ಸೆ ಕ್ರಮದಲ್ಲಿ ಮುಂದುವರಿದಿರುತ್ತಿದೆ. ಇಲ್ಲಿಯೂ ಸಹ ನಮ್ಮಲ್ಲಿ ತುಂಬಾ ಚೆನ್ನಾಗಿ ಅಭಿವೃದ್ಧಿ ಹೊಂದಿದ ಕಣ್ಣಿನ ಆಸ್ಪತ್ರೆಗಳಿರುತ್ತವೆ ಮತ್ತು ಇಲ್ಲಿ ಈ ಶಸ್ತ್ರಚಿಕಿತ್ಸೆಯಲ್ಲಿ ತರಬೇತಿ ಹೊಂದಿದ ತಜ್ಞರಿದ್ದು, ಅವರು ಈ ಶಸ್ತ್ರಚಿಕಿತ್ಸೆಯನ್ನು ಸಹ ಮಾಡುವ ಸ್ಥಿತಿಯಲ್ಲಿದ್ದಾರೆ. ಸ್ವಾಮಿ ಕಣ್ಣಿನ ದೃಷ್ಟಿಯನ್ನು ಕೊಡುವುದು ಅಥವಾ ಪಡೆಯುವುದನ್ನು ದೈವದತ್ತ ಕೊಡುಗೆ ಅಥವಾ ಭಗವಂತನ ಕೊಡುಗೆ ಎಂಬುದಾಗಿ ಪರಿಗಣಿಸಲಾಗಿದೆ. ಸರಿಯಾದ ಪ್ರಚಾರ ಮತ್ತು ಬಹಿರಂಗ ಪ್ರಕಟಣೆಯನ್ನು ಮಾಡಿದ ನಂತರ ಜನರ ಸಮ್ಮತಿಯನ್ನು ಪಡೆಯಲು ಯಾವುದೇ ರೀತಿಯಾದ ತೊಂದರೆಯು ಉಂಟಾಗುವುದಿಲ್ಲ. ಈ ವಿಧೇಯಕದಲ್ಲಿ ವ್ಯಕ್ತಿಗಳು ತಮ್ಮ ಮರಣದ ನಂತರ ತಮ್ಮ ಕಣ್ಣುಗಳನ್ನು ತೆಗೆದುಕೊಂಡು ಅವುಗಳನ್ನು ಇತರರಿಗೆ ಹಾಕಬಹುದೆಂದು ಲಿಖಿತದಲ್ಲಿ ಅಥವಾ ಮೌಖಿಕವಾಗಿ ಇಬ್ಬರು ಸಾಕ್ಷಿಗಳೊಂದಿಗೆ ತಮ್ಮ ಅಭಿಪ್ರಾಯಗಳನ್ನು ಕೊಡಬಹುದಾಗಿರುತ್ತದೆ ಎಂಬುದಾಗಿ ಉಪಬಂಧವನ್ನು ಕಲ್ಪಿಸಿರುತ್ತದೆ. ಇದು ಖಂಡಿತವಾಗಿಯೂ ಶ್ಲಾಘನೀಯವಾದ ವಿಚಾರವಾಗಿದ್ದು, ಇದನ್ನು ಇತರ ಸ್ಥಳಗಳಲ್ಲಿ ಮಾಡಲಾಗಿದೆ. ಇಲ್ಲಿ ಹೇಳಬೇಕಾದ ಇನ್ನೊಂದು ವಿಷಯವು ಏನೆಂದರೆ, ಇತ್ತೀಚಿನ ಮತ್ತು ಆರೋಗ್ಯಕರವಾದ ಕಾರ್ನಿಯಗಳು ತುಂಬಾ ಅಗತ್ಯವಾಗಿದ್ದು, ಇತ್ತೀಚಿನ ಕಾರ್ನಿಯ ತುಂಬಾ ಸಹಾಯಕವಾಗಿರುತ್ತದೆ. ಹಾಗಾಗಿ. ಇದರಲ್ಲಿ ಯಾವುದೇ ರೀತಿಯಾದ ವಿವಾದಾಂಶಗಳು ಇರದಿದ್ದು ಸದನವು ಈ ವಿಧೇಯಕವನ್ನು ಅಂಗೀಕರಿಸಿರುವುದಕ್ಕಾಗಿ ನಾನು ಪ್ರಶಂಸಿಸುತ್ತೇನೆ.

## ನೇತ್ರದಾನ-ಭಾವನಾತ್ಮಕ ಶ್ರೇಷ್ಠ ವಿಚಾರ

ಮರಣ ಹೊಂದಿದ ಮನುಷ್ಯನಿಂದ 'ಕಾರ್ನಿಯಾ' ತೆಗೆಯುವ ಮೂಲಕ ಅದನ್ನು ಅಂಧರಿಗೆ ಅಳವಡಿಸುವುದರಿಂದ ಅವರಿಗೆ ದೃಷ್ಟಿ ಬರುತ್ತದೆ. ಇದು ವಿಶೇಷ ಶಸ್ತ್ರಚಿಕಿತ್ಸೆಯಾಗಿದ್ದು, ಇಲ್ಲಿಯವರೆಗೆ ಭಾವನಾತ್ಮಕ ಹಾಗೂ ಕಾನೂನಿನ ತೊಡಕಿನಿಂದ ಜಾರಿಗೆ ತರಲಾಗಲಿಲ್ಲ. ರಾಜ್ಯದಲ್ಲಿ ನುರಿತ ಕೊಡುಗೆ ಎಂದು

are once ಅಂತ ಹೇಳಿ, ಈ ಕೂಡಲೇ ಜಾರಿಗೆ ತಂದಿದ್ದರೆ ಬಹಳ ಸಂತೋಷವಾಗುತ್ತಿತ್ತು. ಇದು ಬಹಳ ಉಪಯುಕ್ತವಾದುದು. ಇದನ್ನು ಸ್ವಾಗತಿಸುತ್ತೇನೆ. ನಾನು ನೋಡಿದ ಹಾಗೆ ಅನೇಕ ಜನರಿಗೆ ಕಾರ್ನಿಯಲ್ ಡಿಫೆಕ್ಟ್ ಇದ್ದು ಅವರು ಅಂಧರಾಗಿದ್ದಾರೆ. ವಿದ್ಯಾ ಮಂತ್ರಿಗಳು ಜ್ಞಾನಜ್ಯೋತಿ ಒದಗಿಸುತ್ತಿರುವಂತೆ, ಆರೋಗ್ಯ ಸಚಿವರು ಕಣ್ಣನ್ನು ಕೊಟ್ಟು ನೇತ್ರ ಚಕ್ಷು ಒದಗಿಸುತ್ತಿರುವುದಕ್ಕೆ ಅಭಿನಂದನಾರ್ಹರು. ಈ ಮಸೂದೆಯನ್ನು ಜಾಗ್ರತೆ ಜಾರಿಗೆ ತಂದು ಜನರು ಇದರ ಉಪಯೋಗವನ್ನು ಪಡೆಯುವ ಅವಕಾಶ ಕೊಡಬೇಕು.

**ಮಾನ್ಯ ಸಭಾಧ್ಯಕ್ಷರು** : ಇದನ್ನು ಮೊದಲ ಬಾರಿಗೆ ಅಧಿನಿಯಮಿಸಲಾಗಿದೆ.

**ಶ್ರೀ ಎಚ್.ಆರ್. ಕೇಶವಮೂರ್ತಿ (ಗಂಡಸಿ)** : ಈ ಬಿಲ್ಲನ್ನು ಸ್ವಾಗತಿಸಬೇಕಾಗಿದ್ದರೂ ಕೂಡ ಇದರಲ್ಲಿ ವಿರೋಧಾಭಾಸತಕ್ಕಂಥ ಅಂಶವಿದೆ. ಇದು ಹಿಂದೂ ಧರ್ಮಕ್ಕೆ ವಿರೋಧವಾದುದು – ಸತ್ತವರ ಕಣ್ಣು ಗುಡ್ಡೆಯನ್ನು ಕಿತ್ತು ನಮ್ಮ ಕಣ್ಣಿನಲ್ಲಿಟ್ಟುಕೊಂಡರೆ ಇನ್ನೊಬ್ಬರ ಕಣ್ಣನ್ನು ತೆಗೆದು ಇಟ್ಟುಕೊಳ್ಳುವುದು ಧರ್ಮವಲ್ಲ. ಸತ್ತವರ ಕಣ್ಣನ್ನು ತೆಗೆದು ಇಟ್ಟುಕೊಳ್ಳುವುದಕ್ಕೆ ಶುರು ಮಾಡಿಬಿಟ್ಟರೆ ಕಣ್ಣಿನ ಖಾಯಿಲೆಗಳಿಗೆ ಹೆಚ್ಚು ಗಮನ ಕೊಡುವುದಿಲ್ಲ. ಅನೇಕ ತರಹ ಕಣ್ಣಿನ ರೋಗಗಳು ಈಗ ಅನೇಕ ಜನರಿಗಿವೆ. ಅವರ ಕಣ್ಣಿನ ಖಾಯಿಲೆ ಉಲ್ಬಣವಾದರೆ ಸತ್ತವರ ಕಣ್ಣನ್ನು ಅವರು ತುಂಬಿಟ್ಟುಕೊಳ್ಳುವ ಸನ್ನಿವೇಶ ಬರುತ್ತದೆ. ಈ ಮಸೂದೆಯಿಂದ ಗ್ರಾಮಾಂತರ ಪ್ರದೇಶಗಳಲ್ಲಿ ಅನೇಕ ಜನರು ಕಣ್ಣಿನ ಖಾಯಿಲೆಗಳಿಂದ ನರಳುತ್ತಿದ್ದಾರೆ. ಅವರು ನಿರ್ಗತಿಕರಾಗಿರುವುದರಿಂದ ಹುಷಾರು ಮಾಡಿಕೊಳ್ಳುವುದಕ್ಕೆ ಅವಕಾಶವಿಲ್ಲ. ಕೆಲವರು ಮಾತ್ರ ಮಿಂಟೋ ಆಸ್ಪತ್ರೆಗೆ ಬಂದು ಚಿಕಿತ್ಸೆ ಪಡೆಯಬಹುದು, ಎಲ್ಲರಿಂದಲೂ ಸಾಧ್ಯವಿಲ್ಲ. ಡಾಕ್ಟರ್ ಮೋದಿಯವರು ಕೆಲವು ಪ್ರದೇಶಗಳಿಗೆ ಮಾತ್ರ ಹೋಗಿ ಕಣ್ಣಿನ ಖಾಯಿಲೆಗಳನ್ನು ಹುಷಾರು ಮಾಡುತ್ತಾರೆ. ಕಣ್ಣಿನ ಖಾಯಿಲೆಗಳು ಯಾವುವು? ಅವುಗಳನ್ನು ಹೇಗೆ ಹೇಗೆ ಹುಷಾರು ಮಾಡಬಹುದೆಂಬ ತಿಳಿವಳಿಕೆಯನ್ನು ತಮ್ಮ ಇಲಾಖೆಯಲ್ಲಿ ಕೊಡಬೇಕು. ಈ ತರಹ ಕಾನೂನು ತರುವುದರಲ್ಲಿ ಅಡ್ಡಿ ಇಲ್ಲ. ಆದರೆ, ಕಣ್ಣಿನ ಖಾಯಿಲೆಗಳಿಗೆ ಹೆಚ್ಚಿನ ಗಮನಕೊಡಬೇಕು.

**ಶ್ರೀ ಸಂಜೀವನಾಥ ಐಕಳ** : ನಾನು ಈ ವಿಧೇಯಕವನ್ನು ಸ್ವಾಗತಿಸುತ್ತೇನೆ. ಹಣಕಾಸು ಭಿನ್ನವತ್ತಳೆಯ ಎರಡನೇ ಭಾಗದ ಬಗ್ಗೆ ನಾನು ಆಕ್ಷೇಪಿಸುತ್ತೇನೆ. ವಿಕ್ಟೋರಿಯಾ ಮತ್ತು ಮಿಂಟೋ ಆಸ್ಪತ್ರೆಯಲ್ಲಿ ದೊಡ್ಡ ಸಿಬ್ಬಂದಿ ವರ್ಗವು ಇರುತ್ತದೆ. ಆದ್ದರಿಂದ ಸಿಬ್ಬಂದಿ ವರ್ಗವನ್ನು ಒದಗಿಸುವುದಕ್ಕಾಗಿ ಪ್ರತಿ ತಿಂಗಳಿಗೆ 17,000 ರೂ.ಗಳನ್ನು ವೆಚ್ಚ ಮಾಡುವ ಅಗತ್ಯವಾದರೂ ಏನಿರುತ್ತದೆ. ಕೇವಲ

ಕಾರ್ನಿಯವನ್ನು ತೆಗೆಯುವ ಸಂಖ್ಯೆಯು ಹೆಚ್ಚಿರದಿದ್ದು, ಸಿಬ್ಬಂದಿ ವರ್ಗವು ಕಾರ್ನಿಯಾವನ್ನು ಕ್ವಚಿತ್ತಾಗಿ ಮಾತ್ರ ತೆಗೆಯುತ್ತಾರೆ. ಇದು ಅನಾವರ್ತಕ ವೆಚ್ಚ ಮಾತ್ರವಾಗಿರುತ್ತದೆ. ನಾನು ಈ ಆವರ್ತಕ ವೆಚ್ಚವನ್ನು ಆಕ್ಷೇಪಿಸುತ್ತೇನೆ.

**ಮಾನ್ಯ ಸಭಾಧ್ಯಕ್ಷರು:** ಮಾನ್ಯ ಸದಸ್ಯರು, ಅವನ್ನು ಪ್ರತಿಯೊಬ್ಬರೂ ಮಾಡಬಹುದೆಂದು ಭಾವಿಸಿದ್ದಾರೆಯೇ? ಮಿಂಟೋ ಆಸ್ಪತ್ರೆ ಮತ್ತು ಇತರ ಜಿಲ್ಲಾ ಆಸ್ಪತ್ರೆಗಳಲ್ಲಿ ಹಲವಾರು ವೈದ್ಯರು ಇದ್ದು ಅವರು ಈ ಶಸ್ತ್ರಚಿಕಿತ್ಸೆಯಲ್ಲಿ ಹೆಚ್ಚು ಸಿಖ್ಯಾತರಾಗಿರುತ್ತಾರೆ. ಮೃತ ದೇಹದಿಂದ ಕಾರ್ನಿಯವನ್ನು ತೆಗೆಯುವುದು ಕೇವಲ ಒಂದು ಸಣ್ಣ ವಿಷಯವಾಗಿರುತ್ತದೆ. ಹಾಗಾಗಿ ನಾನು ಈ ಆವರ್ತಕ ವೆಚ್ಚದ ಬಗ್ಗೆ ಮಾತ್ರ ಆಕ್ಷೇಪಿಸುತ್ತೇನೆ. ಈ ಕೆಲಸವನ್ನು ಹಾಲಿ ಇರುವ ವೈದ್ಯಾಧಿಕಾರಿಗಳಿಗೆ ವಹಿಸಬೇಕೆಂದು ನಾನು ಬಯಸುತ್ತೇನೆ. ನಾನು ಖಚಿತವಾಗಿಯೂ ಮಾನ್ಯ ಆರೋಗ್ಯ ಸಚಿವರು ಈ ಕಾರ್ನಿಯ ಕಸಿ ಮಾಡುವಿಕೆ ವಿಧೇಯಕದಡಿಯಲ್ಲಿ ಮೃತ ವ್ಯಕ್ತಿಗಳು ಕಾರ್ನಿಯವನ್ನು ದಾನ ಮಾಡುವಂತೆ ಮಾಡಿರುವುದಕ್ಕಾಗಿ ಅವರನ್ನು ಅಭಿನಂದಿಸುತ್ತೇನೆ. ನಾನು ಈ ವಿಧೇಯಕವನ್ನು ಸ್ವಾಗತಿಸುತ್ತೇನೆ.

**ಡಾ॥ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು):** ಮಾನ್ಯ ಅಧ್ಯಕ್ಷರೇ, ಇದರಲ್ಲಿ ಹೇಳಬೇಕಾದುದು ಹೆಚ್ಚಾಗಿ ಏನೂ ಇಲ್ಲ. ಎಲ್ಲರೂ ಇದಕ್ಕಾಗಿ ಒಪ್ಪಿಗೆ ಕೊಟ್ಟಿದ್ದಕ್ಕಾಗಿ ಬಹಳ ಸಂತೋಷ. ಆದರೆ, ಒಬ್ಬರು ಮಾನ್ಯ ಸದಸ್ಯರು ಹಿಂದೂ ಧರ್ಮದ ಬಗ್ಗೆ ಇದರಲ್ಲಿ ಹೇಳಿದರು. ನಾನು ಹೇಳುವುದಾದರೆ ಹಿಂದೂ ಧರ್ಮಶಾಸ್ತ್ರದಲ್ಲಿ ದಾನವಲ್ಲಿ ಅತ್ಯಂತ ಶ್ರೇಷ್ಠವಾದ ದಾನ ಎಂದರೆ ಅದು ನೇತ್ರ ದಾನ. ಅದರಲ್ಲೂ ಇದರಲ್ಲಿ ಹೇಳಿರುವಂತೆ ಸತ್ತ ಮೇಲೆ ಕಣ್ಣನ್ನು ತೆಗೆಯುವುದು ಜೀವಂತನಾಗಿರುವ ಮನುಷ್ಯರ ಕಣ್ಣುಗಳನ್ನು ತೆಗೆಯುವಂತಿಲ್ಲ.

**ಶ್ರೀ ಸಿದ್ದಯ್ಯ ಕಾಶೀಮಠ್‌ರವರು :** ಇದರಲ್ಲಿರುವ ಹಣಕಾಸಿನ ಬಗ್ಗೆ ಒಂದು ವಿಚಾರವನ್ನು ಹೇಳಿದರು. ಈಗಿರುವಷ್ಟು ಜನರೇ ಇದಕ್ಕೆ ಸಾಕು. ಇದಕ್ಕೆ ಪ್ರತ್ಯೇಕವಾದ ಹಣಕಾಸುಗಳ ಖರ್ಚು ಬೇಕಾಗಿಲ್ಲವೆಂದು ಹೇಳಿದರು. ಈಗಿರುವ ಡಾಕ್ಟರುಗಳಿಗೆ ಹೆಚ್ಚು ಕಾಲಾವಕಾಶವಿಲ್ಲ ಮತ್ತು ಇದಕ್ಕಾಗಿ ಸ್ಪೆಷಲೈಸ್ಡ್ ಸಿಬ್ಬಂದಿ ಇರಬೇಕು. ಆದುದರಿಂದ, ಇಷ್ಟು ಹಣ ಖರ್ಚು ಮಾಡುವುದು ಹೆಚ್ಚೇನಲ್ಲ. ಆದುದರಿಂದ, ಎಲ್ಲರೂ ಈ ಮಸೂದೆಗೆ ಒಪ್ಪಿಗೆಯನ್ನು ಕೊಡಬೇಕೆಂದು ಕೇಳುತ್ತೇನೆ.

ಈಗ ಇಲಾಖೆಯು ಸಂಯೋಜನೆಯನ್ನು ಮಾಡಲಾಗಿದ್ದು ಒಂದು ನಿರ್ದೇಶನಾಲಯವು ಇರುತ್ತದೆ. ಭಾರತೀಯ ಔಷಧ ಪದ್ಧತಿಯ ಸಹಾಯಕ ನಿರ್ದೇಶಕರ ಸ್ಥಾನ ಮತ್ತು ಪದವಿಯನ್ನು ರೂ.600ರಿಂದ ಆರಂಭವಾಗುವ ವೇತನ ಶ್ರೇಣಿಯೊಂದಿಗೆ ವೈದ್ಯಕೀಯ ಸೇವೆಗಳ ಸಹಾಯಕ ನಿರ್ದೇಶಕರ ದರ್ಜೆಗೆ ಏರಿಸಲಾಗಿದೆ. ಪ್ರಸ್ತುತ ಪರಿಸ್ಥಿತಿಯಲ್ಲಿ ಈ ವ್ಯವಸ್ಥೆಗೆ ಪ್ರತಿಯೊಂದು ಪ್ರೋತ್ಸಾಹವನ್ನೂ ನೀಡಲಾಗಿದೆ. ಆದರೆ, ಈ ಪದ್ಧತಿಯನ್ನು ಇತರ ಪದ್ಧತಿಗಳೊಂದಿಗೆ ಸಂಯೋಜಿಸಲಾಗಿರುವುದರಿಂದ ನಮಗೆ ಕೆಲವು ಅಂತರ್ಗತವಾದ ತೊಂದರೆಗಳು ಇರುತ್ತವೆ. ರಾಜ್ಯಗಳ ಪುನರ್ ಸಂಘಟನೆಯ ತರುವಾಯ ಬೇರೆ ಬೇರೆ ಸಂಸ್ಥೆಗಳಲ್ಲಿ ಇರುವ ಬೇರೆ ಬೇರೆ ವಿದ್ಯಾರ್ಹತೆಗಳಿಂದಾಗಿ ಈ ವಿಷಯದಲ್ಲಿ ಸ್ವಲ್ಪ ಮಟ್ಟಿಗೆ ಗೊಂದಲವನ್ನು ಉಂಟುಮಾಡಿದೆ. ಇತರೆ ವ್ಯವಸ್ಥೆಗಳೊಂದಿಗೆ ಸಮಗ್ರ ವ್ಯವಸ್ಥೆಯನ್ನು ಹೊಂದುವುದರಿಂದ ಈ ವ್ಯವಸ್ಥೆಯಲ್ಲಿನ ಕೆಲವು ಮೂಲ ಸ್ವರೂಪದ ತೊಂದರೆಗಳನ್ನು ನಾವು ಹೊಂದಿದ್ದೇವೆ. ನಮ್ಮಲ್ಲಿ ಭಾರತೀಯ ವೈದ್ಯಕೀಯ ಪದ್ಧತಿಯ ಒಂದು ಸರ್ಕಾರಿ ಕಾಲೇಜು ಮತ್ತು 9 ಖಾಸಗಿ ಕಾಲೇಜುಗಳು ಇರುತ್ತವೆ. ಸಂಯೋಜಿತ ಪದ್ಧತಿಯ ಪ್ರಶ್ನೆಯೂ ಇತ್ತೆ ಎಂಬುದು ಇಲ್ಲಿ ಮತ್ತೆ ಬಂದಿದ್ದು ಎಚ್ಚರಿಕೆಯಿಂದ ಪರಿಶೀಲಿಸಿದ ನಂತರ, ಕೇಂದ್ರ ಆರೋಗ್ಯ ಮಂತ್ರಾಲಯವು ಶುದ್ಧ ಆಯುರ್ವೇದ ಪದ್ಧತಿಯನ್ನು ಅಭಿವೃದ್ಧಿಪಡಿಸಬೇಕು. ಅಂತೆಯೇ ಶುದ್ಧ ಆಯುರ್ವೇದ ಕೋರ್ಸನ್ನು ಪ್ರಾರಂಭಿಸಬೇಕು ಎಂಬ ನಿರ್ಧಾರವನ್ನು ತೆಗೆದುಕೊಂಡಿದ್ದು ಈ ತೀರ್ಮಾನದ ನಂತರ ಕೂಡಲೇ ನಾವು ಆ ಕೋರ್ಸನ್ನು ಪ್ರಾರಂಭಿಸಿದ್ದೇವೆ. ನಮ್ಮ ರಾಜ್ಯದಲ್ಲಿ 1961–65ರ ಸಾಲಿನಲ್ಲಿ ಶುದ್ಧ ಆಯುರ್ವೇದ ಕೋರ್ಸನ್ನು ಪ್ರಾರಂಭಿಸಿದ್ದು ಆಗಲೂ ಕೂಡ ಇತ್ತೀಚೆಗೆ ಈ ಕೋರ್ಸನ್ನು ಮೇಲ್ದರ್ಜೆಗೇರಿಸಲು ನಿರ್ಧರಿಸಲಾಯಿತು. ಅಂತೆಯೇ ಈ ಪದ್ಧತಿಯನ್ನು ಕಾಲಕ್ರಮದಲ್ಲಿ ಅಭಿವೃದ್ಧಿಪಡಿಸಲು ಮತ್ತು ಹೆಚ್ಚಿನ ಪ್ರೋತ್ಸಾಹವನ್ನು ನೀಡಲು ಪ್ರಯತ್ನವನ್ನು ಉಂಟುಮಾಡಲಾಗಿದ್ದು ಇದರಿಂದಾಗಿ ಜನರು ಆಯುರ್ವೇದ, ಯುನಾನಿ ಮತ್ತು ಯಾವುದೇ ಇತರ ಪದ್ಧತಿಗಳಿಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಲಾಗಿರುವುದಾಗಿ ತೃಪ್ತಿಗೊಂಡು ಇವರು ಈ ಪದ್ಧತಿಗಳಿಂದ ನಿಜವಾದ ಸೇವೆಯನ್ನು ಪಡೆದುಕೊಳ್ಳುತ್ತಾರೆ. ನಮ್ಮಲ್ಲಿ ಕೇಂದ್ರ ಗಿಡಮೂಲಿಕೆಗಳ ಉದ್ಯಾನಗಳಿರುತ್ತವೆ. ಮೈಸೂರು ಹಾಗೂ ಬೆಂಗಳೂರಿನಲ್ಲಿರುವ ಎರಡು ಆಸ್ಪತ್ರೆಗಳಲ್ಲಿ ಸುಂದರವಾದ ದೊಡ್ಡ ಉದ್ಯಾನಗಳಿವೆ ಎಂಬುದಾಗಿ ನಾನು ಹೇಳಲೇಬೇಕು. ಈ ಉದ್ಯಾನಗಳನ್ನು ಅಭಿವೃದ್ಧಿಪಡಿಸಲಾಗಿದ್ದು ಇವುಗಳು ಶೀಘ್ರದಲ್ಲಿಯೇ ಸಂಪೂರ್ಣ ಧಾರಣ ಶಕ್ತಿಯನ್ನು ಪಡೆಯುತ್ತವೆ. ವೇತನ ಶ್ರೇಣಿ ಮತ್ತು ಸ್ಥಾನಮಾನಗಳಿಗೆ ಸಂಬಂಧಿಸಿದಂತೆಯೂ ಸಹ ವೇತನ ಶ್ರೇಣಿಗಳನ್ನು ಏರಿಸಬೇಕು ಮತ್ತು ಈ

ಜನರ ಅಂದರೆ ಡಿಪ್ಲೋಮಾದಾರರು ಮತ್ತು ಪದವೀಧರರ ಸ್ಥಾನಮಾನವನ್ನು ಅಲೋಪಥಿ ಚಿಕಿತ್ಸಕರ ಸ್ಥಾನಮಾನಕ್ಕೆ ಏರಿಸಲಾಗುವುದಾಗಿಯೂ ಸಹ ನಾವು ತೀರ್ಮಾನಕ್ಕೆ ಬಂದಿದ್ದೇವೆ.

ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಿ, ಸಿಬ್ಬಂದಿ ವರ್ಗದಲ್ಲಿರುವ ಗೊಂದಲವನ್ನು ನಿವಾರಿಸಲಾಗುವುದು ಎಂದರು. ಆಯುರ್ವೇದ ಮತ್ತು ಯುನಾನಿ ಪದ್ಧತಿಗೆ ಪ್ರತ್ಯೇಕ ಇಲಾಖೆಯನ್ನು ರಚಿಸುವ ಬಗ್ಗೆ ಭಾರತೀಯ ವೈದ್ಯ ಪದ್ಧತಿಯ ರಾಜ್ಯ ಪರಿಷತ್ತು ಒಂದು ಉಪ ಸಮಿತಿಯನ್ನು ರಚಿಸಿದೆ. ಆ ಉಪ ಸಮಿತಿಯವರಿಗೆ ಶೀಘ್ರವಾಗಿ ವರದಿಯನ್ನು ಸಲ್ಲಿಸಲು ಕೋರಲಾಗಿದೆ. ವರದಿ ಬಂದ ನಂತರ ಆಡಳಿತದಲ್ಲಿ ದಕ್ಷತೆಯನ್ನು ಗಣನೆಗೆ ತೆಗೆದುಕೊಂಡು ಸರ್ಕಾರ ತೀರ್ಮಾನ ತೆಗೆದುಕೊಳ್ಳುವುದೆಂದರು. ಆರೋಗ್ಯ ಸೇವೆಗಳ ನಿರ್ದೇಶನಾಲಯದ ಪುನರ್‌ರಚನೆಯಿಂದ ಪ್ರಸಕ್ತ ವರ್ಷದಲ್ಲಿ ಪರಿಸ್ಥಿತಿ ಉತ್ತಮಗೊಳ್ಳುವುದೆಂಬ ಆಶಯ ವ್ಯಕ್ತಪಡಿಸುತ್ತಾ, ಮಾನ್ಯ ಸದಸ್ಯರು ಮಂಡಿಸಿದ ನಿರ್ಣಯವನ್ನು ಹಿಂತೆಗೆದುಕೊಳ್ಳಬೇಕೆಂದು ಮನವಿ ಮಾಡಿಕೊಂಡರು. ಆಯುರ್ವೇದ ಪದ್ಧತಿಯನ್ನು ಉತ್ತಮಪಡಿಸಲು ಸರಕಾರ ನಿಶ್ಚಯಿಸಿದ್ದು, ನಾಲ್ಕನೇ ಪಂಚವಾರ್ಷಿಕ ಯೋಜನೆಯಲ್ಲಿ ಅವಶ್ಯಕ ಹಣವನ್ನು ನೀಡಲಾಗುವುದೆಂದು ಅವರು, ಸಂಶೋಧನಾ ಕಾರ್ಯವು ಪ್ರಾರಂಭವಾಗಿದ್ದು, ಮೂಲಿಕೆಗಳ ಉದ್ಯಾನವನ್ನು ಅಭಿವೃದ್ಧಿಗೊಳಿಸಲಾಗುವುದು ಎಂದರು.

ನಾವು ಪದ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸಹ ಪರಿಷ್ಕರಿಸಿದ್ದೇವೆ. ಇಲ್ಲಿ ಮತ್ತೆ ಹೆಚ್ಚಿನ ಗೊಂದಲವಾಗಿರುವುದಾಗಿ ನಾನು ನಿವೇದಿಸುತ್ತೇನೆ. ಎರಡು ಸರಿಸಮವಾದ ವೇತನ ಶ್ರೇಣಿಯಲ್ಲಿ ಯನಾನಿ ವಿಭಾಗದಲ್ಲಿ ಕೆಲಸ ಮಾಡುತ್ತಿರುವ ಜನರು ಮತ್ತು ಆಯುರ್ವೇದ ವಿಭಾಗದಲ್ಲಿ ಕೆಲಸ ಮಾಡುತ್ತಿರುವ ಜನರು ಈ ವಿಷಯವನ್ನು ಗೊಂದಲಗೊಳಿಸಿದ್ದಾರೆ. ಈ ಜನರಿಗೆ ಪದ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಿ ಅವರ ಸ್ಥಾನಮಾನವನ್ನು ಹೆಚ್ಚಿಸುವುದರ ಮೂಲಕ ಈ ಎಲ್ಲಾ ಗೊಂದಲಗಳನ್ನು ನಿವಾರಿಸಲಿದ್ದೇವೆ. ನಾವು ಸಂಶೋಧನಾ ವಿಭಾಗವನ್ನು ಸಹ ಆರಂಭಿಸಿದ್ದು ಇದನ್ನು ಅಭಿವೃದ್ಧಿಪಡಿಸಲು ಪ್ರಯತ್ನಿಸುತ್ತಿದ್ದೇವೆ. ಈ ವರ್ಷ ನಾವು ಭಾರತೀಯ ವೈದ್ಯಕೀಯ ಪದ್ಧತಿಯ ರಾಜ್ಯ ಪರಿಷತ್ತಿಗೆ ಅಧಿಕಾರ ಮತ್ತು ಸ್ಥಾನಮಾನವನ್ನು ನೀಡುತ್ತಿದ್ದೇವೆ. ಇದು ಜಂಟಿ ಅಧಿವೇಶನದಲ್ಲಿ ಸಭೆ ಸೇರಿದ್ದು ಅವುಗಳು ಮೈಸೂರು ಆಯುರ್ವೇದ ಮತ್ತು ಯುನಾನಿ ಸೇವಾ ಇಲಾಖೆಯು ಪ್ರತ್ಯೇಕವಾದ ಮತ್ತು ಸ್ವತಂತ್ರವಾದ ಇಲಾಖೆಯನ್ನು ಹೊಂದುವ ಅಥವಾ ಇದು ಆರೋಗ್ಯ ಸೇವೆಗಳ ನಿರ್ದೇಶನಾಲಯದ ಭಾಗವಾಗಿ ಕಾರ್ಯ

ಇಲ್ಲದೆ ಸಾರ್ವಜನಿಕರಿಗೆ ರುಜುವಾತುಪಡಿಸುವ ಸ್ಥಿತಿಯಲ್ಲಿರಬೇಕೆಂಬುದು ನನ್ನ ಹಾರೈಕೆಯಾಗಿದೆ.

ಆದ್ದರಿಂದ ಈ ಗೊತ್ತುವಳಿಯ ಸೂಚಕರು ಈ ಗೊತ್ತುವಳಿಯನ್ನು ಹಿಂತೆಗೆದುಕೊಳ್ಳಬೇಕೆಂದು ನಾನು ಮನವಿ ಮಾಡುತ್ತೇನೆ. ವಿರೋಧ ಪಕ್ಷದಿಂದ ಶ್ರೀ ಪಿ.ಎಸ್. ಪಾಟೀಲ್‌ರವರು ಈ ನಿರ್ದಿಷ್ಟ ಗೊತ್ತುವಳಿಯನ್ನು ನೀಡಿರುತ್ತಾರೆ. ಆದರೆ ಕಾಂಗ್ರೆಸ್ ಶಾಸಕಾಂಗ ಪಕ್ಷದ ಸದಸ್ಯರಿಂದ ಸ್ವೀಕರಿಸಲಾಗಿರುವ ಗೊತ್ತುವಳಿಗಳು ಸಾಕಷ್ಟು ಸಂಖ್ಯೆಯಲ್ಲಿರುತ್ತದೆ. ತುಂಬಾ ಹೆಚ್ಚಿನ ಸಂಖ್ಯೆಯ ಜನರು ಇದೇ ನಿರ್ಣಯವನ್ನು ನೀಡಿದ್ದಾರೆ. ಇದರಿಂದಾಗಿ ಮಾಡಲಾದ ಉತ್ತಮ ಕೆಲಸವನ್ನು ಅವರು ಪ್ರಶಂಸಿಸುತ್ತಿರುವುದಾಗಿ ಇದು ಸ್ಪಷ್ಟವಾಗಿ ತೋರಿಸುತ್ತದೆ ಮತ್ತು ಇದೂ ಅಲ್ಲದೆ ಅವರು ಈ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸುವುದಕ್ಕೆ ಬಯಸುತ್ತಾರೆ ಮತ್ತು ಇದಕ್ಕಾಗಿ, ಅವರು ಈ ರೂಪದಲ್ಲಿ ಸಲಹೆಯನ್ನು ಸಹ ನೀಡಿರುತ್ತಾರೆ. ನಮಗೆ ಹಲವಾರು ತೊಂದರೆಗಳಿದ್ದಾಗ್ಯೂ ನಮ್ಮ ಸಾಧನೆಗಳನ್ನು ಅವರು ಮನಗಂಡಿದ್ದಾರೆ ಅದು ಸರ್ಕಾರವು ತನ್ನ ಪ್ರಾಮಾಣಿಕ ಪ್ರಯತ್ನ ಮಾಡುತ್ತಿದೆ ಎಂಬುದನ್ನು ರುಜುವಾತುಪಡಿಸಿದೆ.

ನಾನು ಈ ಮೊದಲೇ ಹೇಳಿದಂತೆ, ಉಪ ಸಮಿತಿಯು ಈ ವಿಷಯವನ್ನು ಪರಿಶೀಲಿಸುತ್ತದೆ ಮತ್ತು ಸರ್ಕಾರವು ಮಾನ್ಯ ಸದಸ್ಯರು ಮಂಡಿಸಿದ ಎಲ್ಲಾ ಅಂಶಗಳನ್ನು ಖಂಡಿತವಾಗಿ ಪರಿಶೀಲಿಸುತ್ತದೆ ಮತ್ತು ಸರ್ಕಾರವು ಈ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಲು ಮತ್ತು ಜನರು ಈ ವ್ಯವಸ್ಥೆಯ ಅನುಕೂಲಗಳನ್ನು ಪಡೆಯಲು ಸರಿಯಾದ ನಿರ್ಣಯವನ್ನು ತೆಗೆದುಕೊಳ್ಳುತ್ತದೆ.

ಆದ್ದರಿಂದ ಸ್ವಾಮಿ, ನಾನು ದೀರ್ಘವಾದ ಚರ್ಚೆಯನ್ನು ಮಾಡುವ ಅವಶ್ಯಕತೆ ಇಲ್ಲವೆಂದು ಭಾವಿಸುತ್ತೇನೆ. ಏಕೆಂದರೆ, ಆರೋಗ್ಯ ಸೇವೆಗಳ ನಿರ್ದೇಶನಾಲಯದ ಜೊತೆಯಲ್ಲಿ ಈ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಲು ಮತ್ತು ಈ ಆಡಳಿತವನ್ನು ಬೆಳೆಸಲು ಸಾಧ್ಯವಾದ ಪ್ರತಿಯೊಂದು ಕೆಲಸವನ್ನು ಮಾಡುವುದಾಗಿ ನಾನು ಭರವಸೆ ನೀಡುತ್ತೇನೆ.

**ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು):** ಸ್ವಾಮಿ, ಈ ನಿರ್ಣಯದ ಬಗ್ಗೆ ಚರ್ಚಿಸಲಾಗಿದೆ ಮತ್ತು ಆಯುರ್ವೇದಕ್ಕೆ ಉತ್ತೇಜನ ನೀಡಲು ಕೆಲವು ವಿವರಗಳನ್ನು ಸಿದ್ಧಪಡಿಸಲಾಗಿದೆ. ಪ್ರತ್ಯೇಕವಾದ ಮತ್ತು ಸ್ವತಂತ್ರವಾದ ನಿರ್ದೇಶನಾಲಯವನ್ನು ರಚಿಸುವುದು ಇಲ್ಲಿರುವ ನಿರ್ಣಯವಾಗಿರುತ್ತದೆ. ಇಂದಿನ ಪರಿಸ್ಥಿತಿಯಲ್ಲಿ ನಾವು ಈ ರಾಜ್ಯದಲ್ಲಿ ಒಂದು ಆರೋಗ್ಯ ನಿರ್ದೇಶನಾಲಯವನ್ನು

ರಚಿಸಿದ್ದೇವೆ. ಆಡಳಿತದ ಹಿತದೃಷ್ಟಿಯಿಂದ ಬೇರೆ ಬೇರೆ ವೈದ್ಯಕೀಯ ಪದ್ಧತಿಗಳ ಹಿತದೃಷ್ಟಿಯಿಂದ ಮತ್ತು ಅನೇಕ ಖಾಯಿಲೆಗಳಿಂದ ನರಳುತ್ತಿರುವ ಜನರ ಹಿತದೃಷ್ಟಿಯಿಂದ ಈ ಸಂಯೋಜನೆಯನ್ನು ಮಾಡಲಾಗಿದೆ. ಕಳೆದ ಎರಡು ವರ್ಷಗಳ ಅವಧಿಯಲ್ಲಿ ವಾಸ್ತವವಾಗಿ ನಾವು ಭದ್ರ ನೆಲೆಯಲ್ಲಿ ಆಯುರ್ವೇದವನ್ನು ಅಭಿವೃದ್ಧಿಗೊಳಿಸಲು ಕಾರ್ಯಾರಂಭ ಮಾಡಿದ್ದೇವೆ. ಅನೇಕ ವರ್ಷಗಳಿಂದ ಉಂಟಾಗಿದ್ದ ಗೊಂದಲ ಈಗ ನಿವಾರಣೆಯಾಗಿದೆ. ಈಗ ನಾವು ಶುದ್ಧ ಆಯುರ್ವೇದದಲ್ಲಿ ಡಿಪ್ಲೋಮಾ ಹಾಗೂ ಪದವಿ ವ್ಯಾಸಂಗ ಕ್ರಮಗಳನ್ನು ಪ್ರಾರಂಭಿಸಿದ್ದೇವೆ. ನಾವು ಈ ರಾಷ್ಟ್ರದಲ್ಲಿ ಆಯುರ್ವೇದವನ್ನು ಅಭಿವೃದ್ಧಿಗೊಳಿಸಲು ನಿರ್ಧರಿಸಿದ್ದೇವೆ. ನನ್ನ ಸ್ನೇಹಿತ ಡಾ॥ ಸಂಜೀವನಾಥ್‌ರವರು ಅತಿ ಸೂಕ್ಷ್ಮವಾಗಿ ವಿವರಿಸಿದಂಥ ಪ್ರಾಚೀನ ವೈಭವವನ್ನು ನಾನು ಬಹಳ ಚೆನ್ನಾಗಿ ಅರ್ಥಮಾಡಿಕೊಂಡಿದ್ದೇನೆ. ಇದಕ್ಕೆ ಇವರು ಆಧಾರವನ್ನು ಒದಗಿಸಿದ್ದಾರೆ. ಈ ಆಧಾರಗಳು ಯಾವುದೇ ರೀತಿಯಲ್ಲಿ ನನಗೆ ಅಗತ್ಯವಿಲ್ಲ. ಏಕೆಂದ್ರೆ, ವೈದ್ಯ ವಿಜ್ಞಾನದ ಎಲ್ಲ ಪದ್ಧತಿಗಳನ್ನು ಇಲ್ಲಿ ಅಭಿವೃದ್ಧಿಗೊಳಿಸುವುದು ನನ್ನ ಪ್ರಯತ್ನವಾಗಿದೆ. ಏಕೆಂದರೆ, ಜನರಿಗಾಗಿ ವ್ಯಾಪಕವಾದ ವೈದ್ಯಕೀಯ ರಕ್ಷಣೆಯನ್ನು ಪಡೆಯಲು ನಾವು ಈ ಪದ್ಧತಿಗಳನ್ನು ಪ್ರೋತ್ಸಾಹಿಸಬೇಕಿದೆ. ಆಧುನಿಕ ವೈದ್ಯಕೀಯ ಪದ್ಧತಿಯ ಬಳಕೆಗೆ ಬಂದಿರುತ್ತದೆ ಮತ್ತು ಇದನ್ನು ನಾವು ಇನ್ನಷ್ಟು ಅಭಿವೃದ್ಧಿಗೊಳಿಸಬೇಕಿದೆ. ಇದೇ ಸಮಯದಲ್ಲಿ ಬೇರೆ ಬೇರೆ ಪದ್ಧತಿಗಳಿಗೆ ಸೇರಿದ ವ್ಯಕ್ತಿಗಳು ತಮ್ಮ ಪ್ರಾಚೀನ ವೈಭವವನ್ನು ಕುರಿತು ಯೋಚಿಸದೆ, ಇದಕ್ಕೆ ಬದಲಾಗಿ ಬೇರೆ ಬೇರೆ ಪದ್ಧತಿಗಳ ನಡುವೆ ಸರಿಯಾದ ಸಹಕಾರ ಮತ್ತು ತಿಳಿವಳಿಕೆಯನ್ನು ಪಡೆಯುವ ಮೂಲಕ ಇದನ್ನು ಮುಂದೆ ಹೇಗೆ ಅಭಿವೃದ್ಧಿಪಡಿಸಬೇಕು ಎಂಬುದರ ಬಗ್ಗೆ ಯೋಚಿಸಬೇಕು. ಈ ಮಾರ್ಗದಲ್ಲಿ ನಾವು ವಾಸ್ತವವಾಗಿ ಅಭಿವೃದ್ಧಿ ಪಡಿಸುವುದನ್ನು ಆರಂಭಿಸಿದ್ದೇವೆ. ಈ ದೃಷ್ಟಿಕೋನದಿಂದ ಹಣದ ಹಂಚಿಕೆಯನ್ನು ಕೂಡ ಮಾಡಲಾಗಿದೆ. 4ನೇ ಯೋಜನೆಯಲ್ಲಿ ಈ ಪದ್ಧತಿಯನ್ನು ಬೇರ ಬೇರೆ ಚಟುವಟಿಕೆ ಕ್ಷೇತ್ರಗಳಲ್ಲಿ ಅಭಿವೃದ್ಧಿಪಡಿಸಲು ನಾವು ಅಗತ್ಯವಾದ ಹಣವನ್ನು ನೀಡುತ್ತೇವೆ. ಉದಾಹರಣೆಗೆ ತುಂಬಾ ಅಗತ್ಯವಾದ ಸಂಶೋಧನೆಯನ್ನು ಪ್ರಾರಂಭಿಸಲಾಗಿದ್ದು, ಗಿಡಮೂಲಿಕೆಗಳ ಉದ್ಯಾನಗಳನ್ನು ಅಭಿವೃದ್ಧಿಪಡಿಸಲಾಗುತ್ತದೆ. ಕೇಂದ್ರ ಔಷಧಾಲಯವು ರಾಜ್ಯದಾದ್ಯಂತ ಪೂರೈಸಲು ಎಲ್ಲ ಮೂಲಭೂತವಾದ ಮತ್ತು ಅಗತ್ಯವಾದ ಔಷಧಿಗಳನ್ನು ಸಿದ್ಧಪಡಿಸುತ್ತದೆ. ಕೆಲವು ಔಷಧ ಪದ್ಧತಿಗಳಿಗೆ ಅಂಟಿಕೊಳ್ಳುವ ಹುಚ್ಚು ಭಾವನೆಯು ಹೋಗಬೇಕು ಎಂಬ ವಿಷಯವನ್ನು ಸ್ಪಷ್ಟಪಡಿಸಬಯಸುತ್ತೇನೆ.

ಔಷಧಿ ಹಾಗೂ ಚಿಕಿತ್ಸೆ ವಿಚಾರದಲ್ಲಿ ಇತರ ರಾಜ್ಯ ಹಾಗೂ ರಾಷ್ಟ್ರಗಳಲ್ಲಿರುವ ನೀತಿಯನ್ನು ನಾವು ಅಳವಡಿಸಿಕೊಳ್ಳುತ್ತೇವೆ. ನಿರ್ದೇಶನಾಲಯದಲ್ಲಿ ಅವಶ್ಯಕವಾದ

ಸ್ವಾತಂತ್ರ್ಯ ನೀಡಿದ್ದೇವೆ ಎಂದರು. ನಮ್ಮ ನಿರ್ದೇಶನಾಲಯವು ನಮ್ಮ ಧ್ಯೇಯೋದ್ದೇಶಗಳನ್ನು ಈಡೇರಿಸುವ ನಿಟ್ಟಿನಲ್ಲಿ ನಮಗೆ ಸಹಾಯ ಮಾಡುತ್ತದೆಂದು ಆಶಿಸಿ. ಪ್ರಾಚೀನ ಪದ್ಧತಿಯನ್ನು ಅತೀ ಕಡಿಮೆ ಸಮಯದಲ್ಲಿ ನೂತನವಾಗಿಸಲು ಸರ್ವ ಪ್ರಯತ್ನವನ್ನೂ ಮಾಡುವುದಾಗಿ ತಿಳಿಸುತ್ತಾ, ಮಾನ್ಯ ಸದಸ್ಯರು ನಿರ್ಣಯ ಹಿಂತೆಗೆದುಕೊಳ್ಳುವಂತೆ ಪ್ರಾರ್ಥಿಸಿಕೊಂಡರು.

## ಔಷಧಿ ಹಾಗೂ ಚಿಕಿತ್ಸೆಗಾಗಿ ರಾಜ್ಯ ರಾಷ್ಟ್ರಗಳಲ್ಲಿರುವ ನೀತಿಗಳ ಅನುಸರಣೆ

ನಮ್ಮ ಜನರು ಸಂತೋಷವಾಗಿರುವಂತೆ ಮಾಡುವುದು ಚರ್ಚಾ ವಿಷಯವಾಗಿರುತ್ತದೆ. ನಾವು ಆದಷ್ಟು ಉತ್ತಮ ಕೆಲಸವನ್ನು ಮಾಡಿದ್ದು ಔಷಧ ವೈದ್ಯ ಮತ್ತು ಚಿಕಿತ್ಸೆಯನ್ನು ಅಭಿವೃದ್ಧಿಪಡಿಸುವ ದೃಷ್ಟಿಯಲ್ಲಿ ಬೇರೆ ರಾಜ್ಯಗಳಲ್ಲಿ ಅಥವಾ ಬೇರೆ ರಾಷ್ಟ್ರಗಳಲ್ಲಿ ಅತ್ಯುತ್ತಮವಾದದ್ದು ಏನೇ ಇದ್ದರೂ, ನಾವದನ್ನು ಪಾಲಿಸಲು ಪ್ರಯತ್ನಿಸಿರುವುದಾಗಿ ನನಗೆ ಮನದಟ್ಟಾಗಿದೆ. ಈ ಸಂಬಂಧದಲ್ಲಿ ಸಾಮಾಜಿಕ ಮತ್ತು ವ್ಯಾಧಿ ನಿವಾರಕ ಔಷಧ ವೈದ್ಯದ ಬಹು ಮುಖ್ಯ ವಿಷಯವನ್ನು ನಾವು ಮನಸ್ಸಿನಲ್ಲಿಟ್ಟುಕೊಳ್ಳಬೇಕೆಂದು ಸಹ ನಾನು ಹೇಳುತ್ತೇನೆ. ಆಯುರ್ವೇದ ಪದ್ಧತಿಗೂ ಕೂಡ ಅದನ್ನು ಬೇರ್ಪಡೆ ಮಾಡದ ಹೊರತು ಹಾಗೂ ರೋಗದ ಸರಿಯಾದ ಪತ್ತೆಗೆ ಪರೀಕ್ಷೆಗಳನ್ನು ನಡೆಸಲು ಇದು ಲಭ್ಯವಾಗುವಂತೆ ಮಾಡಿದ ಹೊರತು ಪ್ರಗತಿಯು ಸಾಧ್ಯವಾಗುವುದಿಲ್ಲ. ವಿಜ್ಞಾನವು ಅದರಲ್ಲಿಯೂ ವೈದ್ಯ ವಿಜ್ಞಾನವು ವಿಶ್ವವ್ಯಾಪಿಯಾದದ್ದು ಎಂಬುದಾಗಿ ಒತ್ತಿ ಹೇಳಲು ಬಯಸುತ್ತೇನೆ. ಅದು ರಾಷ್ಟ್ರವ್ಯಾಪಿ ಮಾತ್ರ ಆಗಿರುವುದಿಲ್ಲ. ಆದರೆ, ಸ್ವಾಭಾವಿಕವಾಗಿ ಅಂತರಾಷ್ಟ್ರೀಯ ವ್ಯಾಪ್ತಿಯಾಗಿರಬೇಕು. ಗುಜರಾತ್‌ನಲ್ಲಿ ಪ್ರತ್ಯೇಕವಾದ ವಿಶ್ವವಿದ್ಯಾನಿಲಯವು ಸ್ಥಾಪನೆಯಾಗಿದ್ದರೆ, ನಾವು ಗುಜರಾತನ್ನು ಅನುಸರಿಸಬೇಕು ಎಂಬುದಾಗಿ ಅದರರ್ಥವಾಗುವುದಿಲ್ಲ. ನನಗೆ ಕುರುಡು ನಂಬಿಕೆ ಅಥವಾ ಅಂಧಾನುಕರಣೆಯಲ್ಲಿ ನಂಬಿಕೆಯಿಲ್ಲ. ಇದು ನಮ್ಮ ಸಲುವಾಗಿದ್ದು, ನಮ್ಮ ಇತಿಮಿತಿಗಳನ್ನು ಮತ್ತು ತೊಂದರೆಗಳನ್ನು ಅರಿತುಕೊಳ್ಳುವ ಮೂಲಕ ಈ ಪದ್ಧತಿಯನ್ನು ಅಭಿವೃದ್ಧಿಪಡಿಸಬೇಕು. ನಾವು ರಚಿಸಿರುವ ನಿರ್ದೇಶನಾಲಯದಲ್ಲಿ ಈಗಾಗಲೇ ನಮಗೆ ಔಷಧ ವೈದ್ಯದ ಈ ಶಾಖೆಗಾಗಿ ಅಗತ್ಯವಿರುವ ಸ್ವಾತಂತ್ರ್ಯವನ್ನು ನೀಡಲಾಗಿದೆ ಮತ್ತು ಇಲಾಖಾ ಮುಖ್ಯಸ್ಥರಿಗೆ ಸ್ಥಾನಮಾನವನ್ನು ಸಹ ನೀಡಲಾಗಿದೆ. ನಾನು ಪ್ರಾರಂಭದಲ್ಲಿ ಹೇಳಿದಂತೆ, ಇದನ್ನು ಎಲ್ಲಿಯವರೆಗೆ ಸ್ವತಂತ್ರವಾಗಿ ಮತ್ತು ಪ್ರತ್ಯೇಕವಾಗಿ ಮಾಡಬಹುದು ಮತ್ತು ಇದಕ್ಕೆ ಯಾವ ಸ್ಥಾನಮಾನ ನೀಡಬಹುದೆಂಬ ಪ್ರಶ್ನೆಗಳಿಗೆ ಉತ್ತರಿಸಲು ಒಂದು ಸಮಿತಿಯನ್ನು ಈಗಾಗಲೇ ರಚಿಸಲಾಗಿದೆ. ಆದುದರಿಂದ ಈ ಹಂತದಲ್ಲಿ ಈ ನಿರ್ಣಯವನ್ನು ಒಪ್ಪಿಕೊಳ್ಳಬೇಕಾದ ಅಗತ್ಯವೇ ಇಲ್ಲ ಏಕೆಂದರೆ,

ನಾವು ಈ ಮಾರ್ಗಗಳಲ್ಲಿ ನಡೆಯುತ್ತಿದ್ದೇವೆ ಮತ್ತು ನಾವು ಕಲಿಯುವುದು ಬಹಳಷ್ಟಿದೆ ಮತ್ತು ಎಲ್ಲಾ ಜನರಿಗೆ ಆರೋಗ್ಯದ ಸೌಲಭ್ಯಗಳನ್ನು ಒದಗಿಸುವ ಮೂಲಕ ನಮ್ಮನ್ನು ನಾವು ದೇಶಸೇವೆಗೆ ಅಣಿಗೊಳಿಸಿಕೊಳ್ಳಬೇಕು ಎಂಬುದನ್ನು ನಾವೆಲ್ಲರೂ ಅರಿತುಕೊಳ್ಳುವುದು ಒಳ್ಳೆಯದು. ಈ ನಿಟ್ಟಿನಲ್ಲಿ ನಮ್ಮ ಧ್ಯೇಯೋದ್ದೇಶವನ್ನು ಸಾಧಿಸಲು ನಿರ್ದೇಶನಾಲಯವು ನಮಗೆ ಸಹಾಯ ಮಾಡುತ್ತದೆ. ಇದು ಜನರನ್ನು ನೇಮಕ ಮಾಡುವ ವಿಷಯದಲ್ಲಿಯೂ ಸಹಾಯ ಮಾಡುತ್ತದೆ. ಈ ಸಂಸ್ಥೆಗಳಿಗೆ ಆಧುನಿಕ ಪದ್ಧತಿಯ ವೈದ್ಯರುಗಳನ್ನು ನೇಮಕ ಮಾಡಬೇಕಾದಂಥ ಸಂದರ್ಭಗಳೂ ಇವೆ. ವೈದ್ಯಕೀಯ ವಿಜ್ಞಾನದ ಬೇರೆ ಬೇರೆ ಪದ್ಧತಿಗಳ ತೌಲನಿಕ ಅಧ್ಯಯನ ಮತ್ತು ಸಂಶೋಧನಾ ಕಾರ್ಯವನ್ನು ಕೈಗೊಳ್ಳಬೇಕಾದ ಅಗತ್ಯವೂ ಇದೆ. ಏನೇ ಆದರೂ, ಈಗಾಗಲೇ ರಚಿಸಲಾಗಿರುವ ಹಾಗೂ ಈ ಕಾರ್ಯವಲ್ಲಿ ನಿರತವಾಗಿರುವ ಸಮಿತಿಯಿಂದ ಮಾಡಲಾದ ಶಿಫಾರಸುಗಳ ಎಲ್ಲಾ ಅಂಶಗಳನ್ನು ನಾವು ಪರಿಶೀಲಿಸುತ್ತೇವೆಂದು ನಾನು ಸದನಕ್ಕೆ ಭರವಸೆ ಕೊಡುತ್ತೇನೆ ಮತ್ತು ಈ ವೈದ್ಯಕೀಯ ಪದ್ಧತಿಗಾಗಿ ಅಗತ್ಯ ಸ್ಥಾನಮಾನವನ್ನು ನಾವು ಹೇಗೆ ಕೊಡಬಹುದೆಂದು ವಿಚಾರ ಮಾಡೋಣ. ಈ ಮಾತುಗಳೊಂದಿಗೆ ಈ ನಿರ್ಣಯವನ್ನು ನಾನು ಒಪ್ಪಿಕೊಳ್ಳಲಾಗುವುದಿಲ್ಲವೆಂದು ಹೇಳಬೇಕಾಗುತ್ತದೆ. ಇನ್ನೊಂದು ರೀತಿಯಲ್ಲಿ ಇದನ್ನು ನಾವು ವಿರೋಧಿಸಿದ್ದೇವೆ. ಆದರೆ ಅದೇ ಸಮಯದಲ್ಲಿ ಸಾಧ್ಯವಾದಷ್ಟು ಬೇಗನೆ ಈ ಪ್ರಾಚೀನ ವೈದ್ಯಕೀಯ ಪದ್ಧತಿಯ ಆಧುನೀಕರಣಗೊಳ್ಳುವಂತೆ ಮಾಡಲು ಸಾಧ್ಯವಿರುವ ಎಲ್ಲ ಪ್ರಯತ್ನಗಳನ್ನು ನಡೆಸುವುದಾಗಿ ನಾನು ಸದನಕ್ಕೆ ಭರವಸೆ ನೀಡಬಯಸುತ್ತೇನೆ. ಆದುದರಿಂದ ಈ ನಿರ್ಣಯದ ಸೂಚಕರು ಅದನ್ನು ಹಿಂತೆಗೆದುಕೊಳ್ಳಬೇಕೆಂದು ನಾನು ವಿನಂತಿಸುತ್ತೇನೆ.

(ಇದರ ಸೂಚಕರಾದ ಶ್ರೀ ಎ. ಎಸ್. ಪಾಟೀಲ್ ಹಾಜರಾಗಿರಲಿಲ್ಲ)

**ಮಾನ್ಯ ಉಪ ಸಭಾಧ್ಯಕ್ಷರು :**

"ಈ ಸಭೆಯು ಶೀಘ್ರದಲ್ಲಿ ರಾಜ್ಯದಲ್ಲಿ ಪ್ರತ್ಯೇಕವಾದ ಮತ್ತು ಸ್ವತಂತ್ರವಾದ ಭಾರತೀಯ ವೈದ್ಯಕೀಯ ಪದ್ಧತಿ ಇಲಾಖೆಯನ್ನು ಸ್ಥಾಪಿಸಬೇಕಾಗಿ ಅಭಿಪ್ರಾಯಪಟ್ಟಿರುತ್ತದೆ ಎಂಬುದು" ಪ್ರಶ್ನೆಯಾಗಿರುತ್ತದೆ.

(ನಿರ್ಣಯವನ್ನು ನಿರಾಕರಿಸಲಾಯಿತು)

ತುರ್ತು ಸಾರ್ವಜನಿಕ ಪ್ರಾಮುಖ್ಯತೆಯ ವಿಷಯದ ಕಡೆ ಗಮನ ಸೆಳೆಯುವುದು

ಉಲ್ಲೇಖ : ಬೆಂಗಳೂರು ನಗರದಲ್ಲಿ ಸಿಡುಬು ರೋಗವು ಹಬ್ಬಿರುವ ಬಗ್ಗೆ

**ಶ್ರೀ ಕೆ. ದೇವಯ್ಯ (ಶ್ರೀರಾಮಪುರಂ)** : ಸ್ವಾಮಿ. ಬೆಂಗಳೂರು ನಗರದಲ್ಲಿ ಸಿಡುಬು ರೋಗವು ಹಬ್ಬಿರುವ ಬಗ್ಗೆ ನಾನು ಆರೋಗ್ಯ ಸಚಿವರ ಗಮನ ಸೆಳೆಯಬಯಸುತ್ತೇನೆ.

**ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು):** ಸ್ವಾಮಿ. ರಾಷ್ಟ್ರೀಯ ಸಿಡುಬು ರೋಗ ನಿವಾರಣೆಯಲ್ಲಿ ತೊಡಗುವ ಹಂತವನ್ನು ಬೆಂಗಳೂರು ನಗರದಲ್ಲಿ 1ನೇ ಮಾರ್ಚ್ 1963ರಿಂದ 17ನೇ ಜುಲೈ 1963ರವರೆಗೆ ಕೈಗೊಳ್ಳಲಾಗಿತ್ತು. 17ನೇ ಜುಲೈ 1963ರಿಂದ 31ನೇ ಮಾರ್ಚ್ 1964ರವರೆಗೆ ಇದನ್ನು ಕೊನೆದುಹಾಕುವ ಕಾರ್ಯಾಚರಣೆಗಳನ್ನು ಕೈಗೊಳ್ಳಲಾಗಿತ್ತು. ಈ ಅವಧಿಯಲ್ಲಿ ಗಣನೆ ಮಾಡಲಾದ 8,15,803 ಜನರ ಪೈಕಿ 37,776ರಷ್ಟು ಮೊದಲ ಹಂತದ ಮತ್ತು 3,64,157 ಪುನಃ ಲಸಿಕೆ ಹಾಕುವ (6,71,933ರಷ್ಟು ಲಸಿಕೆ ಹಾಕಿರುವುದು) ಕಾರ್ಯವನ್ನು ಕೈಗೊಂಡಿದ್ದು ಇದರಲ್ಲಿ ಶೇ 82.3ರಷ್ಟು ಸೇರಿರುತ್ತದೆ.

ನಗರಸಭೆಯ ಪರಿಮಿತಿಯಲ್ಲಿ ಪ್ರತಿ 20,000 ಜನಸಂಖ್ಯೆಗೆ ಒಬ್ಬರಂತೆ ಲಸಿಕೆ ಹಾಕುವವರನ್ನು ನೇಮಕ ಮಾಡಿಕೊಳ್ಳುವ ಮೂಲಕ 1ನೇ ಏಪ್ರಿಲ್ 1964 ರಿಂದ ನಗರದಲ್ಲಿ ರಾಷ್ಟ್ರೀಯ ಸಿಡುಬು ರೋಗ ನಿವಾರಣ ಕಾರ್ಯಕ್ರಮದ ನಿರ್ವಹಣಾ ಹಂತದ ಒಪ್ಪಂದಗಳನ್ನು ಅನುಷ್ಠಾನಗೊಳಿಸಲು ಬೆಂಗಳೂರು ನಗರ ಸಭೆಯ ಅಧಿಕಾರಿಗಳನ್ನು ಕೇಳಿಕೊಳ್ಳಲಾಗಿತ್ತು. ಪ್ರಸ್ತುತ ನಗರಸಭೆಯಿಂದ ನೇಮಕಗೊಂಡಂಥ 28 ಜನರ ಲಸಿಕೆ ಹಾಕುವವರಿದ್ದು ಇವರು ನಿಯಮಿತವಾಗಿ ಲಸಿಕೆ ಹಾಕುವ ಕಾರ್ಯವನ್ನು ಮಾಡುತ್ತಿದ್ದಾರೆ. ಮೇಲೆ ಹೇಳಲಾದ ಮಾನದಂಡದ ಆಧಾರದ ಮೇಲೆ ನಿಗಮವು ಇನ್ನು 37 ಮಂದಿ ಲಸಿಕೆ ಹಾಕುವವರನ್ನು ನೇಮಿಸಬೇಕಾದ ಅಗತ್ಯವಿದೆ. ಈ ಪ್ರಶ್ನೆಯು ಈಗಾಗಲೇ ನಗರಸಭೆಯ ಪರಿಶೀಲನೆಯಲ್ಲಿದೆ. ಆದರೂ ತುರ್ತು ಪರಿಸ್ಥಿತಿಗಳಲ್ಲಿ ನಿಗಮದ 63 ಮಂದಿ ಕಿರಿಯ ಆರೋಗ್ಯ ನಿರೀಕ್ಷಕರನ್ನು ಸಹ ಲಸಿಕೆ ಹಾಕುವ ಕಾರ್ಯಕ್ಕೆ ತೆಗೆದುಕೊಳ್ಳಲಾಗಿರುತ್ತದೆ. ಸಾರ್ವಜನಿಕ ಆರೋಗ್ಯ ಇಲಾಖೆಯ 30 ಪ್ರಾಥಮಿಕ ಆರೋಗ್ಯ ಕಾರ್ಯಕರ್ತರನ್ನು ಸಹ ಲಸಿಕೆ ಹಾಕುವ ಕಾರ್ಯಕ್ಕೆ ಬಳಸಿಕೊಳ್ಳಲಾಗಿದೆ. ಇವರ ಜೊತೆಗೆ ನಗರಸಭೆಯಲ್ಲಿ 20 ಜನ ವಾಸಸ್ಥಾನದ ಸೂಲಗಿತ್ತಿಯರಿದ್ದು ಇವರು ಕಳೆದ ಎರಡು ತಿಂಗಳುಗಳಿಂದ ಲಸಿಕೆ ಹಾಕುವ ಕಾರ್ಯವನ್ನು ಮಾಡುತ್ತಿದ್ದಾರೆ.

ರಾಷ್ಟ್ರೀಯ ಸಿಡುಬು ರೋಗ ನಿವಾರಣಾ ಕಾರ್ಯಕ್ರಮದಲ್ಲಿ ತೊಡಗಿದ ಹಂತವು ಬೆಂಗಳೂರಿನಲ್ಲಿ ಪೂರ್ಣಗೊಂಡಂತಹ 1963ರ ಜುಲೈ 17ರಿಂದ ಅಕ್ಟೋಬರ್ 1965ರ ಮುಕ್ತಾಯದವರೆಗೆ ಸಿಡುಬು ರೋಗವು ಕಡಿಮೆಯಾಗಿರುವ ಪ್ರಕರಣಗಳು ಕಂಡುಬಂದಿರುತ್ತದೆ. ಸಿಡುಬು ರೋಗ ಪ್ರಕರಣವು ನವಂಬರ್ 1965ರಿಂದ ಪ್ರಾರಂಭವಾಗಿದೆ. ಆದರೆ, ಫೆಬ್ರವರಿಯ ಆರಂಭದಿಂದ ಪ್ರಕರಣ ಇಳಿಮುಖವಾಗಿದೆ. ಜನವರಿ 1965ರಿಂದ ಫೆಬ್ರವರಿ 1966ರ ಅಂತ್ಯದವರೆಗೆ ನಗರಸಭೆಯ ಪ್ರದೇಶದಲ್ಲಿ 487 ಜನರಿಗೆ ಸಿಡುಬು ರೋಗವು ತಗುಲಿದ್ದು, 119 ಜನರು ಮರಣ ಹೊಂದಿರುತ್ತಾರೆ. ಈ ಪ್ರಕರಣಗಳನ್ನು ಬೆಂಗಳೂರಿನ ಸಾಂಕ್ರಾಮಿಕ ರೋಗಗಳ ಆಸ್ಪತ್ರೆಗೆ ವರ್ಗಾಯಿಸಲಾಗಿದ್ದು ಅಲ್ಲಿ ಅವರಿಗೆ ತೃಪ್ತಿಕರವಾಗಿ ಚಿಕಿತ್ಸೆ ನೀಡಲಾಗಿದೆ.

ಏಪ್ರಿಲ್ 1964ರಿಂದ ಡಿಸೆಂಬರ್ 1964ರವರೆಗೆ ನಗರ ಸಭೆಯ ವ್ಯಾಪ್ತಿಯಲ್ಲಿ 93,548 ಲಸಿಕೆಗಳನ್ನು ಹಾಕಲಾಗಿದೆ. ಜನವರಿ 1965 ರಿಂದ ಡಿಸೆಂಬರ್ 1965ರ ಅಂತ್ಯದವರೆಗ 4,02,947 ಲಸಿಕೆಗಳನ್ನು ಹಾಕಲಾಗಿದೆ. ಲಸಿಕೆ ಹಾಕುವುದು ಮತ್ತು ಮರು ಲಸಿಕೆ ಹಾಕುವುದು ಮುಂದುವರೆದಿದೆ.

ಬೆಂಗಳೂರು ನಗರದಲ್ಲಿ ಬಹುಮಟ್ಟಿಗೆ ಸಿಡುಬು ರೋಗದ ಪ್ರಕರಣಗಳು ವಲಸೆ ಹೋಗುವ ಸ್ವಭಾವದವರಾಗಿದ್ದು ಕೊಳಗೇರಿಗಳಲ್ಲಿ ವಾಸ ಮಾಡುವ ಕೂಲಿ ಕಾರ್ಮಿಕರಲ್ಲಿ ಕಂಡುಬಂದಿರುತ್ತದೆ. ಇಂತಹ ಪ್ರದೇಶಗಳು ಮತ್ತು ಸ್ಥಳಗಳು ಈ ಕೆಳಗಿನಂತಿವೆ:

1. ಸುಬ್ರಮಣ್ಯನಗರ – ಕೇತಮಾರನಹಳ್ಳಿ ಹತ್ತಿರ
2. ಶ್ರೀರಾಮಪುರಂ
3. ರಾಜಾಜಿನಗರದ ಕೆಲವು ಜನನಿಬಿಡವಾದ ಭಾಗಗಳು
4. ಮಲ್ಲೇಶ್ವರಂನ ಮೀಟರ್ ಗೇಜ್ ರೈಲ್ವೆ ಹಳಿಯ ಎರಡೂ ಬದಿಗಳಲ್ಲಿನ ಕೆಲವು ಪ್ರದೇಶಗಳು
5. ಸಣ್ಣೇನಹಳ್ಳಿಯ ಹೊನ್ನಾರಪೇಟೆ
6. ಹನುಮಂತನಗರ
7. ಕೋದಂಡ ರಾಮಪುರ

8. ಕಂಟೋನ್ಮೆಂಟ್ ಮಾರುಕಟ್ಟೆಯ ಸುತ್ತಮುತ್ತ ಮುಖ್ಯವಾಗಿ ಈ ಪ್ರದೇಶಗಳಲ್ಲಿ ಲಸಿಕೆ ಹಾಕುವ ಕಾರ್ಯವನ್ನು ಕೇಂದ್ರೀಕರಿಸಲಾಗಿದೆ. ತೊಂದರೆಗೆ ಒಳಗಾದ ಜನರಿಗೆ ರಕ್ಷಣೆಯನ್ನು ನೀಡಲಾಗಿದೆ.

ಬೆಂಗಳೂರು ನಗರದಲ್ಲಿ ಲಸಿಕೆ ಹಾಕುವ ಕಾರ್ಯ ಕೈಗೊಳ್ಳುವುದಕ್ಕಾಗಿ ಶೈತ್ಯೀಕರಿಸಲಾದ (ಫ್ರೀಜ್ ಡ್ರೈಯ್ಡ್) ಲಸಿಕೆಯನ್ನು ಉಚಿತವಾಗಿ ಪೂರೈಕೆ ಮಾಡಲಾಗುತ್ತಿದೆ.

**ಶ್ರೀ ಕೆ. ದೇವಯ್ಯ:** ಸಿಡುಬು ರೋಗವು ಇಳಿಮುಖವಾಗುತ್ತದೆಯೆಂದು ಸಚಿವರು ಹೇಳಿದ್ದಾರೆ. ಅದು ಹಾಗೇನಿಲ್ಲ. ನಿನ್ನೆ 2 ಸಾವುಗಳಾಗಿವೆ. ಮೊನ್ನೆ 2 ಸಾವುಗಳಾಗಿವೆ ಮತ್ತು ಅದರ ಹಿಂದಿನ ದಿನ 2 ಸಾವುಗಳಾಗಿವೆ. ಈ ಅಂಕಿ ಅಂಶಗಳನ್ನು ನಾನು ಶ್ರೀ ರಾಮಪುರಂ ಸ್ಮಶಾನದಲ್ಲಿನ ದಾಖಲೆಗಳಿಂದ ಸಂಗ್ರಹಿಸಿದ್ದೇನೆ. ಲಸಿಕೆ ಹಾಕುವ ಕಾರ್ಯ ನಡೆದೇ ಇಲ್ಲ. ತೀವ್ರತರವಾಗಿ ಲಸಿಕೆ ಹಾಕುವ ಕಾರ್ಯವನ್ನು ಕೈಗೊಳ್ಳುವಂತೆ ಸಚಿವರು ನೋಡಿಕೊಳ್ಳಬೇಕು ಮತ್ತು ಅದೇ ಸಮಯದಲ್ಲಿ ಒದಗಿಸಲಾಗಿರುವ ಲಸಿಕೆಯು ಉತ್ತಮ ಗುಣಮಟ್ಟದ್ದಾಗಿದೆಯೇ ಎಂಬುದನ್ನು ಅವರು ಪರಿಶೀಲನೆ ಮಾಡುವರೆ?

**ಶ್ರೀ ಕೆ. ನಾಗಪ್ಪ ಆಳ್ವ:** ನಾನು ಈ ಎಲ್ಲಾ ವಿಷಯಗಳನ್ನು ವಿವರವಾಗಿ ತಿಳಿಸಿದ್ದೇನೆ. ಸಾಮಾನ್ಯವಾಗಿ ಹೇಳುವುದಾದರೆ, ಪ್ರಕರಣ ಇಳಿಮುಖವಾಗಿದೆ. ಆ ಬಗ್ಗೆ ಸಂಶಯವಿಲ್ಲ. ನಾನು ಈಗಾಗಲೇ ಹೇಳಿರುವಂತೆ ಎಲ್ಲಿಯಾದರೂ ಸಿಡುಬು ರೋಗದ ಪ್ರಕರಣವಿದ್ದರೆ ಅಲ್ಲಿ ಲಸಿಕೆ ಹಾಕುವ ಕಾರ್ಯವನ್ನು ಕೈಗೊಳ್ಳಲಾಗಿದೆ ಮತ್ತು ಲಸಿಕೆ ಸರಬರಾಜು ಆಗಿರುವುದನ್ನು ನಾವು ಪರಿಶೀಲಿಸುತ್ತೇವೆ. ನಿರ್ದಿಷ್ಟವಾಗಿ, ಈ ಶೈತ್ಯೀಕರಿಸಿ ಶುಷ್ಕಗೊಳಿಸಲಾದ (ಫ್ರೀಜ್ ಡ್ರೈಯ್ಡ್) ಲಸಿಕೆಯು ಅತ್ಯುತ್ತಮವಾದದ್ದೆಂದು ಪರಿಗಣಿಸಲಾಗಿದೆ ಮತ್ತು ಇದನ್ನು ಉಚಿತವಾಗಿ ಪೂರೈಸಲಾಗುತ್ತಿದೆ. ಈ ಕೆಲಸಗಳನ್ನು ಮಾಡಲು ತೊಂದರೆಯೇ ಇಲ್ಲ. ಇದು ಎಲ್ಲಾ ಜನರನ್ನು ತಲುಪಲು ಸರ್ವ ಪ್ರಯತ್ನಗಳನ್ನು ಮಾಡಲಾಗುತ್ತಿದೆ.

**ಮಾನ್ಯ ಸಭಾಧ್ಯಕ್ಷರು:** ಅವರೆ ಅಧಿವೇಶನವು ನಡೆಯುತ್ತಿರುವ ವಿಶೇಷ ಸಂಗತಿಯ ದೃಷ್ಟಿಯಲ್ಲಿ ಬೆಂಗಳೂರು ನಗರದ ಆರೋಗ್ಯವನ್ನು ಉತ್ತಮ ರೀತಿಯಲ್ಲಿ ಕಾಪಾಡಿಕೊಂಡು ಬರಲಾಗುತ್ತಿದೆಯೆಂದು ಮತ್ತು ಅದಕ್ಕಾಗಿ ಏನನ್ನಾದರೂ ಮಾಡಲಾಗಿದೆಯೆಂದು ನೋಡಲು ಅವರಿಗಿರುವ ಹೆಚ್ಚುವರಿ ಜವಾಬ್ದಾರಿಯನ್ನು ಮಾನ್ಯ ಸಚಿವರು ಪರಿಗಣಿಸುತ್ತಾರೆಯೇ? ಸ್ವಲ್ಪಮಟ್ಟಿಗೆ ಸರಬರಾಜು ಮಾಡಲಾಗಿದೆ ಎನ್ನುವುದು ದಾಖಲೆಯಲ್ಲಿರಬಹುದು. ಆದರೆ ಸ್ವಲ್ಪ ಮುಂದಿನ ತನಿಖೆಯನ್ನು

**ಶ್ರೀ ಸಿದ್ದಯ್ಯ ಕಾಪೀಮಠ** : ಪ್ರಕರಣ 3(3)(ಎ)ಗೆ ತಿದ್ದುಪಡಿ ಮಾಡಿರುವುದರ ಮೇರೆಗೆ ಭಾರತೀಯ ವೈದ್ಯಕೀಯ ಪದ್ಧತಿಯ ಇಲಾಖಾ ಮುಖ್ಯಸ್ಥರಿಗೆ ಬದಲಾಗಿ ಆರೋಗ್ಯ ಸೇವೆಗಳ ನಿರ್ದೇಶನಾಲಯದ ಭಾರತೀಯ ವೈದ್ಯಕೀಯ ಪದ್ಧತಿಯ ಪ್ರಭಾರದಲ್ಲಿರುವ ಸಹಾಯಕ ನಿರ್ದೇಶಕರನ್ನು ನೇಮಿಸಲು ಉದ್ದೇಶಿಸಲಾಗಿದೆ. ನೀವು ಇಲ್ಲಿ ಆರೋಗ್ಯ ಸೇವೆಗಳ ನಿರ್ದೇಶಕರನ್ನೇಕೆ ನೇಮಿಸಬಾರದು?

**ಶ್ರೀ ಕೆ. ನಾಗಪ್ಪ ಆಳ್ವ**: ಇಲ್ಲಿ ಸ್ಥಾನಪಾನ ಹೇಗಿದೆಯೆಂದರೆ ಆರೋಗ್ಯ ಸೇವೆಗಳ ನಿರ್ದೇಶಕರು ಇಡೀ ಇಲಾಖೆಯ ಮುಖ್ಯಸ್ಥರಾಗಿದ್ದಾರೆ ಮತ್ತು ಆರೋಗ್ಯ ಸೇವೆಗಳ ನಿರ್ದೇಶನಾಲಯದ ಭಾರತೀಯ ವೈದ್ಯಕೀಯ ಪದ್ಧತಿಯ ಪ್ರಭಾರದಲ್ಲಿರುವ ಸಹಾಯಕ ನಿರ್ದೇಶಕರು ಈ ಇಲಾಖೆಯ ಮುಖ್ಯಸ್ಥರಾಗಿದ್ದಾರೆ.

**ಶ್ರೀ ಸಂಜೀವನಾಥ ಐಕಳ** : ಮಾನ್ಯ ಆರೋಗ್ಯ ಮಂತ್ರಿಗಳು ತಂದಂಥ ಕೆಲವು ಅಮೆಂಡ್‌ಮೆಂಟ್‌ಗಳನ್ನು ವಿತ್‌ಡ್ರಾ ಮಾಡುತ್ತಿದ್ದಾರೆ. ಪೊಸಿಷನ್ ಎಲ್ಲಿಯವರೆಗೆ ಬಂತು ಎಂದು ಗೊತ್ತಾಗಲಿಲ್ಲ.

**ಶ್ರೀ ಕೆ. ನಾಗಪ್ಪ ಆಳ್ವ** : ನಂತರ ನಿನ್ನು ಬಿಟ್ಟುಬಿಡಲಾಗುತ್ತದೆ.

## ಆಯುರ್ವೇದ ಮತ್ತು ಯುನಾನಿಗೆ ಪ್ರತ್ಯೇಕ ನಿರ್ದೇಶನಾಲಯ ಇರಲಿ

**ಶ್ರೀ ಸಂಜೀವನಾಥ ಐಕಳ** : ಅಷ್ಟರಮಟ್ಟಿಗೆ ಸ್ವಾಗತಿಸುತ್ತೇವೆ. ಇಲ್ಲಿ ಅಮೆಂಡ್‌ಮೆಂಟ್ ಆಫ್ ಸೆಕ್ಷನ್ 1ರಲ್ಲಿ "ಒಬ್ಬರು ಭಾರತೀಯ ವೈದ್ಯಕೀಯ ವಿಭಾಗದ ಮುಖ್ಯಸ್ಥರಾಗಿ ಇರುವುದು; ಒಬ್ಬರು ಆರೋಗ್ಯ ಸೇವಾ ನಿರ್ದೇಶನಾಲಯದ ಭಾರತೀಯ ವೈದ್ಯಕೀಯ ವಿಭಾಗದ ಪ್ರಭಾರದಲ್ಲಿ ಸಹಾಯಕ ನಿರ್ದೇಶಕರಾಗಿರತಕ್ಕದ್ದು." ಎಂದು ಸೂಚಿಸಬೇಕೆಂದು ಸೂಚಿಸಿದ್ದಾರೆ. ಆಯುರ್ವೇದ ಮತ್ತು ಯುನಾನಿ ಪ್ರಾಕ್ಟಿಷನರ್ಸ್ ಆಕ್ಟ್ ಪ್ರಕಾರ ಒಂದು ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್ ಎಂದು ರಚಿಸಿದ್ದಾರೆ. ಅನೇಕ ವರ್ಷಗಳ ನಂತರ ಈ ಬೋರ್ಡ್ ನೇಮಕ ಮಾಡಲಾಗಿದೆ. ಈ ಬೋರ್ಡಿಗೆ ಕೆಲವು ಅಧಿಕಾರಗಳನ್ನು ಕೊಟ್ಟಿದ್ದಾರೆ. ಇಂತಹ ಬದಲಾವಣೆಗಳು ಬರುವಾಗ ಈ ಬೋರ್ಡ್ ಆಫ್ ಇಂಡಿಯನ್ ಮೆಡಿಸಿನ್ ಅವರ ಅಭಿಪ್ರಾಯಗಳನ್ನು ಕೇಳಿದ್ದೀರೋ ಮತ್ತು ಈ ಬಗ್ಗೆ ಅವರಿಂದ ಏನಾದರೂ [illegible] ತಿಳಿಸಿಕೊಂಡಿರುವ ಮೇರೆಗೆ ಬೋರ್ಡ್ ಆಫ್ ಇಂಡಿಯನ್ [illegible] ಸೆಕ್ಷನ್ಸ್ ಇವೆ. ಆ ವಿಷಯದಲ್ಲಿ [illegible] ಸ್ಟೇಟ್ ಆಫ್

ಹೆಲ್ತ್ ಎಂದರೆ ಆಫೀಸಿನಲ್ಲಿರುವ ಸೂಪರಿಟೆಂಡೆಂಟ್ ಇದ್ದ ಹಾಗೆ. ಆಯುರ್ವೇದ ಮತ್ತು ಯುನಾನಿ ಮೆಡಿಸಿನ್‌ಗೆ ಒಂದು ಸಪರೇಟ್ ಡೈರೆಕ್ಟೊರೇಟ್ ಬೇಕೆಂದು ಕೇಳಿದ್ದೆವು. ಈಗ ಆಯುರ್ವೇದ, ಯುನಾನಿ ಮತ್ತು ಹೋಮಿಯೋಪಥಿ ವಿಭಾಗದಲ್ಲಿ ಕೆಲಸಗಳು ಜಾಸ್ತಿಯಾಗುತ್ತಿವೆ. ಹೊಸ ಕಾಲೇಜಸ್ ಸ್ಥಾಪನೆಯಾಗುತ್ತಿವೆ. ಹೊಸ ಆಸ್ಪತ್ರೆಗಳು ಪ್ರಾರಂಭವಾಗುತ್ತಿವೆ. ಕೇಂದ್ರ ಸರ್ಕಾರದವರು ಈ ಬಗ್ಗೆ ನಿರ್ದಿಷ್ಟ ಯೋಜನೆಗಳನ್ನು ಇಟ್ಟುಕೊಂಡು ಆಯುರ್ವೇದದ ಪುನರುದ್ಧಾರದ ಬಗ್ಗೆ, ಆಯುರ್ವೇದದ ಶ್ರೇಷ್ಠತೆಯನ್ನು ಕಾಯುವ ಬಗ್ಗೆ ಕೆಲವು ಕಾರ್ಯಕ್ರಮಗಳನ್ನು ಕೈಗೊಂಡಿದ್ದಾರೆ. ಅದರ ಪ್ರಕಾರ ಕೇಂದ್ರ ಸರ್ಕಾರದಿಂದ ಪ್ರಾಂತೀಯ ಸರ್ಕಾರಕ್ಕೆ ಹಣದ ಸಹಾಯ, ತಾಂತ್ರಿಕ ಸಹಾಯ, ಬೇರೆ ಬೇರೆ ರೀತಿಯ ಸಹಾಯ ದೊರಕುತ್ತವೆ. ಇದನ್ನು ಕ್ರೋಢೀಕರಿಸಿ ಒಂದು ಯೋಗ್ಯ ಮತ್ತು ನಿರ್ದಿಷ್ಟವಾದ ಕ್ರಮ ಕೈಗೊಳ್ಳಬೇಕಾಗಿದೆ. ಆಯುರ್ವೇದದ ಶ್ರೇಷ್ಠತೆಯನ್ನು ಕಾಯಬೇಕಾದರೆ ಆಯುರ್ವೇದ ಮತ್ತು ಯುನಾನಿಯಿಂದ ಯೋಗ್ಯ ಚಿಕಿತ್ಸೆ ದೊರೆಯಬೇಕಾದರೆ ಪ್ರಾಂತೀಯ ಮಟ್ಟದಲ್ಲಿ ಒಂದು ಡೈರೆಕ್ಟೊರೇಟ್ ಇರಬೇಕಾಗಿತ್ತು. ಇದನ್ನು ಬಿಟ್ಟು ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಹೆಲ್ತ್ ಅನ್ನು ನೇಮಕ ಮಾಡಿದ್ದು ಸೋಜಿಗ ಮತ್ತು ವಿಸ್ಮಯದ ಸಂಗತಿ. ಇದರಿಂದ ಆಯುರ್ವೇದದ ಉದ್ಧಾರವಾಗುವುದಿಲ್ಲ. ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಹೆಲ್ತ್‌ಗೆ ಬಹಳ ಕಡಿಮೆ ಅಧಿಕಾರಿಗಳು ಇರುವುದು. ಅವರ ಮೇಲೆ ಡೆಪ್ಯುಟಿ ಡೈರೆಕ್ಟರ್, ಜಾಯಿಂಟ್ ಡೈರೆಕ್ಟರ್ ಮತ್ತು ಅವರ ಮೇಲೆ ಡೈರೆಕ್ಟರ್ ಆಫ್ ಹೆಲ್ತ್ ಇರುತ್ತಾರೆ. ಯಾವುದಾದರೂ ಸೂಚನೆ ಅಥವಾ ಸ್ಕೀಮುಗಳನ್ನು ಅಥವಾ ಕಾರ್ಯಕ್ರಮಗಳನ್ನು ತಯಾರು ಮಾಡಿದರೆ, ಅದು ಈ ಮೂರು ಜನರಿಗೆ ಹೋಗಬೇಕಾಗುತ್ತದೆ. ಅವರೆಲ್ಲಾ......

(ಶ್ರೀ ಎಸ್. ಗೋಪಾಲಗೌಡ)

ಇನ್ನು ಕಾಲೇಜಿನವರ ಇತ್ತೀಚಿನ ಬೇಡಿಕೆಗಳು ಸರ್ಕಾರದ ಮುಂದಿವೆ. ಮೈಸೂರಿನ ಕೆಲವು ಆಸ್ಪತ್ರೆಗಳ ಬೇಡಿಕೆಗಳೂ ಇವೆ. ಅದನ್ನು ತಾವು ಅಷ್ಟಾಗಿ ಕಾರ್ಯಗತ ಮಾಡುವುದಕ್ಕೆ ಪ್ರಯತ್ನ ಮಾಡಿಲ್ಲವೆಂದು ಕಾಣುತ್ತದೆ. ಆದ್ದರಿಂದ ಅವರ ಬೇಡಿಕೆಗಳನ್ನು ಸರ್ಕಾರದವರು ಪರಿಶೀಲನೆ ಮಾಡಿ ಆಯುರ್ವೇದ ಮತ್ತು ಯುನಾನಿ ಅಭಿವೃದ್ಧಿಗೆ ಯೋಗ್ಯವಾದ ಸ್ಥಾನಮಾನಗಳನ್ನು ಕಲ್ಪಿಸಿಕೊಡಬೇಕೆಂದು ಈ ಸಂದರ್ಭದಲ್ಲಿ ಸರ್ಕಾರದವರಲ್ಲಿ ಕೇಳಿಕೊಳ್ಳುತ್ತೇನೆ.

ಗಮನ ಕೊಡಬೇಕು. ಮೈಸೂರಿನ ಆಯುರ್ವೇದ ಇನ್ಸ್ಟಿಟ್ಯೂಟ್‌ನಲ್ಲಿ ಉತ್ತಮ ಕೆಲಸ-ಕಾರ್ಯಗಳು ನಡೆಯುತ್ತಿವೆ ಎಂಬುದನ್ನು ನಾನು ನೋಡಿದ್ದೇನೆ.

ಶುದ್ಧ ಆಯುರ್ವೇದ ಪದ್ಧತಿಯಲ್ಲಿ ಅಲೋಪತಿ ಬೆರಸಿ ಕೆಲಸ ಮಾಡತಕ್ಕಂಥ ವಿಧಾನದ ಬಗ್ಗೆ ಕಾಂಟ್ರವರ್ಸಿ ಬಂದಿದೆ. ಕೇವಲ ಶುದ್ಧ ಆಯುರ್ವೇದ ಇರಬೇಕೆಂದು ಕೆಲವರು ಹೇಳುತ್ತಾರೆ. ಶುದ್ಧ ಆಯುರ್ವೇದದ ಜೊತೆಗೆ ಅಲೋಪತಿ ಔಷಧ ಕೂಡ ಉಪಯೋಗ ಮಾಡಬೇಕೆಂದು ಕೆಲವರ ಅಭಿಪ್ರಾಯವಾಗಿದೆ. ಸಂಪೂರ್ಣವಾಗಿ ಒಂದು ತೀರ್ಮಾನಕ್ಕೆ ಬಂದಿಲ್ಲವೆಂದು ಅಂದುಕೊಂಡಿದ್ದೇನೆ. ಇದರಲ್ಲಿ ಆಯುರ್ವೇದದ ಬಗ್ಗೆ ಹೆಚ್ಚು ಗಮನ ಕೊಡಬೇಕು. ಹೆಚ್ಚಿನ ರೀತಿಯಲ್ಲಿ ಶಿಕ್ಷಣ ಕೊಡಬೇಕೆಂದು ಹೇಳಬಯಸುತ್ತೇನೆ.

ಇನ್ನು ಮೆಡಿಕಲ್ ಕಾಲೇಜಿನಲ್ಲಿ ಆಯುರ್ವೇದಕ್ಕೆ ಒಂದು ಸ್ಥಾನವಿಲ್ಲವೆಂಬುದು ನಿರ್ವಿವಾದ ವಿಚಾರ. ಪಾಶ್ಚಾತ್ಯ ದೇಶದಲ್ಲಿ ಮೆಡಿಕಲ್ ಕಾಲೇಜುಗಳಲ್ಲಿ ಆಯುರ್ವೇದ ಕಲಿಸುತ್ತಿದ್ದಾರೆ. ಆದುದರಿಂದ, ಶಿಕ್ಷಕರ ನೇಮಕ ಮಾಡುವುದಕ್ಕೆ ಮೊದಲು ಗಮನ ಕೊಡಬೇಕೆಂದು ಹೇಳುತ್ತೇನೆ. ಈ ತಿದ್ದುಪಡಿ ಮಸೂದೆ ಮೂಲಕ ಅಸಿಸ್ಟೆಂಟ್ ಡೈರೆಕ್ಟರರನ್ನು ಬೋರ್ಡ್ ಮೆಂಬರ್ ಮಾಡುವುದಕ್ಕೆ ಏರ್ಪಾಡು ಮಾಡಿದೆ. ಈ ತಿದ್ದುಪಡಿ ಮಸೂದೆಯನ್ನು ಸಂಪೂರ್ಣವಾಗಿ ಒಪ್ಪಬೇಕು ಮತ್ತು ಇದರಿಂದ ಬಹುಮಟ್ಟಿಗೆ ಆಯುರ್ವೇದ ಶಿಕ್ಷಣದ ಪ್ರಗತಿಗೆ ಅನುಕೂಲವಾಗುತ್ತದೆ ಎಂದು ನಾನು ಹೇಳಬಯಸುತ್ತೇನೆ.

## ಆಯುರ್ವೇದ ಪದ್ಧತಿಗೆ ಗರಿಷ್ಠ ಪ್ರೋತ್ಸಾಹ

ಶ್ರೀ ಕೆ. ನಾಗಪ್ಪ ಆಳ್ವ : ಸ್ವಾಮಿ, ಮಾನ್ಯ ಸದಸ್ಯರಾದ ಸಂಜೀವನಾಥ ಐಕಳ ಅವರು, ಕೃಷ್ಣ ಅವರ ಮತ್ತು ಗೋಪಾಲಗೌಡರು ಕೊಟ್ಟ ಉತ್ತಮ ಸಲಹೆಗಳಿಗೆ ನಾನು ಕೃತಜ್ಞನು. ಈ [illegible]ದಲ್ಲಿ ಬಹಳ ಸಂಕ್ಷೇಪವಾಗಿ ತಿಳಿದುಕೊಳ್ಳದೆ, [illegible] ವಿಷಯ ತಿಳಿದುಕೊಳ್ಳದೆ ಕೆಲವು ಟೀಕೆ ಮಾಡಿದ್ದಾರೆ. ಅದಕ್ಕೆ ಕೆಲವು [illegible] ನಾನು ಹೇಳಬೇಕಾದುದು [illegible]. [illegible] ಈ ಸರಕಾರ [illegible] ಅಧಿಕಾರ ವಹಿಸಿಕೊಂಡ ಮೇಲೆ ಆಯುರ್ವೇದ ಪದ್ಧತಿಯು ಶುದ್ಧವಾಗಿ ಬೆಳವಣಿಗೆಯಾಗಿ ಅದನ್ನು ಬೆಳೆಸುವುದಕ್ಕೆ ಸತತವಾಗಿ ಸಾಧ್ಯವಾದಷ್ಟು ಪ್ರಯತ್ನ ಮಾಡಿದ್ದೇನೆ. ದೇಶದ ಹಿತದೃಷ್ಟಿಯಿಂದ, ಜನತೆಯ ಹಿತದೃಷ್ಟಿಯಿಂದ ಶುದ್ಧ ಆಯುರ್ವೇದ ಪದ್ಧತಿಯು ಹೇಗೆ ಬೆಳೆಯಬೇಕೆಂಬುದನ್ನು ಮುಖ್ಯವಾಗಿ ವಿಚಾರ ಮಾಡುತ್ತಿದ್ದೇವೆ. ಶುದ್ಧ ಆಯುರ್ವೇದ ಕೋರ್ಸ್ ಬಗ್ಗೆ ಹೋರಾಟ ಮಾಡಿ

ಡಿಪ್ಲೋಮಾ ಕೋರ್ಸ್‌ನಲ್ಲಿರತಕ್ಕ ವಿದ್ಯಾರ್ಥಿಗಳಿಗೂ ಕೂಡ ಡಿಗ್ರಿ ಕೋರ್ಸ್ ಮುಂದುವರೆಸುವುದಕ್ಕೆ ಅನುಕೂಲ ಮಾಡಿಕೊಟ್ಟಿದೆ. ಆಯುರ್ವೇದ ಡಿಗ್ರಿ ಕೋರ್ಸ್ ಪಡೆದಂಥವರಿಗೆ ಸಂಬಳ, ಸಾರಿಗೆ ಸ್ಥಾನಮಾನ ಮಾಡರ್ನ್ ಸಿಸ್ಟಮ್ ಡಾಕ್ಟರರಿಗೆ ಕೊಡತಕ್ಕಂಥಾದ್ದನ್ನು ಕೊಡಬೇಕು ಎಂದು ಸಹ ತೀರ್ಮಾನ ಮಾಡಿದೆ. ಅದೇ ರೀತಿ ಪೋಸ್ಟ್ ಗ್ರಾಜ್ಯುಯೇಟ್ ಕೋರ್ಸ್ ಕೂಡ ಅಗತ್ಯವಾಗಿದೆ. ಆಯುರ್ವೇದ ಕೋರ್ಸ್ ಹಿಂದುಳಿದಿದೆ ಎಂಬ ಆಪಾದನೆ ಇದ್ದರೆ ಅದನ್ನು ಹೋಗಲಾಡಿಸುವುದಕ್ಕೆ ಒಂದೇ ಒಂದು ದಾರಿ ಎಂದರೆ, ಸರಿಯಾಗಿ ಇರತಕ್ಕ ಕಾಲೇಜನ್ನು ಸ್ಥಾಪನೆ ಮಾಡಿ ಇರತಕ್ಕ ಸಂಸ್ಥೆಗಳನ್ನು ಬಲಪಡಿಸಿ ರಿಸರ್ಚ್ ಡಿಪಾರ್ಟ್‌ಮೆಂಟ್ ಕೆಲಸ ಮಾಡುವುದಕ್ಕೆ ಪ್ರಯತ್ನ ಮಾಡುತ್ತಿದ್ದೇವೆ. ಇದಕ್ಕೆ ಬೇಕಾದ ಡಿಪಾರ್ಟ್‌ಮೆಂಟ್ ಪ್ರತ್ಯೇಕವಾಗಿ ಸ್ಥಾಪನೆಯಾಗಿದೆ. ಸೆಂಟ್ರಲ್ ಫಾರ್ಮಸಿಯಲ್ಲಿ ಔಷಧ ತಯಾರು ಮಾಡತಕ್ಕ ಕಾರ್ಯ ಕಳೆದ ಎರಡು ವರ್ಷಗಳಿಂದ ಪ್ರಗತಿಯಿಂದ ನಡೆದಿದೆ. ಇದನ್ನು ಎಲ್ಲರೂ ಮೆಚ್ಚುವಂತಾಗಿದೆ. ತನಗೆ ಸಾಧ್ಯವಿರುವ ಎಲ್ಲ ಪ್ರಯತ್ನ ಸರ್ಕಾರ ಮಾಡಿದೆ ಎಂಬುದನ್ನು ಎಲ್ಲಗೂ ತಿಳಿದುಕೊಳ್ಳಬೇಕು. ಶುದ್ಧ ಆಯುರ್ವೇದದಲ್ಲಿ ಇಂಜೆಕ್ಷನ್ ಕೊಡುವುದನ್ನು ಸೇರಿಸಬೇಕು ಎಂದು ಹೇಳುವ ಮಾತಿಗೆ ಅರ್ಥವಿಲ್ಲ. ಅದು ನಮ್ಮ ಪಾಲಿಸಿ ಆಗಿಲ್ಲ. ಕೆಲವು ಸದಸ್ಯರು ಸರಿಯಾಗಿ ವಿಚಾರ ತಿಳಿದುಕೊಳ್ಳದೆ ಹಾಗೆ ಸೂಚನೆ ಮಾಡಿದ್ದಾರೆ. ಆಯುರ್ವೇದವು ಆಯುರ್ವೇದವಾಗಿಯೇ ಬೆಳೆಯಬೇಕು. ಸೆಂಟ್ರಲ್ ಫಾರ್ಮಸಿಯಲ್ಲಿ ರಿಸರ್ಚ್ ಡಿಪಾರ್ಟ್‌ಮೆಂಟ್ ಮಾಡುತ್ತಿದ್ದೇವೆ. ಹೆಚ್ಚೆಚ್ಚು ಮುಂದುವರೆಯುವಂತೆ ಏರ್ಪಾಡು ಮಾಡಿದ್ದೇವೆ. ಈ ತಿದ್ದುಪಡಿ ಮಸೂದೆಗೆ ಎಲ್ಲರೂ ಒಪ್ಪಿಗೆ ಕೊಡಬೇಕು. ಒಮ್ಮತದಿಂದ ಒಪ್ಪಿ ಈ ತಿದ್ದುಪಡಿ ಮಸೂದೆಯನ್ನು ಅಂಗೀಕರಿಸೋಣ. ಶುದ್ಧ ಆಯುರ್ವೇದ ಬೆಳೆಸತಕ್ಕಂಥಾದ್ದು ನಮ್ಮೆಲ್ಲರ ಪವಿತ್ರ ಕರ್ತವ್ಯವಾಗಿದೆ ಎಂಮ ನನ್ನ ಮಟ್ಟಿಗೆ ಹೇಳುತ್ತೇನೆ. ಪುನಃ ಇಂಟಿಗ್ರೇಟೆಡ್ ಕೋರ್ಸ್ ಮಾಡಬೇಕೆಂದು ಕೆಲವರ ಸೂಚನೆ ಇದೆ. ಆದರೆ ಇಂಟಿಗ್ರೇಟೆಡ್ ಕೋರ್ಸ್ ಮಾಡುವುದು ಸರಿಯಲ್ಲ. ಅದು ಅಶುದ್ಧವಾಗಿತ್ತು. ಶುದ್ಧ ಆಯುರ್ವೇದ ಬೆಳೆಸುವುದಕ್ಕೆ ಪ್ರಯತ್ನ ಮಾಡೋಣ. ಡಿಗ್ರಿ ಕೋರ್ಸ್ ಪೋಸ್ಟ್ ಗ್ರಾಜ್ಯುಯೇಟ್ ಕೋರ್ಸ್ ಹಾಗೂ ರೀಸರ್ಚ್ ಒಟ್ಟಿಗೆ ಬೆಳೆಸೋಣ ಎಂಬ ಮಾತನ್ನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ.

"ಸ್ವಾತಂತ್ರ್ಯವೆಂದರೆ ಶಿಸ್ತು. ವಿಧೇಯತೆ, ಶಾಂತಿ
ಅದಿಲ್ಲದ ಸ್ವಾತಂತ್ರ್ಯಕ್ಕೆ ಏನು ಅರ್ಥ"

— ಸರದಾರ್ ವಲ್ಲಭಭಾಯಿ ಪಟೇಲ್

# ಮೈಸೂರಿನ ಸಾಂಕ್ರಾಮಿಕ ರೋಗಗಳ ಆಸ್ಪತ್ರೆಯ ಸ್ಥಳಾಂತರ ವಿವರ

ವಿ.ಪ. (30–03–1962)

## ಮೈಸೂರು ನಗರದ ಈಗಿನ ಸಾಂಕ್ರಾಮಿಕ ರೋಗಗಳ ಆಸ್ಪತ್ರೆಯನ್ನು ಸ್ಥಳಾಂತರಿಸುವುದು

**ಶ್ರೀ ಸೈಯದ್ ಅಬ್ದುಲ್ ರೆಹಮಾನ್ (ನಾಮನಿರ್ದೇಶಿತ)**: ಸರ್ಕಾರ ದಯವಿಟ್ಟು ಈ ಬಗ್ಗೆ ತಿಳಿಸುವುದೇ:–

(ಎ) ಮೈಸೂರು ನಗರದ ಈಗಿನ ಸಾಂಕ್ರಾಮಿಕ ರೋಗಗಳ ಆಸ್ಪತ್ರೆಯನ್ನು ಬೇರೊಂದು ಕಟ್ಟಡಕ್ಕೆ ಸ್ಥಳಾಂತರಿಸುವ ಬಗೆಗಿನ ಪ್ರಸ್ತಾವವೇನಾದರೂ ಇದೆಯೇ;

(ಬಿ) ಹಾಗಿದ್ದಲ್ಲಿ, ಎಷ್ಟು ದಿನಗಳಿಂದ ಈ ಪ್ರಸ್ತಾವವು ಬಾಕಿ ಉಳಿದಿದೆ;

(ಸಿ) ಈ ಉದ್ದೇಶಕ್ಕಾಗಿ ಹಳೆಯ ಬನ್ನಿಮಂಟಪದ ಹತ್ತಿರ ಯಾವುದೇ ಕಟ್ಟಡವನ್ನು ನಿರ್ಮಿಸಲಾಗಿದೆಯೆ;

(ಡಿ) ಈ ಕಟ್ಟಡ ನಿರ್ಮಾಣಕ್ಕೆ ತಗುಲಿದ ಖರ್ಚು;

(ಇ) ಈ ಕಟ್ಟಡವು ಅಸ್ತಿತ್ವದಲ್ಲಿದೆಯೆ;

**ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು)** :

(ಎ) ಹೌದು

(ಬಿ) ಬಾಕಿ ಉಳಿದಿಲ್ಲ

(ಸಿ) ಹೌದು

(ಡಿ) ರೂ. 37,901

(ಇ) ಹೌದು

**ಶ್ರೀ ಸೈಯದ್ ಅಬ್ದುಲ್ ರೆಹಮಾನ್**: ಸರ್ಕಾರವು ಮೈಸೂರಿನಲ್ಲಿನ ಈ ಆಸ್ಪತ್ರೆಯನ್ನು ಸ್ಥಳಾಂತರಿಸಲು ಯಾವಾಗ ತೀರ್ಮಾನ ತೆಗೆದುಕೊಂಡಿತು ಸ್ವಾಮಿ?

**ಶ್ರೀ ಕೆ. ನಾಗಪ್ಪ ಆಳ್ವ**: ಅದೊಂದು ದೊಡ್ಡ ಕತೆ ಸ್ವಾಮಿ. ಜೂನ್ 1943ರಲ್ಲಿ ಒಂದು ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ಹೊಸ ಕಟ್ಟಡವೊಂದನ್ನು ನಿರ್ಮಿಸುವ ಪ್ರಸ್ತಾವಕ್ಕೆ ಮಂಜೂರಾತಿ ದೊರೆತಿದ್ದು ಕಾಮಗಾರಿಯನ್ನು ಪ್ರಾರಂಭಿಸಬೇಕಾಗಿದೆ. ವಿವಿಧ ಹಂತಗಳಲ್ಲಿ ಇದು ಬದಲಾಗಿದೆ; ಮತ್ತು ಈಗ ಇದರ ಕಡೆಯ ಹಂತವನ್ನು ನಿಮಗೆ ಹೇಳುವುದಾದರೆ ಪ್ರಸ್ತಾವಿಸಲಾದ ನಿವೇಶನವು ಪಿ.ಕೆ. ಸ್ಯಾನಿಟೋರಿಯಂನ ಸಮೀಪದಲ್ಲಿದೆ.

**ಶ್ರೀ ಸೈಯದ್ ಅಬ್ದುಲ್ ರೆಹಮಾನ್**: 1943ರಲ್ಲಿಯೇ ಮಂಜೂರಾತಿಯನ್ನು ಪಡೆದಿರುವಾಗ, ಈ ಆಸ್ಪತ್ರೆಯನ್ನು ಸ್ಥಳಾಂತರಿಸಲು ಸರ್ಕಾರದ ಮುಂದಿರುವ ಸಮಸ್ಯೆಯಾದರೂ ಏನು ಸ್ವಾಮಿ?

**ಶ್ರೀ ಕೆ. ನಾಗಪ್ಪ ಆಳ್ವ**: ಅವರು ವಿವಿಧ ಹಂತಗಳಲ್ಲಿ ಜನರಿಂದ ಮತ್ತು ಪೌರಸಭೆಯಿಂದ ಸಹ ಬೇರೆಬೇರೆ ರೀತಿಯ ಮನವಿಗಳನ್ನು ಸ್ವೀಕರಿಸಿದ್ದಾರೆ; ಮತ್ತು ಒಂದು ಹಂತದಲ್ಲಿ ಆಸ್ಪತ್ರೆಯ ಹಿರಿಯ ಶಸ್ತ್ರಚಿಕಿತ್ಸಕರು ಸಹ ಆಸ್ಪತ್ರೆಯನ್ನು ನಿರ್ದಿಷ್ಟ ಜಾಗಕ್ಕೆ ಸ್ಥಳಾಂತರಿಸುವುದರ ಪರವಾಗಿ ಇಲ್ಲ. ಅದಾದ ಮೇಲೆ 1956ರಲ್ಲಿ ಮೈಸೂರು ಪುರಸಭಾ ಪರಿಷತ್ತಿನಿಂದ ಆಸ್ಪತ್ರೆಯನ್ನು ಸ್ಥಳಾಂತರಿಸಲು ಕೋರಲಾಗಿದೆ. ಪರಿಶೀಲನೆಯ ನಂತರ, ಆಸ್ಪತ್ರೆಯನ್ನು ಇನ್ನೊಂದು ಕಡೆಗೆ ಸ್ಥಳಾಂತರಿಸಲು ಕ್ರಮಗಳನ್ನು ಕೈಗೊಳ್ಳಲು ಸೂಚನೆಗಳನ್ನು ನೀಡಲಾಗಿದೆ. ಈಗ ಅನುಮೋದಿತವಾಗಿರುವ ಸ್ಥಳವು ಪಿ.ಕೆ. ಸ್ಯಾನಿಟೋರಿಯಂನ ಪಕ್ಕದಲ್ಲಿದೆ.

**ಶ್ರೀ ಸೈಯದ್ ಅಬ್ದುಲ್ ರೆಹಮಾನ್**: ಸ್ಥಳಾಂತರಿಸಲು ಉದ್ದೇಶಿಸಲಾಗಿರುವಂಥ ಕಟ್ಟಡಕ್ಕಾಗಿ 37,901 ರೂ.ಗಳ ಮೊತ್ತವನ್ನು ಖರ್ಚು ಮಾಡಲಾಗಿದೆ. ಆ ಕಟ್ಟಡವು ಈಗ ಅಸ್ತಿತ್ವದಲ್ಲಿದೆಯೇ ಎಂಬುದನ್ನು ನಾನು ತಿಳಿಯಬಹುದೆ?

**ಶ್ರೀ ಕೆ. ನಾಗಪ್ಪ ಆಳ್ವ**: ಕಟ್ಟಡವು ಅಸ್ತಿತ್ವದಲ್ಲಿದೆ.

**ಶ್ರೀ ಸೈಯದ್ ಅಬ್ದುಲ್ ರೆಹಮಾನ್**: ಮಾನ್ಯ ಸಚಿವರು ಕಟ್ಟಡವು ಅಸ್ತಿತ್ವದಲ್ಲಿದೆಯೆಂದು ನೀಡಲಾದ ಉತ್ತರದ ಸತ್ಯಾಸತ್ಯತೆಯನ್ನು ದಯಮಾಡಿ ರುಜುವಾತುಪಡಿಸುವರಾ?

**ಶ್ರೀ ಕೆ. ನಾಗಪ್ಪ ಆಳ್ವ**: ಹೌದು, ಕಟ್ಟಡವು ಅಸ್ತಿತ್ವದಲ್ಲಿದೆ. ಅಲ್ಲಿ ಸುಧಾರಣೆಗಳನ್ನು ಮಾಡಲಾಗುತ್ತಿದೆ ಮತ್ತು ಆಸ್ಪತ್ರೆಯ ಸ್ಥಳಾಂತರಕ್ಕೆ ಸಂಬಂಧಿಸಿದಂತೆ ವಿಷಯವನ್ನು ಅಂತಿಮಗೊಳಿಸಿಲ್ಲವೆಂಬುದೊಂದೇ ಸದ್ಯದ ವಿಷಯವಾಗಿದೆ.

**ಶ್ರೀ ಸೈಯದ್ ಅಬ್ದುಲ್ ರೆಹಮಾನ್:** ಬನ್ನಿಮಂಟಪದ ಹತ್ತಿರ ನಿರ್ಮಿಸಿರುವಂಥ ಕಟ್ಟಡವು ಈಗ ಅಸ್ತಿತ್ವದಲ್ಲಿದೆಯೇ ಎಂಬುದು ನನ್ನ ಪ್ರಶ್ನೆ.

**ಶ್ರೀ ಕೆ. ನಾಗಪ್ಪ ಆಳ್ವ:** ಕಟ್ಟಡವು ಅಸ್ತಿತ್ವದಲ್ಲಿದೆ.

**ಶ್ರೀ ಸೈಯದ್ ಅಬ್ದುಲ್ ರೆಹಮಾನ್:** ಅಲ್ಲಿ ಯಾವುದೇ ಕಟ್ಟಡ ಇಲ್ಲ, ಎಲ್ಲ ಸಾಮಗ್ರಿಗಳು ಕಳುವಾಗಿವೆ ಮತ್ತು ಈಗ ಅದು ಬರಿಯ ಮೈದಾನ ಮಾತ್ರವಾಗಿದ ಎಂಬುದು ವಾಸ್ತವ ಸಂಗತಿಯಲ್ಲವೆ?

(ಉತ್ತರವಿಲ್ಲ)

**ಶ್ರೀ ಸೈಯದ್ ಅಬ್ದುಲ್ ರೆಹಮಾನ್:** ಈಗ ತಾನೇ ಮಾನ್ಯ ಸಚಿವರು ತಿಳಿಸಿದ ಸ್ಥಳದಲ್ಲಿ ಕಟ್ಟಡ ನಿರ್ಮಾಣವು ಪ್ರಾರಂಭಗೊಂಡಿದೆಯೆ? ಎಂಬುದನ್ನು ನಾನು ತಿಳಿಯಬಹುದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಕಟ್ಟಡ ನಿರ್ಮಾಣಕ್ಕಾಗಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ. ಎಕ್ಸಿಕ್ಯುಟಿವ್ ಇಂಜಿನಿಯರ್ ಕೆಲಸವನ್ನು ಬೇಗನೆ ಪ್ರಾರಂಭಿಸಲಾಗುವುದೆಂದು ವರದಿ ಮಾಡಿದ್ದಾರೆ. ಕಾಮಗಾರಿಯನ್ನು ಇನ್ನೂ ಆರಂಭಿಸಿಲ್ಲ. ಅದನ್ನು ಬೇಗ ಪ್ರಾರಂಭಿಸಲಾಗುವುದು.

**ಶ್ರೀ ಸೈಯದ್ ಅಬ್ದುಲ್ ರೆಹಮಾನ್:** ಆಡಳಿತಾತ್ಮಕ ಮಂಜೂರಾತಿಯನ್ನು ಯಾವಾಗ ನೀಡಲಾಯಿತು, ಸ್ವಾಮಿ?

**ಶ್ರೀ ಕೆ. ನಾಗಪ್ಪ ಆಳ್ವ:** ಜನವರಿ 1962ರಲ್ಲಿ

**ಶ್ರೀ ಅಜೀಜ್ ಸೇಟ್:** ಕಟ್ಟಡವು ಅಸ್ತಿತ್ವದಲ್ಲಿದೆಯೆ ಎಂಬುದನ್ನು ಮಾನ್ಯ ಸಚಿವರು ಹೇಳುವರೆ?

**ಮಾನ್ಯ ಸಭಾಪತಿ:** ಆ ಪ್ರಶ್ನೆಗೆ ಉತ್ತರ ನೀಡಿದ್ದಾಗಿದೆ.

**ಶ್ರೀ ವಿ. ಆರ್. ನಾಯ್ಡು :** ಈ ಆಸ್ಪತ್ರೆಯನ್ನು ಇರುವ ಕಡೆಯಿಂದ ಶಿಫ್ಟ್ ಮಾಡುವ ಉದ್ದೇಶವೇನು?

**ಶ್ರೀ ಕೆ. ನಾಗಪ್ಪ ಆಳ್ವ :** ಸಾಂಕ್ರಾಮಿಕ ರೋಗಗಳ ಆಸ್ಪತ್ರೆಯನ್ನು ಯಾವಾಗಲು ಸ್ವಲ್ಪ ಜನಸಂದಣಿ ಕಡಿಮೆ ಇರುವ ಜಾಗದಲ್ಲಿ, ಸಾಧ್ಯವಾದಷ್ಟು ಮಟ್ಟಿಗೆ ಟೌನ್ ಮಧ್ಯೆ ಬಿಟ್ಟು, ಸ್ವಲ್ಪ ದೂರದಲ್ಲಿ ಮಾಡುವುದು ಕ್ರಮ. ಆ ರೀತಿಯಲ್ಲಿ ಈಗಾಗಲೆ ಕೇಳಿಕೆ, ಬೇಡಿಕೆಗಳು ಬಂದು ಸರ್ಕಾರ ಆಲೋಚನೆ ಮಾಡಿದೆ.

ಶ್ರೀ ವಿ. ಆರ್. ನಾಯ್ಡು : ಮಾಡಿರುವ ಉದ್ದೇಶವೇನೋ ಒಳ್ಳೆಯದೇ. ಆದರೆ ಈಗ ಶಿಫ್ಟ್ ಮಾಡಬೇಕೆಂದಿರುವ ಜಾಗ ಮೈಸೂರು ನಗರದ ಮಧ್ಯ ಭಾಗದಲ್ಲಿ ಆಗುತ್ತದೆ ಎನ್ನುವುದು ತಮ್ಮ ಗಮನಕ್ಕೆ ಬಂದಿದೆಯೆ?

ಶ್ರೀ ಕೆ. ನಾಗಪ್ಪ ಆಳ್ವ : ಇದ್ದ ಸ್ಥಿತಿಯಲ್ಲಿ ಆ ಸ್ಥಳವು ಆಗಬಹುದು. ಅದು ಸರಿಯಾಗಿದೆ ಎಂದು ಅಭಿಪ್ರಾಯಪಟ್ಟುದರಿಂದ ಆ ಸ್ಥಳವನ್ನು ಸೂಚಿಸಿ ಮಾಡಲಾಗಿದೆ.

ಶ್ರೀ ವಿ. ಆರ್. ನಾಯ್ಡು : ತಮ್ಮ ಉದ್ದೇಶ ಸರಿ ಹೋಗುವುದಿಲ್ಲ. ಆ ಕಾಯಿಲೆ ಇನ್ನಾರಿಗೂ ಬರಬಾರದು. ಆದ್ದರಿಂದ ಸಾಂಕ್ರಾಮಿಕ ರೋಗಗಳ ಆಸ್ಪತ್ರೆಯನ್ನು ದೂರ ಇಡಬೇಕೆಂಬುದು ಉದ್ದೇಶ. ನಗರ ದೊಡ್ಡದಾಗಿ ಬೆಳೆಯುತ್ತಾ ಇದೆ. ಆದ್ದರಿಂದ ಮೈಸೂರು ನಗರದ ಮಧ್ಯಭಾಗದಲ್ಲಿ ಪುನಃ ಮಾಡುವುದು ಒಳ್ಳೆಯದಲ್ಲ, ಅದನ್ನು ಇನ್ನೂ ಸ್ವಲ್ಪ ದೂರದಲ್ಲಿ ಮಾಡಿದರೆ ಒಳ್ಳೆಯದು ಎನ್ನುವುದು ನನ್ನ ಅಭಿಪ್ರಾಯ.

ಶ್ರೀ ಕೆ. ನಾಗಪ್ಪ ಆಳ್ವ : ಇದ್ದ ಪರಿಸ್ಥಿತಿಯಲ್ಲಿ ಈ ಸ್ಥಳವು ಸರಿಯಾಗಿದೆ; ಎಂಬ ಅಭಿಪ್ರಾಯಕ್ಕೆ ಸರ್ಕಾರವು ಬಂದಿದೆ.

ಶ್ರೀ ಸಿ. ಚೆಂಪಾ: ಈಗ ಮೈಸೂರು ನಗರದಲ್ಲಿ ವಾಸ್ತವವಾಗಿ ಆಸ್ಪತ್ರೆ ಎಲ್ಲಿದೆ, ಸ್ವಾಮಿ?

ಶ್ರೀ ಕೆ. ನಾಗಪ್ಪ ಆಳ್ವ: ಇದಕ್ಕೆ ಉತ್ತರಿಸುವುದಕ್ಕೆ ಮುಂಚೆ ನಾನು ಈ ಬಗ್ಗೆ ಸರಿಯಾಗಿ ತಿಳಿದುಕೊಳ್ಳಬೇಕಾಗಿದೆ.

ಶ್ರೀ ಸಿ. ಚೆಂಪಾ: ಆಸ್ಪತ್ರೆಯಲ್ಲಿನ ಹಾಸಿಗೆಗಳ ಸಂಖ್ಯೆ ಎಷ್ಟು?

ಶ್ರೀ ಕೆ. ನಾಗಪ್ಪ ಆಳ್ವ: ಮಾನ್ಯ ಸಚಿವರು ಹಾಗೆ ಅಪೇಕ್ಷಿಸಿದಲ್ಲಿ, ಈ ವಿವರಗಳನ್ನು ತರುವಾಯ ಒದಗಿಸಲಾಗುತ್ತದೆ.

ಶ್ರೀ ಸಿ. ಚೆಂಪಾ: ಮೈಸೂರು ನಗರದಲ್ಲಿ ಸಾಂಕ್ರಾಮಿಕ ರೋಗಗಳನ್ನು ಹೋಗಲಾಡಿಸಲು ಸರ್ಕಾರವು ಪ್ರತಿಬಂಧಕ ಕ್ರಮಗಳನ್ನು ತೆಗೆದುಕೊಂಡಿದೆಯೆ?

ಶ್ರೀ ಕೆ. ನಾಗಪ್ಪ ಆಳ್ವ: ನಾನು ಹೇಳಿದಂತೆ, ಈ ಪ್ರಶ್ನೆಯು ಅಂತಹ ವಿವರಗಳಿಗೆ ಸಂಬಂಧಪಡುವುದಿಲ್ಲ. ಅಪೇಕ್ಷಿಸಿದಲ್ಲಿ, ಮಾಹಿತಿಯನ್ನು ಅನಂತರ ಒದಗಿಸಬಹುದು.

**ಶ್ರೀ ಎಂ.ಪಿ. ಈಶ್ವರಪ್ಪ:** ಈ ಕಟ್ಟಡದ ಮೇಲೆ 37,901 ರೂ.ಗಳ ಮೊತ್ತವನ್ನು ಖರ್ಚು ಮಾಡಲಾಗಿದೆಯೆಂದು ಹೇಳಲಾಗಿದೆ. ಕಟ್ಟಡವು ಪೂರ್ಣಗೊಂಡಿದೆಯೆ?

**ಶ್ರೀ ಕೆ. ನಾಗಪ್ಪ ಆಳ್ವ:** ಕೇಂದ್ರ ಭಿಕ್ಷುಕ ಪರಿಹಾರ ಸಮಿತಿಗೆ 4 ವಾರ್ಡುಗಳನ್ನು ಬಿಟ್ಟುಕೊಡುವ ಪ್ರಸ್ತಾಪ ಮಾತ್ರ ಇದೆ.

**ಶ್ರೀ ಎಂ.ಪಿ. ಈಶ್ವರಪ್ಪ:** ಇಷ್ಟು ಮೊತ್ತ ಹೇಗೆ ಖರ್ಚಾಯಿತೆಂಬುದನ್ನು ನಾನು ತಿಳಿಯಲಿಚ್ಛಿಸುತ್ತೇನೆ. ನಿರ್ಮಾಣವು ಪೂರ್ಣಗೊಂಡಿದೆಯೆ? ಮತ್ತು ಇಲ್ಲದಿದ್ದಲ್ಲಿ, ಅದು ಯಾವ ಹಂತದಲ್ಲಿದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಈ ಮೊತ್ತವು ಭೂಸ್ವಾಧೀನದ ದರವಾದ 10,000 ರೂ. ಮತ್ತು ಇನ್ನೂ ಹೆಚ್ಚಿನ ಮೊತ್ತವನ್ನು ಒಳಗೊಂಡಿದೆ ಮತ್ತು ಖರ್ಚುಗಳನ್ನು ಭರಿಸಲಾಗಿದೆ ಹಾಗೂ ಬನ್ನಿಮಂಟಪದ ರಸ್ತೆ ಪಕ್ಕದಲ್ಲಿ ಕಾಮಗಾರಿ ನಡೆಯುತ್ತಿದೆ.

**ಶ್ರೀ ಎಂ.ಪಿ. ಈಶ್ವರಪ್ಪ:** ಮಾನ್ಯ ಸದಸ್ಯರು ಶ್ರೀ ಅಬ್ದುಲ್ ರೆಹಮಾನ್‌ರವರು ಇಲ್ಲಿಯವರೆಗೆ ಅಲ್ಲಿ ಯಾವುದೇ ಕಟ್ಟಡವಿಲ್ಲವೆಂದು ಸದನದ ಗಮನಕ್ಕೆ ತಂದಿದ್ದಾರೆ ಮತ್ತು 1943ರ ವರ್ಷದಲ್ಲಿ ಪ್ರಸ್ತಾವನೆಯನ್ನು ಮಾಡಲಾಗಿದೆಯೆಂದು ಉತ್ತರಿಸಲಾಗಿದೆ. 1943ರಿಂದ ಮೈಸೂರು ನಗರವು ಬಹಳಷ್ಟು ಬದಲಾವಣೆಯಾಗಿದೆಯೆಂಬ ಸಂಗತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಸರ್ಕಾರವು ಏಕೆ ಹೊಸ ಪರಿಶೀಲನೆಯನ್ನು ಮಾಡಬಾರದು?

**ಶ್ರೀ ಕೆ. ನಾಗಪ್ಪ ಆಳ್ವ:** ಇದೊಂದು ಸಲಹೆ

## ಯೂನಾನಿ ಕಾಲೇಜು ಪ್ರಾರಂಭಿಸುವ ಸರ್ಕಾರದ ಯೋಜನೆಗಳೇನು?

**ವಿ.ಪ. 30-03-1962**

## ಮೈಸೂರು ನಗರದಲ್ಲಿ ಯುನಾನಿ ಕಾಲೇಜಿನ ಪುನರಾರಂಭ

**ಶ್ರೀ ಸೈಯದ್ ಅಬ್ದುಲ್ ರೆಹಮಾನ್ (ನಾಮ ನಿರ್ದೇಶಿತ):** ಸರ್ಕಾರ ಈ ಬಗ್ಗೆ ದಯನಿಟ್ಟು ತಿಳಿಸುವುದೆ:–

(ಎ) ಮೈಸೂರು ನಗರದಲ್ಲಿ ಯುನಾನಿ ಕಾಲೇಜಿನ ಪುನರಾರಂಭಕ್ಕೆ ಮೈಸೂರು ವಿಧಾನಮಂಡಲದ ಕೆಲವು ಸದಸ್ಯರು ಕಳೆದ ವರ್ಷ ಸರ್ಕಾರಕ್ಕೆ ಯಾವುದೇ ಮನವಿಯನ್ನು ಸಲ್ಲಿಸಿದ್ದಾರೆಯೆ?

(ಬಿ) ಇಲ್ಲಿಯವರೆಗೆ ಈ ವಿಷಯದಲ್ಲಿ ಸರ್ಕಾರವು ಯಾವುದೇ ಕ್ರಮ ಕೈಗೊಂಡಿದೆಯೆ?

**ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು),–**

(ಎ) ಹೌದು

(ಬಿ) ಅಂತಹ ಸನ್ನಿವೇಶವುಂಟಾದಾಗ ಸರ್ಕಾರಿ ಭಾರತೀಯ ವೈದ್ಯ ಕಾಲೇಜು, ಮೈಸೂರು – ಇಲ್ಲಿನ ಯುನಾನಿ ವಿಭಾಗದ ಪುನರಾರಂಭದ ಪ್ರಶ್ನೆಯನ್ನು ಅರ್ಹತೆಯ ಮೇಲೆ ಪರಿಗಣಿಸಲಾಗುವುದು. ಅಂತಹ ಸನ್ನಿವೇಶ ಉಂಟಾಗಿಲ್ಲ.

**ಶ್ರೀ ಸೈಯದ್ ಅಬ್ದುಲ್ ರೆಹಮಾನ್:** (ಬಿ)ಗೆ ನೀಡಿದ ಉತ್ತರದಲ್ಲಿ ತಿಳಿಸಲಾದಂತೆ ವಾಗ್ದಾನ ನೀಡುವುದು ಕ್ರಮಗಳನ್ನು ಕೈಗೊಳ್ಳುವುದಕ್ಕೆ ಸಮಯವೆ ಎಂಬ ಬಗ್ಗೆ ನಾನು ತಿಳಿದುಕೊಳ್ಳಬಹುದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಸದ್ಯದ ಪರಿಸ್ಥಿತಿಗಳನ್ನು ಪರಿಶೀಲಿಸಿದ ನಂತರವೇ ಕ್ರಮ ಕೈಗೊಳ್ಳಬಹುದಾಗಿದೆ.

**ಶ್ರೀ ಸೈಯದ್ ಅಬ್ದುಲ್ ರೆಹಮಾನ್:** ಸರ್ಕಾರವು ಮನವಿಗಳನ್ನು ಸ್ವೀಕರಿಸಿದ ನಂತರ ಇಲ್ಲಿಯವರೆಗೆ ಯಾವುದೇ ಕ್ರಮ ಕೈಗೊಂಡಿಲ್ಲವೆಂದು ನಾನು ತಿಳಿದುಕೊಳ್ಳಬಹುದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಮಾನ್ಯ ಸದಸ್ಯರಿಗೆ ಸ್ಥಿತಿಗತಿಗಳ ಅರಿವಿದೆ. ವಿದ್ಯಾರ್ಥಿಗಳು ಅಗತ್ಯ ಸಂಖ್ಯೆಗಳಲ್ಲಿ ಬರುತ್ತಿಲ್ಲ. ವಾಸ್ತವವೆಂದರೆ, ಪ್ರವೇಶಗಳು ಕ್ರಮೇಣ ಕಡಿಮೆಯಾಗುತ್ತಿವೆ ಮತ್ತು ಸರ್ಕಾರಕ್ಕೆ ಕಾಲೇಜನ್ನು ಮುಚ್ಚದೆ ಬೇರೆ ಮಾರ್ಗವೇ ಇಲ್ಲದಿದ್ದು, ಅದೇ ಸಮಯದಲ್ಲಿ ಈ ಶಾಖೆಯಲ್ಲಿನ ವಿದ್ಯಾರ್ಥಿಗಳಿಗೆ ಬೇರೆ ರೀತಿಗಳಲ್ಲಿ ಅಧ್ಯಯನ ಮಾಡಲು ಪ್ರೋತ್ಸಾಹವನ್ನು ನೀಡಿದ್ದಾರೆ.

**ಶ್ರೀ ಸೈಯದ್ ಅಬ್ದುಲ್ ರೆಹಮಾನ್:** ಸರ್ಕಾರದ ಅಭಿಪ್ರಾಯದಲ್ಲಿ ವಿಷಯವನ್ನು ಪರಿಶೀಲಿಸಬೇಕಾದಾಗ, ಇಂಥ ಸನ್ನಿವೇಶ ಉಂಟಾಗುವುದಿಲ್ಲವೆ ಎಂಬುದನ್ನು ನಾನು ತಿಳಿಯಬಹುದೆ?

**ಶ್ರೀ ಕೆ. ನಾಗಪ್ಪ ಆಳ್ವ:** ವಹಿಸಲಾದ ಖರ್ಚುಗಳನ್ನು ಪರಿಶೀಲಿಸಿ, ಸರ್ಕಾರವು ಕಾಲೇಜನ್ನು ಮುಂದುವರೆಸುವುದು ಸಮಂಜಸವಾಗುವುದಿಲ್ಲವೆಂದು ಭಾವಿಸಲಾಗಿದೆಯೆಂದು ಹಿಂದಿನ ಸಂದರ್ಭಗಳಲ್ಲಿ ವಿವರಿಸಲಾಗಿದೆ. ಇದು 1959ರಲ್ಲಿ ಸರ್ಕಾರದ ನಿಲುವಾಗಿದೆ.

**ಶ್ರೀ ಸೈಯದ್ ಅಬ್ದುಲ್ ರೆಹಮಾನ್:** 1956ರ ವರ್ಷದಲ್ಲಿ ವಿದ್ಯಾರ್ಥಿಗಳು ಸೇರಲು ಮುಂದೆ ಬರದಿರುವ ಸಾಧ್ಯತೆಯಿತ್ತು. ಈಗ ರಾಜ್ಯವು ವಿಸ್ತಾರಗೊಂಡಿದೆ ಮತ್ತು ನಾವು ಹೊಸ ರಾಜ್ಯವನ್ನು ಹೊಂದಿದ್ದೇವೆ. ಈಗಿನ ಪರಿಸ್ಥಿತಿಯನ್ನು ಮತ್ತು ಕೋರ್ಸ್‌ನ್ನು ಪುನರಾರಂಭಿಸಿದರೆ ಪ್ರವೇಶ ಕೋರುವ ವಿದ್ಯಾರ್ಥಿಗಳ ಸಂಭವನೀಯ ಸಂಖ್ಯೆಯನ್ನು ಖಚಿತಪಡಿಸಿಕೊಳ್ಳಲು ಸರ್ಕಾರವು ಏನಾದರೂ ಶ್ರಮ ತೆಗೆದುಕೊಂಡಿದೆಯೆ?

**ಶ್ರೀ ಕೆ. ನಾಗಪ್ಪ ಆಳ್ವ:** ಮನವಿಗಳನ್ನು ಸ್ವೀಕರಿಸಲಾಗಿದೆ. ಆದರೆ, ಅದೇ ಸಮಯದಲ್ಲಿ ಸರ್ಕಾರವು ಕಾರ್ಯ ಸಾಧ್ಯತೆಯನ್ನು ಪರಿಗಣಿಸಬೇಕಿದೆ. ಈ ವ್ಯವಸ್ಥೆಯನ್ನು ಪ್ರೋತ್ಸಾಹಿಸಲು ಸರ್ಕಾರವು ಕ್ರಮಗಳನ್ನು ಕೈಗೊಂಡಿದೆಯೆಂದು ಮಾನ್ಯ ಸಚಿವರ ಮಾಹಿತಿಗಾಗಿ ನಾನು ಹೇಳಬಹುದಾಗಿದೆ. 1959–60 ಮತ್ತು 1960–61ರಲ್ಲಿ 5 ಮಂದಿ ಸ್ಕಾಲರ್‌ಶಿಪ್ ಪಡೆದ ವಿದ್ಯಾರ್ಥಿಗಳನ್ನು ಯುನಾನಿ ಮುಸ್ಲಿಂ ಯೂನಿವರ್ಸಿಟಿ, ಆಲಿಘರ್‌ಗೆ ಕಳುಹಿಸುವುದರ ಜೊತೆಯಲ್ಲಿ ಪ್ರತಿ ವರ್ಷ, ಹೈದರಾಬಾದಿನ ನಿಜಾಮಿಯಾ ಟಿಬಿಯಾ ಕಾಲೇಜಿನಲ್ಲಿ ಓದುವ 5 ಮಂದಿ ವಿದ್ಯಾರ್ಥಿಗಳಿಗೆ ಸ್ಕಾಲರ್‌ಶಿಪ್‌ಗಳನ್ನು ನೀಡಲಾಗಿದೆ.

**ಶ್ರೀ ಸೈಯದ್ ಅಬ್ದುಲ್ ರೆಹಮಾನ್:** ಈ ವಿಭಾಗ ಪ್ರಾರಂಭಗೊಂಡಲ್ಲಿ, ಸರ್ಕಾರವು ವಹಿಸುವ ಖರ್ಚು ಎಷ್ಟಾಗಬಹುದು?

**ಶ್ರೀ ಕೆ. ನಾಗಪ್ಪ ಆಳ್ವ:** ಇದನ್ನು ವಿವರವಾಗಿ ವಿಚಾರ ಮಾಡಲು ಸಮಯ ನೀಡಿದರೆ ಮಾತ್ರ ಈ ಪ್ರಶ್ನೆಯನ್ನು ಉತ್ತರಿಸಬಹುದಾಗಿದೆ.

**ಶ್ರೀ ವಿ.ಆರ್. ನಾಯ್ಡು :** ಯುನಾನಿ ಪರೀಕ್ಷೆ ಪಾಸು ಮಾಡಿದ ವಿಧ್ಯಾರ್ಥಿಗಳು ಎಷ್ಟು ಜನ ಇಲ್ಲಿದ್ದಾರೆ?

**ಸಭಾಪತಿಯವರು :** ಈ ಪ್ರಶ್ನೆ ಉದ್ಭವವಾಗುವುದಿಲ್ಲ.

**ಶ್ರೀ ವಿ. ಆರ್. ನಾಯ್ಡು :** ಈ ಯುನಾನಿ ಶಾಲೆಗಳನ್ನು ಯಾವಾಗ ತೆರೆಯಬೇಕೆಂದಿದ್ದೀರಿ?

**ಶ್ರೀ ಕೆ. ನಾಗಪ್ಪ ಆಳ್ವ :** ಅದನ್ನು ಆಲೋಚನೆ ಮಾಡಲಾಗುತ್ತದೆ.

**ಶ್ರೀ ಅಜೀಜ್ ಸೇಠ್:** ಅವರಿಂದ ಸ್ವೀಕರಿಸಲಾದ ವರದಿಗಳನ್ನು ಆಧರಿಸಿ ಈ ಯುನಾನಿ ವಿಭಾಗವನ್ನು ಪ್ರಾರಂಭಿಸುವುದು ಸಮಂಜಸವಲ್ಲವೆಂಬ ನಿರ್ಣಯಕ್ಕೆ ಸರ್ಕಾರ ಬಂದಿದೆಯೆಂದು ಸಚಿವರು ಹೇಳಿದರು. ವರದಿಯನ್ನು ಯಾರಿಂದ ಮತ್ತು ಯಾವಾಗ ಸ್ವೀಕರಿಸಲಾಗಿದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಭಾರತೀಯ ವೈದ್ಯ ಶಾಸ್ತ್ರದ ರಾಜ್ಯ ಪರಿಷತ್ತು ಇದೆ. ಅವರು ಎಚ್ಚರಿಕೆಯಿಂದ ಪರಿಶೀಲನೆ ಮಾಡಿದ ನಂತರ, ಕಾಲೇಜನ್ನು ಮುಚ್ಚುವುದು ಸಮಂಜಸವೆಂದು ಶಿಫಾರಸು ಮಾಡಿದ್ದಾರೆ.

**ಶ್ರೀ ಅಜೀಜ್ ಸೇಠ್:** ಭಾರತೀಯ ವೈದ್ಯಶಾಸ್ತ್ರ ಪದ್ಧತಿಯು ಅಲೋಪತಿಗಿಂತಲೂ ಪೂರ್ತಿಯಾಗಿ ಬೇರೆಯಾಗಿದ್ದು ರಾಜ್ಯ ವೈದ್ಯಕೀಯ ಪರಿಷತ್ತು ಅಸಮರ್ಥವಾಗಿದೆ ಮತ್ತು ವಾಸ್ತವವಾಗಿ ಅದಕ್ಕೆ ಭಾರತೀಯ ವೈದ್ಯಶಾಸ್ತ್ರದಲ್ಲಿ ಆಸಕ್ತಿಯಿಲ್ಲವೆಂದು ಮಾನ್ಯ ಸಚಿವರು ಅರಿತಿರುವರೆ?

**ಶ್ರೀ ಕೆ. ನಾಗಪ್ಪ ಆಳ್ವ:** ಭಾರತೀಯ ವೈದ್ಯಶಾಸ್ತ್ರದ ರಾಜ್ಯ ವೈದ್ಯಕೀಯ ಪರಿಷತ್ತಿನಲ್ಲಿ ಯುನಾನಿ ವ್ಯವಸ್ಥೆಯ ಪ್ರತಿನಿಧಿಗಳೂ ಸಹ ಇದ್ದಾರೆ.

**ಶ್ರೀ ಅಜೀಜ್ ಸೇಠ್:** ಪಾರ್ಲಿಮೆಂಟಿನ ಕೆಲವರು ಸದಸ್ಯರನ್ನೊಳಗೊಂಡ ಸಮಿತಿಯ ವರದಿಗಳನ್ನು ತಾವು ಓದಿರುವಿರಾ? ಈ ಕಾಲೇಜು ಮೈಸೂರಿನಲ್ಲಿ ಅಸಾಧಾರಣವಾದ ಒಂದು ಕಾಲೇಜಾಗಿದ್ದು ಚೆನ್ನಾಗಿ ಕಾರ್ಯ ನಿರ್ವಹಿಸುತ್ತಿದೆ ಎನ್ನುವ ರೀತಿಯಲ್ಲಿ ಅವರು ವರದಿ ನೀಡಿಲ್ಲವೆ? ಕೆಲವು ಅನುದಾನಗಳು ಸಹ ಶಿಫಾರಸುಗೊಂಡಿಲ್ಲವೆ? ಆಮೇಲೆ ಅವು ಕೈ ಬಿಟ್ಟುಹೋಗಿದೆ ಹಾಗೂ ಕಾಲೇಜು ಅಥವಾ ಆಸ್ಪತ್ರೆ ಸುಧಾರಣೆಯಾಗುವುದರ ಕಡೆ ಗಮನ ನೀಡಲು ಸರ್ಕಾರದಿಂದ ಯಾವುದೇ ತೊಂದರೆಯನ್ನು ತೆಗೆದುಕೊಳ್ಳಲಿಲ್ಲ.

**ಶ್ರೀ ಕೆ. ನಾಗಪ್ಪ ಆಳ್ವ:** ಇಂತಹ ಪ್ರಶ್ನೆಗೆ ಉತ್ತರಿಸಲು ಸೂಚನೆಯ ಅಗತ್ಯವಿದೆ.

**ಶ್ರೀ ಎಸ್.ಚಂಪಾ:** (ಬಿ)ಗೆ ಉತ್ತರಿಸುವಲ್ಲಿ ಮೈಸೂರಿನಲ್ಲಿರುವ ಭಾರತೀಯ ವೈದ್ಯಶಾಸ್ತ್ರದ ಸರ್ಕಾರಿ ಕಾಲೇಜಿನ ಯುನಾನಿ ವಿಭಾಗದ ಪುನರಾರಂಭದ ಪ್ರಶ್ನೆಯನ್ನು ಅರ್ಹತೆಗಳ ಮೇಲೆ ಪರಿಗಣಿಸಲಾಗುತ್ತದೆಯೆಂದು ತಿಳಿಸಲಾಗಿದೆ. ಪರಿಗಣಿಸಬೇಕಾದ ಅರ್ಹತೆಗಳು ಯಾವುವು?

**ಶ್ರೀ ಕೆ. ನಾಗಪ್ಪ ಆಳ್ವ:** ಪ್ರಮುಖವಾಗಿ ಅದು ಪ್ರಾಧಿಕಾರಿಗಳು ಸ್ವೀಕರಿಸುವ ಅರ್ಜಿಗಳಿಗೆ ಸಂಬಂಧಿಸಿದೆ.

**ಶ್ರೀ ಎಸ್. ಚಂಪಾ:** ಯುನಾನಿ ವಿಭಾಗವನ್ನು ಹೊರತುಪಡಿಸಿ, ಭಾರತೀಯ ವೈದ್ಯಶಾಸ್ತ್ರದ ಕಾಲೇಜಿನಲ್ಲಿರುವ ಇತರ ವಿಭಾಗಗಳಾವುವು?

**ಮಾನ್ಯ ಸಭಾಪತಿ:** ಅದು ಸಂಪೂರ್ಣ ಬೇರೆಯವೇ ಪ್ರಶ್ನೆಯಾಗಿದೆ.

ಶ್ರೀ ಎಂ.ಪಿ. ಈಶ್ವರಪ್ಪ: ರಾಜ್ಯ ಸರ್ಕಾರದಿಂದ ಯುನಾನಿ ವೈದ್ಯಶಾಸ್ತ್ರದಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನಗಳನ್ನು ನೀಡಲಾಗುವುದೆಂದು ಹೇಳಲಾಗಿದೆ. ಈ ಉದ್ದೇಶಕ್ಕಾಗಿ ಕಳೆದ ಎರಡು ವರ್ಷಗಳಲ್ಲಿ ವಿದ್ಯಾರ್ಥಿವೇತನದ ಮೂಲಕ ನೀಡಲಾದ ಮೊತ್ತವೇನೆಂದು ನಾನು ತಿಳಿಯಬಹುದೆ?

ಶ್ರೀ ಕೆ. ನಾಗಪ್ಪ ಆಳ್ವ: ಇದು ಒಬ್ಬ ವಿದ್ಯಾರ್ಥಿಗೆ ಒಂದು ತಿಂಗಳಿಗೆ ರೂ. 75

ಶ್ರೀ ಎಂ.ಪಿ. ಈಶ್ವರಪ್ಪ: ಕಳೆದ ಎರಡು ವರ್ಷಗಳಲ್ಲಿ ಖರ್ಚು ಮಾಡಲಾದ ಒಟ್ಟು ಮೊತ್ತವೆಷ್ಟೆಂದು ನಾನು ತಿಳಿಯಬಯಸುತ್ತೇನೆ.

ಶ್ರೀ ಕೆ. ನಾಗಪ್ಪ ಆಳ್ವ: ಎರಡು ವರ್ಷಗಳಲ್ಲಿ ಒಟ್ಟು 12 ವಿದ್ಯಾರ್ಥಿಗಳನ್ನು ಕಳುಹಿಸಲಾಗಿದೆ; ಅವರಲ್ಲಿ ಪ್ರತಿ ವಿದ್ಯಾರ್ಥಿಗೆ ಪ್ರತಿ ತಿಂಗಳಿಗೆ 75 ರೂ.ಗಳನ್ನು ಸಂದಾಯ ಮಾಡಲಾಗಿದೆ.

ಶ್ರೀ ಎಂ.ಪಿ. ಈಶ್ವರಪ್ಪ: ವಿಭಾಗವನ್ನು ಮುಚ್ಚುವ ಸಮಯದಲ್ಲಿ ಕಾಲೇಜಿನಲ್ಲಿ ಅಧ್ಯಯನ ಮಾಡುವ ಈ ಜಾತಿಯ ವಿದ್ಯಾರ್ಥಿಗಳ ಸಂಖ್ಯೆಯೇನು?

ಶ್ರೀ ಕೆ. ನಾಗಪ್ಪ ಆಳ್ವ: ನನ್ನಲ್ಲಿ 1956ರವರೆಗೆ ಮಾತ್ರ ಮಾಹಿತಿಯಿದೆ. ಆ ವಿದ್ಯಾರ್ಥಿಗಳ ಸಂಖ್ಯೆ 4. ಪ್ರತಿ ವರ್ಷವೂ ಈ ಸಂಖ್ಯೆ ಕಡಿಮೆಯಾಗುತ್ತಿದೆ.

## ಕುಷ್ಠರೋಗ ಹರಡದಂತೆ ನೋಡಿಕೊಳ್ಳಿ

ವಿ.ಸ. (19-07-1967)

## ಕೋಲಾರ ಜಿಲ್ಲೆಯಲ್ಲಿ ಕುಷ್ಠರೋಗ ನಿವಾರಣಾ ಕೇಂದ್ರಗಳ ಸ್ಥಾಪನೆ

ಶ್ರೀ ಜಿ. ನಾರಾಯಣಪ್ಪ (ಮುಳಬಾಗಿಲು): ಸರ್ಕಾರ ದಯವಿಟ್ಟು ಇದನ್ನು ತಿಳಿಸುವುದೆ: -

(ಎ) ಇಲ್ಲಿಯುವರೆಗೆ ಕೋಲಾರ ಜಿಲ್ಲೆಯಲ್ಲಿ ಕುಷ್ಠರೋಗದ ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಗ್ಯ ಇಲಾಖೆಯು ಯಾವುದೇ ವಿಚಾರಣೆಯನ್ನು ನಡೆಸಿದೆಯೆ;

(ಬಿ) ಅವರು ಕೋಲಾರ ಜಿಲ್ಲೆಯಲ್ಲಿ ಕುಷ್ಠರೋಗ ನಿವಾರಣಾ ಕೇಂದ್ರಗಳನ್ನು ಸ್ಥಾಪಿಸಲು ಉದ್ದೇಶಿಸಿದ್ದಾರೆಯೇ;

(ಸಿ) ಆ ಜಿಲ್ಲೆಯಲ್ಲಿ ಕುಷ್ಠರೋಗದ ಪ್ರಕರಣಗಳ ಸಂಖ್ಯೆ ಬಹಳ ಹೆಚ್ಚಾಗಿರುವ ಹಿನ್ನೆಲೆಯಲ್ಲಿ ಕೋಲಾರ ಜಿಲ್ಲೆಯ ಎಲ್ಲಾ ಹನ್ನೊಂದು ತಾಲ್ಲೂಕುಗಳಲ್ಲಿ ಕಡೆಯ ಪಕ್ಷ ಅಂತಹ ಆರು ಕೇಂದ್ರಗಳನ್ನು ಪ್ರಾರಂಭಿಸಲು ಅವರು ಉದ್ದೇಶಿಸಿದ್ದಾರೆಯೆ;

**ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು),–**

(ಎ) ಹೌದು

(ಬಿ) ಇಲ್ಲ

(ಸಿ) ಸದ್ಯಕ್ಕೆ ಇಲ್ಲ

**ಶ್ರೀ ಜಿ. ನಾರಾಯಣಪ್ಪ :** ಸರ್ವೆ ನಡೆಸಿದ್ದಾರೆಂದು ಉತ್ತರದಲ್ಲಿ ಹೇಳಲಾಗಿದೆ. ಈ ಸರ್ವೆ ಕೆಲಸ ಯಾವ ಹಂತದಲ್ಲಿದೆ? ಎಷ್ಟು ಜನರಿಗೆ ಅದು ತಗುಲಿದೆ ಎನ್ನುವುದನ್ನು ಹೇಳುವುದಕ್ಕೆ ಸಾಧ್ಯವೇ?

**ಶ್ರೀ ಕೆ. ನಾಗಪ್ಪ ಆಳ್ವ :** ಕೋಲಾರ ಜಿಲ್ಲೆಯಲ್ಲಿ ಈ ಕುಷ್ಠ ರೋಗ ಹೆಚ್ಚಾಗಿರುವುದು ಗೌರಿಬಿದನೂರು ತಾಲ್ಲೂಕಿನಲ್ಲಿ ಎನ್ನುವುದು ಸರ್ಕಾರಕ್ಕೆ ತಿಳಿದಿದೆ. ಗೌರಿಬಿದನೂರು ತಾಲ್ಲೂಕಿನಲ್ಲಿ ಮನೆಮನೆಗೂ ಹೋಗಿ ಸರ್ವೆ ಮಾಡಿದ ಅಂಕಿ ಅಂಶಗಳ ವರದಿ ಇಲ್ಲಿದೆ. ಬೇರೆ ತಾಲ್ಲೂಕುಗಳಲ್ಲಿರುವ ಹೆಲ್ತ್ ಯೂನಿಟ್ಟುಗಳವರೂ ಇದರ ಅಂಕಿ ಅಂಶಗಳನ್ನು ಕೂಡಿಸಿರುತ್ತಾರೆ. ಈಗ ಸದ್ಯಕ್ಕೆ ಬಂದಿರುವ ಲೆಕ್ಕದ ಪ್ರಕಾರ 99,672 ಜನರನ್ನು ನೋಡಲಾಗಿ ಅವರಲ್ಲಿ 672 ಜನರಿಗೆ ಈ ರೋಗ ತಗುಲಿದೆ. ಅದೂ ಗೌರಿಬಿದನೂರು ತಾಲ್ಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದೆ.

**ಶ್ರೀ ಜಿ. ನಾರಾಯಣಪ್ಪ :** ಈ ಕೋಲಾರ ಜಿಲ್ಲೆಯ ಎಲ್ಲ ತಾಲ್ಲೂಕುಗಳನ್ನು ಬೇಗನೆ ಪರಿಶೀಲನೆ ಮಾಡಬೇಕಾದ ಮತ್ತು ಚಿತ್ತೂರು, ಮದರಾಸು ಈ ಕಡೆಯಿಂದ ಬರುವ ಜನರಲ್ಲಿ ಮೂರನೇ ಒಂದು ಭಾಗದಷ್ಟು ಜನ ಈ ಕುಷ್ಠ ರೋಗಕ್ಕೆ ತಗುಲಿದವರಿರುತ್ತಾರೆ. ಇವರಿಂದ ನಮ್ಮ ಭಾಗದ ಜನರಿಗೂ ಈ ರೋಗ ಅಂಟುತ್ತದೆ. ಎರಡನೆಯದಾಗಿ ಮಾಗಡಿ ರೋಡಿನಲ್ಲಿರುವ ಆಸ್ಪತ್ರೆಗೆ ಒಬ್ಬ ರೋಗಿಯನ್ನು ಸೇರಿಸುವುದಕ್ಕೆ ಹೋದಾಗ ಅವಕಾಶ ಸಿಕ್ಕದೆ ಅಂಥಹ ರೋಗಿ ಸತ್ತಿರುವುದೂ ಇದೆ. ಇಂಥಹುಗಳನ್ನೆಲ್ಲಾ ಬೇಗನೆ ಸರ್ಕಾರ ಪರೀಶೀಲನೆ ಮಾಡಲು ಕ್ರಮ ತೆಗೆದುಕೊಳ್ಳುತ್ತಾರೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ತಮ್ಮ ಸೂಚನೆಯ ಪ್ರಕಾರ ಆದಷ್ಟು ತಕ್ಕ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಲು ಪ್ರಯತ್ನ ಮಾಡುತ್ತಾರೆ.

**ಶ್ರೀ ಇ. ನಾರಾಯಣಗೌಡ** : ಗೌರಿಬಿದನೂರು ತಾಲ್ಲೂಕಿನಲ್ಲಿ ಸರ್ವೆ ಮಾಡಿದೆ ಎಂದು ಹೇಳಿದ್ದೀರಿ. ಈ ಜಿಲ್ಲೆಯ ಪ್ರತಿಯೊಂದು ತಾಲ್ಲೂಕುಗಳಲ್ಲೂ ಸರ್ವೆ ನಡೆಸಿದ್ದೀರ? ಹಾಗಾದರೆ ಎಷ್ಟು ಜನ ರೋಗಿಗಳಿದ್ದಾರೆ?

**ಶ್ರೀ ಕೆ. ನಾಗಪ್ಪ ಆಳ್ವ** : ಸಾಧ್ಯವಾದ ಮಟ್ಟಿಗೂ ಬೇರೆ ತಾಲ್ಲೂಕುಗಳ ಅಂಕಿ ಅಂಶಗಳು ಬಂದಿವೆ. ಒಟ್ಟು 1,200 ಜನರಿಗೆ ಈ ರೋಗ ಇದೆ ಎಂದಿದೆ. ಇದರಲ್ಲಿ 692 ಜನ ಗೌರಿಬಿದನೂರು ತಾಲ್ಲೂಕಿಗೆ ಸೇರಿದವರು.

**ಶ್ರೀ ಡಿ. ವೆಂಕಟರಾಮಯ್ಯ**: ಜಿಲ್ಲೆಯಲ್ಲಿ ಈ ರೋಗವನ್ನು ನಿರ್ಮೂಲನ ಮಾಡಲು ಸರ್ಕಾರದಿಂದ ತೆಗೆದುಕೊಳ್ಳಲಾದ ನಿವಾರಣಾ ಕ್ರಮಗಳಾವುವು?

**ಶ್ರೀ ಕೆ. ನಾಗಪ್ಪ ಆಳ್ವ**: ಗೌರಿಬಿದನೂರು ತಾಲ್ಲೂಕಿನಲ್ಲಿ ಈಗಾಗಲೇ ಒಂದು ಕುಷ್ಠರೋಗ ಸಹಾಯಕ ಕೇಂದ್ರವಿದೆ.

**ಶ್ರೀ ಇ. ನಾರಾಯಣ ಗೌಡ** : ಪ್ರತಿಯೊಂದು ತಾಲ್ಲೂಕಿನಲ್ಲೂ ಕೂಡ ಹೆಲ್ತ್ ಯೂನಿಟ್ಟುಗಳು ಎಂದು ಮಾಡಿ ಈ ರೋಗ ನಿವಾರಣೆ ಮಾಡಲು ಪ್ರಯತ್ನ ಮಾಡುತ್ತಿದ್ದೀರಿ. ಆದರೆ ಕೆಲವು ತಾಲ್ಲೂಕುಗಳಲ್ಲಿ ಹೆಲ್ತ್ ಯೂನಿಟ್ಟುಗಳೇ ಇಲ್ಲ. ಅಂಥಹ ತಾಲ್ಲೂಕುಗಳ ಗತಿಯೇನು?

**ಶ್ರೀ ಕೆ. ನಾಗಪ್ಪ ಆಳ್ವ** : ಈ ತರಹೆದ ರೋಗ ತಗುಲಿದೆ ಎಂದು ತಿಳಿದರೆ ಅಂಥಹ ಕಡೆಗೆ ಈ ರೋಗಕ್ಕೆ ಬೇಕಾದ ಔಷಧಿಗಳನ್ನು ಕಳುಹಿಸಬೇಕೆಂದು ಹೆಲ್ತ್ ಯೂನಿಟ್ಟಿಗೆ ತಿಳಿಸಲಾಗಿದೆ.

**ಶ್ರೀ ಹೆಚ್.ಆರ್. ಕೇಶವಮೂರ್ತಿ**: ಕುಷ್ಠರೋಗವು ಸಾಂಕ್ರಮಿಕ ರೋಗವೇ ಅಥವಾ ಅನುವಂಶೀಯವೇ ಅಥವಾ ಎರಡೂ ಆಗಿದೆಯೆ?

**ಶ್ರೀ ಕೆ. ನಾರಾಯಣಪ್ಪ ಆಳ್ವ**: ಇದು ಅನುವಂಶೀಯ ರೋಗವಾಗಿದ್ದು ಕೆಲವು ಪ್ರಕರಣಗಳಲ್ಲಿ ಸೋಂಕಿನಿಂದ ಹರಡುತ್ತದೆ. ಕೆಲವು ಪ್ರಕರಣಗಳಲ್ಲಿ ಇಲ್ಲ ಎಂದು ನಾನು ಸದನದ ಮಾಹಿತಿಗಾಗಿ ಹೇಳಬಹುದಾಗಿದೆ.

**ಶ್ರೀ ಪಿ. ವೆಂಕಟಗಿರಿಯಪ್ಪ** : ಈ ಡಿಸ್ಟ್ರಿಕ್ಟಿನಲ್ಲಿ ಇಷ್ಟು ಹೆಚ್ಚಿನ ಕುಷ್ಠ ರೋಗಿಗಳಿರುವುದರಿಂದ ಇಲ್ಲಿಯ ಜನಕ್ಕೆ ಅನುಕೂಲವಾಗುವಂತೆ ಇಲ್ಲಿ ಆಸ್ಪತ್ರೆಗಳನ್ನು ಸ್ಥಾಪನೆ ಮಾಡುವುದಕ್ಕೆ ಸರ್ಕಾರ ಪರಿಶೀಲನೆ ಮಾಡುತ್ತಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಹತ್ತೊಂಬತ್ತು ಜಿಲ್ಲೆಗಳ ಪೈಕಿ ನಾಲ್ಕೈದು ಜಿಲ್ಲೆಗಳಲ್ಲಿ ಇಂತಹ ಆಸ್ಪತ್ರೆಗಳನ್ನು ಮಾಡಬೇಕು ಎನ್ನುವ ಆಲೋಚನೆಯನ್ನು ಸರ್ಕಾರ ಮಾಡುತ್ತಿದೆ.

**ಶ್ರೀ ಎಸ್. ರಾಜಗೋಪಾಲ್**: ನೀವು ಆ ಘಟಕವನ್ನು ಯಾವ ದಿನಾಂಕದಂದು ಸ್ಥಾಪನೆ ಮಾಡಿದಿರಿ ಮತ್ತು ಅದರ ಪರಿಣಾಮವೇನು? ಅದಾದ ನಂತರ, ಆ ರೋಗ ಪ್ರಕರಣ ಹೆಚ್ಚಾಗಿದೆಯೆ? ಅಥವಾ ಕಡಿಮೆಯಾಗಿದೆಯೆ?

**ಶ್ರೀ ಕೆ. ನಾಗಪ್ಪ ಆಳ್ವ**: ಇದೊಂದು ಬಹಳ ಸಂದಿಗ್ಧ ಪ್ರಶ್ನೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ**: ಕೋಲಾರ ಜಿಲ್ಲೆಯಲ್ಲಿ ಈ ರೋಗ ಹರಡುವಿಕೆಯನ್ನು ನಿಯಂತ್ರಿಸಲು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು?

**ಶ್ರೀ ಕೆ. ನಾಗಪ್ಪ ಆಳ್ವ**: ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ಕಾರಣಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ತಿಳಿದುಕೊಂಡು ರೋಗಿಗಳಿಗೆ ಚಿಕಿತ್ಸೆ ನೀಡುವುದು ಮತ್ತು ಸಾರ್ವಜನಿಕರಿಗೆ ಮತ್ತು ಜನರಿಗೆ ಪ್ರತ್ಯೇಕೀಕರಣದ ಬಗ್ಗೆ ತಿಳುವಳಿಕೆ ಮೂಡಿಸುವುದು.

**ಶ್ರೀ ಜೆ.ಪಿ. ಸರ್ವೇಶ್**: ಬೀದರಿನಲ್ಲಿಯೂ ಸಹ ಒಂದು ಕುಷ್ಠರೋಗ ಆಸ್ಪತ್ರೆಯನ್ನು ಪ್ರಾರಂಭಿಸಲು ಸರ್ಕಾರ ಉದ್ದೇಶಿಸಿದೆಯೆ? ಎಂಬುದನ್ನು ನಾನು ತಿಳಿಯಬಹುದೆ?

(ಉತ್ತರವಿಲ್ಲ)

**ಶ್ರೀ ಜಿ. ಮರುಳಪ್ಪ** : ಈ ರೋಗವು ಬೇರೆ ಜಿಲ್ಲೆಗಳಲ್ಲಿ ಹರಡದಂತೆ ಸರ್ಕಾರದವರು ಏನೇನು ಕಾರ್ಯಕ್ರಮಗಳನ್ನು ಕೈಗೊಂಡಿದ್ದಾರೆ?

**ಶ್ರೀ ಕೆ. ನಾಗಪ್ಪ ಆಳ್ವ**: ನಾವು ಆ ಪ್ರಶ್ನೆಗೆ ಈಗಾಗಲೇ ಉತ್ತರಿಸಿದ್ದೇನೆ.

**ಶ್ರೀ [illegible] ಮುದ್ದಪ್ಪ** : ಈಗ ತಾನೆ ಮಂತ್ರಿಗಳು ನಮ್ಮ ರಾಜ್ಯದ ಕೆಲವು ಜಿಲ್ಲೆಗಳಲ್ಲಿ ಈ ರೋಗ ಹರಡಿದೆ ಎಂದು ಹೇಳಿದ್ದಾರೆ ಮತ್ತು ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಐದು ಕಡೆಗಳಲ್ಲಿ ಈ ಆಸ್ಪತ್ರೆಗಳನ್ನು ತೆರೆಯಲಾಗುತ್ತದೆಯೆಂದು ಹೇಳಿದರು. ಯಾವ ಯಾವ ಜಿಲ್ಲೆಗಳಲ್ಲಿ ತೆರೆಯಬೇಕೆಂದಿದ್ದಾರೆ?

**ಶ್ರೀ ಕೆ. ನಾಗಪ್ಪ ಆಳ್ವ** : ಈ ರೋಗವು ಹಾಲಿ ಹೈದರಾಬಾದಿನ ಮೂರು ಜಿಲ್ಲೆಗಳಲ್ಲೂ ಮತ್ತು ಬಿಜಾಪುರ, ನಾರ್ತ್ ಕೆನರಾ ಮತ್ತು ಧಾರವಾಡ ಜಿಲ್ಲೆಗಳಲ್ಲೂ ಮತ್ತು ಟಿ.ನರಸೀಪುರ ತಾಲ್ಲೂಕಿನಲ್ಲೂ ಹರಡಿದೆ. ಆದ್ದರಿಂದ ಸಧ್ಯಕ್ಕೆ ಗುಲ್ಬರ್ಗ, ಧಾರವಾಡ ಮತ್ತು ಟಿನರಸೀಪುರ ಈ ಮೂರು ಸ್ಥಳಗಳಲ್ಲಿ ಲೆಪ್ರಸಿ ಪ್ರಿವೆನ್ಷನ್ ಸೆಂಟರುಗಳನ್ನು ತೆರೆಯಬೇಕೆಂಬ ವಿಚಾರ ಸರ್ಕಾರದವರ ಪರಿಶೀಲನೆಯಲ್ಲಿದೆ.

## ಪ್ಲೇಗ್ ಮಹಾಮಾರಿಯ ಹಾವಳಿಯನ್ನು ತಡೆಗಟ್ಟಿ
ವಿ.ಸ. (26–07–1962)

# ರಾಜ್ಯದ ವಿವಿಧ ಭಾಗಗಳಲ್ಲಿ ಪ್ಲೇಗ್ ಸಾಂಕ್ರಾಮಿಕ ರೋಗ

ಶ್ರೀ ಕೆ.ವಿ. ಬೈರೇಗೌಡ (ಯಶವಂತಪುರ): ಸರ್ಕಾರವು ದಯವಿಟ್ಟು ಇದನ್ನು ತಿಳಿಸುವುದೆ:–

(ಎ) ರಾಜ್ಯದ ವಿವಿಧ ಭಾಗಗಳಲ್ಲಿ ಪ್ಲೇಗಿನ ಹೆಚ್ಚಳದ ಬಗ್ಗೆ ಅವರಿಗೆ ತಿಳಿದಿದೆಯೆ;

(ಬಿ) ಈ ಸಾಂಕ್ರಾಮಿಕ ರೋಗವು ಇತ್ತೀಚಿನ ಸುಮಾರು ವರ್ಷಗಳವರೆಗೆ ನಿವಾರಣೆಯಾಗಿತ್ತು ಎಂಬ ಬಗ್ಗೆ ಅವರಿಗೆ ತಿಳಿದಿದೆಯೆ;

(ಸಿ) ಹಾಗಿದ್ದಲ್ಲಿ, ಇತ್ತೀಚಿನ ಹೆಚ್ಚಳಕ್ಕೆ ಕಾರಣಗಳು;

(ಡಿ) ಸಾಂಕ್ರಾಮಿಕ ರೋಗವನ್ನು ಹೋಗಲಾಡಿಸಲು ಅವರು ತೆಗೆದುಕೊಂಡಿರುವ ಕ್ರಮಗಳು

**ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು).–**

(ಎ) ಹೌದು

(ಬಿ) ಪೂರ್ಣವಾಗಿ ಅಲ್ಲ

(ಸಿ) ಡಿ.ಡಿ.ಟಿ.ಗೆ ಓಡಿ ಹೋಗುತ್ತಿದ್ದ ಇಲಿ ಪ್ರತಿರೋಧವನ್ನು ತೋರುತ್ತಿದೆ

(ಡಿ) ತೆಗೆದುಕೊಂಡ ಕ್ರಮಗಳು:–

1. ಸಿನೋಫ್ಯುಮಿಗೇಷನ್
2. ಬಿಎಚ್‌ಸಿ
3. ಪ್ಲೇಗ್ ನಿರೋಧಕ ಚುಚ್ಚುಮದ್ದುಗಳು
4. ರೋಗಿಗಳಿಗೆ ಚಿಕಿತ್ಸೆ
5. ತಪಾಸಣೆಗಳು
6. ಆರೋಗ್ಯ ಶಿಕ್ಷಣ

**ಶ್ರೀ ಕೆ. ವಿ. ಬೈರೇಗೌಡ** : ನನ್ನ ಪ್ರಶ್ನೆಗೆ ಉತ್ತರವಾಗಿ ರಾಜ್ಯದ ನಾನಾ ಭಾಗಗಳಲ್ಲಿ ಪ್ಲೇಗು ರೋಗಿಗಳ ಸಂಖ್ಯೆ ಹೆಚ್ಚಾಗಿರುವುದು ಸರ್ಕಾರದವರಿಗೆ ಗೊತ್ತಿದೆ ಎಂದು ಹೇಳಿದ್ದೀರಿ, ಹಾಗಾದರೆ ಪ್ಲೇಗು ರೋಗವನ್ನು ತಡೆಗಟ್ಟುವುದಕ್ಕೆ ಏನೂ ಪ್ರಯತ್ನ ಮಾಡಲಿಲ್ಲವೇ?

**ಶ್ರೀ ಕೆ. ನಾಗಪ್ಪ ಆಳ್ವ** : ಅದಕ್ಕೆ ಬೆನ್‌ಜೆನ್ ಹೆಕ್ಸಾಕ್ಲೋರೈಡ್ ಎಂಬ ಔಷಧಿಯನ್ನು ಕಂಡು ಹಿಡಿದು ಅದನ್ನು ಉಪಯೋಗ ಮಾಡುತ್ತಿದ್ದೇವೆ.

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್**: (ಎ) ಖಂಡಕ್ಕೆ ಸಂಬಂಧಿಸಿದಂತೆ ಲೇಸ್‌ಗಳೆಂದರೇನು ಮತ್ತು ಈ ಸಾಂಕ್ರಾಮಿಕವು ಯಾವ ಜಿಲ್ಲೆಯಲ್ಲಿ ಹೆಚ್ಚಾಗಿದೆ?

**ಶ್ರೀ ಕೆ. ನಾಗಪ್ಪ ಆಳ್ವ**: ಮಾಲೂರು, ಮುಳಬಾಗಿಲು, ಬಂಗಾರಪೇಟೆ ಮತ್ತು ರಾಣಿವಾಸಪುರ, ಕೃಷ್ಣರಾಜನಗರದಲ್ಲಿ ಮೂರು ಹಳ್ಳಿಗಳು

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್**: ಸರ್ಕಾರದ ವರದಿಯ ಅನುಸಾರವಾಗಿ ಈ ರೋಗವು ವ್ಯಾಪಕವಾಗಿ ಹರಡಿರುವಾಗ, ಈ ಅವಧಿಯಲ್ಲಿ ಸಂಭವಿಸಿದ ಸಾವುಗಳ ಸಂಖ್ಯೆ ಎಷ್ಟು?

**ಶ್ರೀ ಕೆ. ನಾಗಪ್ಪ ಆಳ್ವ** : 1961ರಲ್ಲಿ ಒಟ್ಟು 407 ಜನರಿಗೆ ಈ ರೋಗ ತಗುಲಿದೆ. ಅದರಲ್ಲಿ 65 ಜನರು ಸತ್ತಿದ್ದಾರೆ.

**ಶ್ರೀ ಕೆ. ವಿ. ಬೈರೇಗೌಡ** : (ಸಿ) ಪ್ರಶ್ನೆಗೆ ಉತ್ತರವಾಗಿ ಡಿ.ಡಿ.ಟಿ. ಶಕ್ತಿ ಕಡಿಮೆಯಾಗಿದೆ ಎಂದು ಹೇಳುತ್ತೀರಿ. ಅದೇ ರೀತಿ ಎಲ್ಲ ಔಷಧಿಗಳ ಶಕ್ತಿಯೂ ಕಡಿಮೆಯಾಗಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಡಿ.ಡಿ.ಟಿ.ಗೆ ಮಾತ್ರ ಕಡಿಮೆಯಾಗಿದೆ ಎಂದು ಗೊತ್ತಾಗಿದೆ. ಅದಕ್ಕೆ ಬಿ.ಎಚ್.ಸಿ. ಉಪಯೋಗ ಮಾಡುತ್ತಾ ಇದ್ದೇವೆ.

**ಶ್ರೀ ಜಿ. ಎನ್. ಪಾಟೀಲ್** : ರೂರಲ್ ಏರಿಯಾದಿಂದ ಮುನಿಸಿಪಾಲ್ ಏರಿಯಾಗೆ ಬಂದಂಥ, ಎಪಿಡೆಮಿಕ್ ಕೇಸನ್ನು ಯಾವ ದವಾಖಾನೆಯಲ್ಲಿ ಸೇರಿಸುತ್ತೀರಿ?

**ಶ್ರೀ ಕೆ. ನಾಗಪ್ಪ ಆಳ್ವ** : ಪ್ಲೇಗ್ ರೋಗಿಗಳನ್ನು ಜನರಲ್ ಆಸ್ಪತ್ರೆಗಳಲ್ಲಿ ಸೇರಿಸುವುದೇ ಇಲ್ಲ. ಅದಕ್ಕೆ ಪ್ರತ್ಯೇಕ ಏರ್ಪಾಡಿಸಿಕೊಟ್ಟು ಟ್ರೀಟ್‌ಮೆಂಟ್ ಕೊಡುತ್ತೇವೆ.

**ಶ್ರೀ ಟಿ. ಡಿ. ದೇವೇಂದ್ರಪ್ಪ** : ಮಂಗಳೂರು ಕಡೆ ಆನೆಕಾಲು ರೋಗ ಎಂದು ಬರುವುದಿಲ್ಲವೇ ಅದು ಸಾಂಕ್ರಾಮಿಕ ರೋಗ, ಪ್ಲೇಗಿಗೂ ಆ ರೋಗಕ್ಕೆ ಸಂಬಂಧವಿದೆಯೇ?

**ಅಧ್ಯಕ್ಷರು** : ಮಂಗಳೂರು ಕಡೆ ಹರಡಿರತಕ್ಕ ಆನೆಕಾಲು ರೋಗದ ವಿಷಯ ಈ ಪ್ರಶ್ನೆಯ ವ್ಯಾಪ್ತಿಯಲ್ಲಿ ಬರುವುದಿಲ್ಲ.

**ಶ್ರೀ ಟಿ. ಡಿ. ದೇವೇಂದ್ರ :** ಆನೆಕಾಲು ರೋಗ ಬೇರೆ, ಪ್ಲೇಗ್ ರೋಗ ಬೇರೆ. ಈ ತರಹ ಸಾಂಕ್ರಾಮಿಕ ರೋಗ ಯಾವ ಯಾವ ಭಾಗದಲ್ಲಿ ಜಾಸ್ತಿಯಾಗುತ್ತಾ ಇದೆ ಎನ್ನುವ ರಿಪೋರ್ಟ್ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ :** ಅದಕ್ಕೆ ಉತ್ತರ ಆಗಲೇ ಹೇಳಲಾಯಿತು.

**ಶ್ರೀ ಡಿ. ಪರಮೇಶ್ವರಪ್ಪ:** (ಡಿ)ಗೆ ಪೂರಕವಾಗಿ, ಆರೋಗ್ಯ ಶಿಕ್ಷಣಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ ಹೇಳುವುದಾದರೆ, ಈ ವಿಷಯದಲ್ಲಿ ಸರ್ಕಾರ ತೆಗೆದುಕೊಂಡಿರುವ ಕ್ರಮಗಳ ಬಗ್ಗೆ ನಾನು ತಿಳಿದುಕೊಳ್ಳಬಹುದೆ?

**ಶ್ರೀ ಕೆ. ನಾಗಪ್ಪ ಆಳ್ವ :** ಆಯಾಯ ಸ್ಥಳಗಳಲ್ಲಿ ಜನರಿಗೆ ಈ ರೋಗದ ವಿಷಯ ಮತ್ತು ರೋಗ ಬಂದರೆ ಏನು ಮಾಡಬೇಕೆಂಬ ವಿಷಯವನ್ನು ಅಲ್ಲಲ್ಲೇ ಹೋಗಿ ಸಂಬಂಧಪಟ್ಟ ಅಧಿಕಾರಿಗಳು ತಿಳಿಸುತ್ತಾ ಇರುತ್ತಾರೆ.

**ಶ್ರೀ ಎನ್.ಓ. ಸಮಾಜಿ:** (ಮರಾಠಿ)

**ಶ್ರೀ ಎ.ಎಸ್. ಪಾಟೀಲ್:** ಮಾನ್ಯರೆ, ಪ್ರಶ್ನೆಯೇನೆಂದರೆ: ಈ ಕಾಯಿಲೆಯ ಹರಡುವಿಕೆಯನ್ನು ತಡೆಯಲು ತೆಗೆದುಕೊಳ್ಳಲಾದ ಕ್ರಮಗಳಾವುವು? ಮತ್ತು ಈ ರೋಗ ಹರಡುವುದನ್ನು ತಡೆಯಲು ಜನರಿಗೆ ಸರ್ಕಾರದಿಂದ ನೀಡಲಾದ ಶಿಕ್ಷಣವೇನು?

**ಶ್ರೀ ಕೆ. ನಾಗಪ್ಪ ಆಳ್ವ:** ಸದನದ ಮಾಹಿತಿಗಾಗಿ, ಉತ್ತರಕ್ಕಿಂತ ಸ್ವಲ್ಪ ಹೆಚ್ಚಾಗಿಯೇ ಕೆಲವು ವಿಷಯಗಳನ್ನು ಹೇಳಬಯಸುತ್ತೇನೆ. ಈ ರೋಗವು ಮೈಸೂರು ಜಿಲ್ಲೆ ಮತ್ತು ಕೋಲಾರ ಜಿಲ್ಲೆಯ ಕೆಲವು ಭಾಗಗಳಲ್ಲಿ ವ್ಯಾಪಕವಾಗಿ ಹರಡಿದೆ. ಇದು ನೆರೆಯ ಜಿಲ್ಲೆಗಳಿಂದ ಅಂದರೆ ಸೇಲಂ ಮತ್ತು ಚಿತ್ತೂರುಗಳಿಂದ ರವಾನೆಯಾಗಿದೆಯೆಂದು ತಿಳಿದುಬಂದಿದೆ. ಹೀಗಾಗಿ, ಇತ್ತೀಚೆಗೆ ನಮ್ಮಲ್ಲಿ ಎರಡು ಸಮಾವೇಶಗಳಾದವು. ಮದ್ರಾಸಿನಲ್ಲಿ ಮೇ ತಿಂಗಳಿನಲ್ಲಿ ಒಂದು ಸಮಾವೇಶ ಹಾಗೂ ಕೋಲಾರದಲ್ಲಿ ಇನ್ನೊಂದು ಸಮಾವೇಶ ನಡೆಯಿತು. ಈ ಸಮಾವೇಶಗಳಲ್ಲಿ ಎಲ್ಲಾ ಮೂರು ಸರ್ಕಾರಗಳ ಅಧಿಕಾರಿಗಳು ಈ ವಿಷಯಗಳ ಬಗ್ಗೆ ಚರ್ಚಿಸಿದರು ಮತ್ತು ಅವರು ಇದಕ್ಕೆ ಸಂಬಂಧಿಸಿದಂತೆ ಅಗತ್ಯ ಕ್ರಮ ಕೈಗೊಳ್ಳುತ್ತಿದ್ದಾರೆ.

**ಶ್ರೀ ಕೆ. ಲಕ್ಕಪ್ಪ:** ಕಾರ್ಯವಿಧಾನದ ವಿಷಯಕ್ಕೆ ಸಂಬಂಧಿಸಿದಂತೆ ನಾನು ಒಂದು ಕ್ರಿಯಾ ಲೋಪವನ್ನು ಎತ್ತುತ್ತೇನೆ. ಮಾನ್ಯ ಸದಸ್ಯರು ಸಚಿವರಿಗೆ ಅರ್ಥವಾಗದಿರುವಂಥ ಭಾಷೆಯಲ್ಲಿ ಮಾತನಾಡಿದರು. . . . .

**ಮಾನ್ಯ ಸಭಾಧ್ಯಕ್ಷರು:** ದಯವಿಟ್ಟು ಕುಳಿತುಕೊಳ್ಳಿ. ಅದನ್ನು ಪ್ರಶ್ನೋತ್ತರದ ಸಮಯದ ನಂತರ ಮಾತನಾಡೋಣ, ಆದರೆ ಅದನ್ನು ನೀವು ಪ್ರಶ್ನೋತ್ತರದ ಸಮಯದಲ್ಲಿ ಎತ್ತಕೂಡದು.

## ಮೈಸೂರು ವಿಶ್ವವಿದ್ಯಾನಿಲಯದ ವೈದ್ಯ ಪದವಿಗಳಿಗೆ ವಿಶ್ವ ಮಾನ್ಯತೆ

**ವಿ.ಸ. (26–07–1962)**

# ಭಾರತೀಯ ವೈದ್ಯಕೀಯ ಪರಿಷತ್ತು ಮತ್ತು ಅಂತರರಾಷ್ಟ್ರೀಯ ವೈದ್ಯಕೀಯ ಸಂಸ್ಥೆಗಳಿಂದ ಮೈಸೂರು ವಿಶ್ವವಿದ್ಯಾನಿಲಯದ ವೈದ್ಯಕೀಯ ಪದವಿಗೆ ಮಾನ್ಯತೆ

**ಶ್ರೀ ಕೆ.ವಿ. ಬೈರೇಗೌಡ (ಯಶವಂತಪುರ):** ಸರ್ಕಾರವು ದಯವಿಟ್ಟು ಇದನ್ನು ತಿಳಿಸುವುದೆ:–

(ಎ) ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರದಾನ ಮಾಡಲಾದ ವೈದ್ಯಕೀಯ ಪದವಿಗಳು ಭಾರತೀಯ ವೈದ್ಯಕೀಯ ಪರಿಷತ್ತು ಮತ್ತು ಅಂತರರಾಷ್ಟ್ರೀಯ ವೈದ್ಯಕೀಯ ಸಂಸ್ಥೆಗಳು ಮತ್ತು ವಿದೇಶಿ ವಿಶ್ವವಿದ್ಯಾನಿಲಯಗಳಿಂದ ಮಾನ್ಯತೆ ಪಡೆದಿವೆಯೆ;

(ಬಿ) ಈ ಮೇಲಿನದಕ್ಕೆ ಉತ್ತರ ಹೌದಾದರೆ, ಭಾರತೀಯ ವೈದ್ಯಕೀಯ ಪರಿಷತ್ತು ಮತ್ತು ಇತರ ಸಂಸ್ಥೆಗಳು ಪ್ರತ್ಯೇಕವಾಗಿ ಯಾವ ವರ್ಷದಿಂದ ಮಾನ್ಯತೆಯನ್ನು ನೀಡಿವೆ;

(ಸಿ) ವಿದೇಶಿ ವಿಶ್ವವಿದ್ಯಾನಿಲಯುಗಳಿಗೆ ಇತರ ಭಾರತೀಯು ವಿಶ್ವವಿದ್ಯಾನಿಲಯಗಳು ನೇರ ಪ್ರವೇಶವನ್ನು ಪಡೆಯುವಾಗ, ಮೈಸೂರು ವಿಶ್ವವಿದ್ಯಾನಿಲಯದ ಪದವೀಧರರು ಪ್ರವೇಶ ಕೋರುವ ಮುನ್ನ ಅರ್ಹತಾ ಪರೀಕ್ಷೆಗಳನ್ನು ಪಾಸು ಮಾಡಬೇಕಾಗಿರುವುದು ಅವರ ಗಮನಕ್ಕೆ ಬಂದಿದೆಯೆ?

ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು):

(ಎ) ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರದಾನ ಮಾಡಲಾದ ವೈದ್ಯಕೀಯ ಪದವಿಯು ಭಾರತದ ವೈದ್ಯಕೀಯ ಪರಿಷತ್ತಿನಿಂದ ಮಾನ್ಯತೆ ಪಡೆದಿದೆ. ಆದರೆ ಸಂಯುಕ್ತ ರಾಜ್ಯಗಳ ಸಾಮಾನ್ಯ ವೈದ್ಯಕೀಯ ಪರಿಷತ್ತಿನಿಂದ ಮಾನ್ಯತೆ ಪಡೆದಿರುವುದಿಲ್ಲ.

(ಬಿ) ಮೈಸೂರಿನ ವಿಶ್ವವಿದ್ಯಾನಿಲಯದಿಂದ ಪ್ರದಾನ ಮಾಡಲಾದ ವೈದ್ಯಕೀಯ ಪದವಿಯು, ಭಾರತೀಯ ವೈದ್ಯಕೀಯ ಪರಿಷತ್ತು ಅಧಿನಿಯಮ, 1956ರಲ್ಲಿ ಮಾನ್ಯತೆ ಪಡೆದಿದೆ.

(ಸಿ) ಹೌದು

ಶ್ರೀ ಕೆ.ವಿ. ಬೈರೇಗೌಡ: ಮೈಸೂರು ಯೂನಿವರ್ಸಿಟಿ ಮೆಡಿಕಲ್ ಡಿಗ್ರಿಯನ್ನು ಇಂಡಿಯನ್ ಮೆಡಿಕಲ್ ಕೌನ್ಸಿಲ್‌ನವರು ಮಾತ್ರ ರೆಕಗ್ನೈಸ್ ಮಾಡಿದ್ದಾರೆ. ಜನರಲ್ ಮೆಡಿಕಲ್ ಕೌನ್ಸಿಲ್‌ನವರು ರೆಕಗ್ನೈಸ್ ಮಾಡುವುದಿಲ್ಲ ಎಂದು ಹೇಳುತ್ತೀರಿ. ಪಾಶ್ಚಿಮಾತ್ಯ ದೇಶಗಳಿಗೆ ಹೋದಾಗ ಅವರು ಯಾವ ರೀತಿ ಇದನ್ನು ಪರಿಗಣಿಸುತ್ತಾರೆ ಎಂಬುದನ್ನು ಹೇಳುತ್ತೀರಾ?

ಶ್ರೀ ಕೆ. ನಾಗಪ್ಪ ಆಳ್ವ : ಅಲ್ಲಿ ಅವರು ಪ್ರತ್ಯೇಕ ಒಂದು ಎಕ್ಸಾಮಿನೇಷನ್ ಮಾಡುತ್ತಾರೆ, ಅದಕ್ಕೆ ಕುಳಿತುಕೊಳ್ಳಬೇಕಾಗುತ್ತದೆ. ಆದ್ದರಿಂದ ಹೆಚ್ಚಿನ ತೊಂದರೆ ಬರುವುದಿಲ್ಲ.

ಶ್ರೀ ಕೆ. ವಿ. ಬೈರೇಗೌಡ : ಇಂಡಿಯಾ ದೇಶದಲ್ಲಿರುವ ಇತರ ಎಲ್ಲಾ ಯೂನಿವರ್ಸಿಟಿಗಳಿಂದ ಪಾಸ್ ಮಾಡಿದ ಗ್ರಾಜುಯೇಟ್‌ಗಳಿಗೆ ಈ ತರಹ ಟೆಸ್ಟ್ ಇಲ್ಲದೇ ಇರುವಾಗ, ಇದು ಒಂದಕ್ಕೆ ಮಾತ್ರ ರೆಕಗ್ನಿಷನ್ ಇಲ್ಲದೇ ಇರುವುದಕ್ಕೆ ಕಾರಣವೇನು?

ಶ್ರೀ ಕೆ. ನಾಗಪ್ಪ ಆಳ್ವ : ಈಗ ಸಧ್ಯಕ್ಕೆ ಟೆಂಪೊರರಿ ರೆಕಗ್ನಿಷನ್ ಇದೆ. ಒಂದು "ಶಿಕ್ಷಣಗಳ ಗುಣಮಟ್ಟ" ಎಂದು ಇದೆ. ಅದಕ್ಕೆ ಸರಿಯಾದ ಕೆಲಸ ಸರ್ಕಾರ ಮಾಡುತ್ತಾ ಇದೆ.

ಶ್ರೀ ಎ.ಎಸ್. ಪಟೇಲ್: ಈ ವಿಶ್ವವಿದ್ಯಾನಿಲಯವು ಸಂಯುಕ್ತ ರಾಜ್ಯಗಳ ಕೇಂದ್ರ ವೈದ್ಯಕೀಯ ಪರಿಷತ್ತಿನಿಂದ ಮಾನ್ಯತೆ ಪಡೆದಿಲ್ಲವೆಂಬುದಕ್ಕೆ ಆಧಾರಗಳೇನು ಸರ್?

**ಶ್ರೀ ಕೆ. ನಾಗಪ್ಪ ಆಳ್ವ:** ಭಾರತೀಯ ವೈದ್ಯಕೀಯ ಪರಿಷತ್ತು ಕೆಲವು ಷರತ್ತುಗಳನ್ನು ವಿಧಿಸಿದೆ. ಈ ಷರತ್ತುಗಳನ್ನು ಈಡೇರಿಸಬೇಕಿದೆ ಮತ್ತು ಇಲ್ಲಿಯವರೆಗಿನ ಎಲ್ಲಾ ಷರತ್ತುಗಳನ್ನು ಈಡೇರಿಸಲಾಗುವುದಿಲ್ಲ. ಆದುದರಿಂದ, ಅಲ್ಲಿ 'ಪೂರ್ಣ ಮಾನ್ಯತೆ' ಎಂಬುದಿದೆ ಮತ್ತು ಆ ಪೂರ್ಣ ಮಾನ್ಯತೆಯು ಈಗ ಇರುವುದಿಲ್ಲ.

**ಶ್ರೀ ಕೆ. ವಿ. ಬೈರೇಗೌಡ :** ನಮ್ಮ ಮೆಡಿಕಲ್ ಕಾಲೇಜ್ ಪ್ರಾರಂಭವಾಗಿ 30 ವರ್ಷಗಳಾದರೂ ರೆಕಗ್ನಿಷನ್ ಕೊಡದೇ ಇರುವುದಕ್ಕೆ ಆತಂಕವೇನಿದೆ?

**ಶ್ರೀ ಕೆ. ನಾಗಪ್ಪ ಆಳ್ವ:** ನಾನು ನಿಮಗೆ ಹೇಳಿದ್ದು ಅದನ್ನೇ. ಭಾರತೀಯ ವೈದ್ಯಕೀಯ ಪರಿಷತ್ತು ಶಿಕ್ಷಣದ ಗುಣಮಟ್ಟ, ಸಿಬ್ಬಂದಿ ಮತ್ತು ಅಧ್ಯಯನ ಸಾಮಗ್ರಿಗಳ ಮಾದರಿಗೆ ಸಂಬಂಧಿಸಿದಂತೆ ಈ ಕಾಲೇಜುಗಳ ಸ್ಥಿತಿಗತಿಗಳನ್ನು ತಿಳಿಯಲು ಆಯೋಗವನ್ನು ಕಳುಹಿಸುತ್ತಿರಲಿಲ್ಲ.

**ಶ್ರೀ ವೈ. ಮಂಜುನಾಥ ಶೆಟ್ಟಿ:** ಸಂಯುಕ್ತ ರಾಜ್ಯಗಳ ಶಿಕ್ಷಣಕ್ಕಾಗಿ ಸಾಮಾನ್ಯ ವೈದ್ಯಕೀಯ ಪರಿಷತ್ತಿನ ಸದಸ್ಯರ ಮುಂದೆ ಸಮರ್ಥವಾಗಿ ಹೇಳಲು ಮತ್ತು ಮೈಸೂರು ವಿಶ್ವವಿದ್ಯಾನಿಲಯದ ವೈದ್ಯಕೀಯ ಪದವಿಯನ್ನು ಮಾನ್ಯ ಮಾಡುವುದಕ್ಕೆ ಮನವೊಲಿಸಲು ಸರ್ಕಾರವು ಮಾನ್ಯ ಸಚಿವರನ್ನು ನಿಯೋಜಿಸುತ್ತದೆಯೆ? (ನಗು)

**ಮಾನ್ಯ ಸಭಾಧ್ಯಕ್ಷರು:** ಕ್ರಮ ಕೈಗೊಳ್ಳುವುದಕ್ಕಾಗಿ ಸೂಚನೆಗಳನ್ನು ತರುವಾಯ ವಿಚಾರ ಮಾಡಲಾಗುವುದು

(ನಗು)

**ಶ್ರೀ ಅಣ್ಣಾರಾವ್ ಗಣಮುಖಿ:** ಇದು ಕಾಲೇಜಿನಲ್ಲಿ ಸಿಬ್ಬಂದಿ ಸಂಖ್ಯೆ ಕಡಿಮೆಯಾಗಿರುವ ಕಾರಣಕ್ಕಾಗಿಯೋ ಅಥವಾ ಅವರು ಮಾನ್ಯ ಮಾಡದಿರುವುದನ್ನು ಸರಿಹೊಂದಿಸಿಕೊಳ್ಳುವುದಕ್ಕಾಗಿಯೋ ಎಂಬುದನ್ನು ನಾನು ತಿಳಿದುಕೊಳ್ಳಬಹುದೇ?

**ಶ್ರೀ ಕೆ. ನಾಗಪ್ಪ ಆಳ್ವ:** ಬಹುಮಟ್ಟಿಗೆ ಅಧ್ಯಯನ ಸಾಮಗ್ರಿ ಮತ್ತು ಸಿಬ್ಬಂದಿಯನ್ನು ಹೊಂದಿಸುವಲ್ಲಿ ನಾವು ಸಫಲರಾಗಿದ್ದೇವೆ. ಇನ್ನೂ ಹೆಚ್ಚಿನದನ್ನು ಮಾಡಬೇಕಿದೆ ಮತ್ತು ಆ ನಿಟ್ಟಿನಲ್ಲಿ ನಾವು ಕೆಲಸ ಮಾಡುತ್ತಿದ್ದೇವೆ.

**ಶ್ರೀ ಡಿ. ಪರಮೇಶ್ವರಪ್ಪ:** (ಎ)ಗೆ ಉತ್ತರದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರದಾನ ಮಾಡಲಾದ ವೈದ್ಯಕೀಯ ಪದವಿಯು ಭಾರತೀಯ ವೈದ್ಯಕೀಯ ಪರಿಷತ್ತಿನಿಂದ ಮಾನ್ಯತೆ ಪಡೆದಿದೆ. ಆದರೆ ಸಂಯುಕ್ತ ರಾಜ್ಯಗಳ ಸಾಮಾನ್ಯ ವೈದ್ಯಕೀಯ ಪರಿಷತ್ತಿನಿಂದ ಪಡೆದಿಲ್ಲವೆಂದು ಹೇಳಲಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಈ ವೈದ್ಯಕೀಯ ಪದವಿಯನ್ನು ಮಾನ್ಯ ಮಾಡಲು ಸಂಯುಕ್ತ

ರಾಜ್ಯಗಳ ಸಾಮಾನ್ಯ ವೈದ್ಯಕೀಯ ಪರಿಷತ್ತನ್ನು ಒತ್ತಾಯಿಸಲು ಸರ್ಕಾರವು ಯಾವುದೇ ಪ್ರಯತ್ನಗಳನ್ನು ಮಾಡಿದೆಯೇ ಎಂಬುದನ್ನು ನಾನು ತಿಳಿದುಕೊಳ್ಳಬಹುದೆ?

ಶ್ರೀ ಕೆ. ನಾಗಪ್ಪ ಆಳ್ವ: ಸರ್ಕಾರವು ಷರತ್ತುಗಳನ್ನು ಈಡೇರಿಸಬಹುದಾಗಿದೆ ಮತ್ತು ಭಾರತೀಯ ವೈದ್ಯಕೀಯ ಪರಿಷತ್ತಿನ ಮುಖಾಂತರ ಅವರು ವೈದ್ಯ ಪದವಿಗೆ ಮಾನ್ಯತೆ ಪಡೆಯಬಹುದಾಗಿದೆ.

ಶ್ರೀ ಗಂಜಿ ವೀರಪ್ಪ: ಮಾನ್ಯತೆ ಪಡೆಯದಿರುವುದು ಮೈಸೂರು ವಿಶ್ವವಿದ್ಯಾನಿಲಯದ ವೈದ್ಯಕೀಯ ಪದವಿ ಮಾತ್ರ. ಇಂತಹ ಸ್ಥಿತಿಯಲ್ಲಿರುವಂಥ ವಿಶ್ವವಿದ್ಯಾನಿಲಯ ಬೇರೆ ಯಾವುದಾದರೂ ಇದೆಯೆ?

ಶ್ರೀ ಕೆ. ನಾಗಪ್ಪ ಆಳ್ವ: ಬೇರೆ ವಿಶ್ವವಿದ್ಯಾನಿಲಯಗಳಲ್ಲಿರುವ ಸದ್ಯದ ಸ್ಥಿತಿಗಳು ನನಗೆ ಗೊತ್ತಿಲ್ಲ.

ಶ್ರೀ ಜಿ. ದುಗ್ಗಪ್ಪ: ಸರ್ಕಾರವು ಭಾರತೀಯ ವೈದ್ಯಕೀಯ ಪರಿಷತ್ತು ಕಳುಹಿಸಿರುವ ಇತರ ಆಯೋಗಗಳ ವರದಿಗಳನ್ನು ಪರಿಗಣಿಸಿದೆಯೆ? ಮತ್ತು ಅವುಗಳನ್ನು ಪಾಲಿಸಲು ಕ್ರಮ ಕೈಗೊಂಡಿದೆಯೆ?

ಶ್ರೀ ಕೆ. ನಾಗಪ್ಪ ಆಳ್ವ: ಆ ನಿಟ್ಟಿನಲ್ಲಿ ನಾವು ಕ್ರಮ ಕೈಗೊಳ್ಳುತ್ತಿದ್ದೇವೆ.

ಶ್ರೀ ಡಿ.ಎಂ. ಸಿದ್ದಯ್ಯ: ಭಾರತೀಯ ವೈದ್ಯಕೀಯ ಪರಿಷತ್ತು ನಮ್ಮ ಪದವಿಯನ್ನು ಯಾವಾಗ ಮಾನ್ಯ ಮಾಡಿತು?

ಶ್ರೀ ಕೆ. ನಾಗಪ್ಪ ಆಳ್ವ: ಭಾರತೀಯ ವೈದ್ಯಕೀಯ ಪರಿಷತ್ತು ನಮ್ಮ ಪದವಿಗಳನ್ನು ತಾತ್ಕಾಲಿಕವಾಗಿ ಮಾನ್ಯ ಮಾಡುತ್ತಿದೆ.

ಶ್ರೀ ಕೆ. ನಾಗಪ್ಪ ಆಳ್ವ: ಅವರು ನಮ್ಮ ಪದವಿಯನ್ನು ಮಾನ್ಯ ಮಾಡಿದ್ದಾರೆ.

ಶ್ರೀ ಡಿ.ಎಂ. ಸಿದ್ದಯ್ಯ: ನಮ್ಮ ಪದವಿಗಳನ್ನು ಖಾಯಂ ಆಗಿ ಮಾನ್ಯಗೊಳಿಸುವುದಕ್ಕಾಗಿ ಸರ್ಕಾರವು ಭಾರತೀಯ ವೈದ್ಯಕೀಯ ಪರಿಷತ್ತನ್ನು ಕೇಳಿಕೊಳ್ಳುವುದೆ?

ಶ್ರೀ ಕೆ. ನಾಗಪ್ಪ ಆಳ್ವ: ಸರ್ಕಾರವು ಈ ಸಂಬಂಧವಾಗಿ, ಭಾರತೀಯ ವೈದ್ಯಕೀಯ ಪರಿಷತ್ತನ್ನು ಈಗಾಗಲೇ ಕೇಳಿಕೊಂಡಿದೆ.

ಶ್ರೀ ಡಿ.ಎಂ. ಸಿದ್ದಯ್ಯ: ನಮ್ಮ ಪದವಿಗಳನ್ನು ಮಾನ್ಯಗೊಳಿಸಲು ಸಂಯುಕ್ತ ರಾಜ್ಯಗಳ ವೈದ್ಯಕೀಯ ಪರಿಷತ್ತನ್ನು ಕೇಳಿಕೊಳ್ಳಲು ಮತ್ತು ಆ ರೀತಿಯಾಗಿ ನಮ್ಮ ವಿದ್ಯಾರ್ಥಿಗಳು ಆ ರಾಷ್ಟ್ರದಲ್ಲಿ ತಮ್ಮ ಉನ್ನತ ಅಧ್ಯಯನವನ್ನು ಕೈಗೊಳ್ಳಲು

ಅನುಕೂಲವಾಗುವಂತೆ ಮಾಡಲು ಭಾರತೀಯ ವೈದ್ಯಕೀಯ ಪರಿಷತ್ತಿನ ಮೇಲೆ ಸರ್ಕಾರವು ಪ್ರಭಾವ ಬೀರುವುದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಅದು ವಾಡಿಕೆ ಕ್ರಮದಲ್ಲೇ ನಡೆಯುತ್ತದೆ.

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್:** ಸಂಯುಕ್ತ ರಾಜ್ಯಗಳಲ್ಲಿ ಭಾರತೀಯ ವೈದ್ಯಕೀಯ ಪರಿಷತ್ತು ಮಾನ್ಯತೆಗೆ ಅವಕಾಶ ಕಲ್ಪಿಸಿರುವ ನಮ್ಮ ವಿಶ್ವವಿದ್ಯಾನಿಲಯ ಪದವಿಗಳು ಪೂರ್ಣ ಮಾನ್ಯತೆ ಪಡೆದಿವೆಯೆ?

**ಶ್ರೀ ಕೆ. ನಾಗಪ್ಪ ಆಳ್ವ:** ಹೌದು

**ಶ್ರೀ ಎಸ್.ಎಂ. ಕೃಷ್ಣ:** ಸಂಯುಕ್ತ ವೈದ್ಯಕೀಯ ಪರಿಷತ್ತು ನಮ್ಮ ವೈದ್ಯ ಪದವಿಯನ್ನು ಮಾನ್ಯ ಮಾಡುತ್ತದೆಯೆಂದು ಹೆಮ್ಮೆಯಿಂದ ಹೇಳಿದಿರಿ. ಆದರೆ ಉನ್ನತ ಅಧ್ಯಯನಕ್ಕಾಗಿ ಅಲ್ಲಿಗೆ ಹೋಗುವಂಥ ವೈದ್ಯರು ಒಂದು ಪರೀಕ್ಷೆಯನ್ನು ತೆಗೆದುಕೊಳ್ಳಬೇಕೆಂಬುದು ವಾಸ್ತವಾಂಶವಲ್ಲವೆ?

**ಶ್ರೀ ಕೆ. ನಾಗಪ್ಪ ಆಳ್ವ:** ಅವರು ಆ ಪರೀಕ್ಷೆಯನ್ನು ತೆಗೆದುಕೊಳ್ಳಬೇಕು. ಏಕೆಂದರೆ ಇಲ್ಲಿ ನಾವು ತಾತ್ಕಾಲಿಕ ಮಾನ್ಯತೆಯನ್ನು ಮಾತ್ರ ಹೊಂದಿದ್ದೇವೆ.

**ಶ್ರೀ ಎಸ್. ಶಿವಪ್ಪ:** ಮೈಸೂರಿನಲ್ಲಿನ ವೈದ್ಯಕೀಯ ಕಾಲೇಜುಗಳು ಹಲವಾರು ದಶಕಗಳ ಹಿಂದೆಯೇ ಪ್ರಾರಂಭವಾಗಿದ್ದರೂ ಸಹ, ನಮ್ಮ ವೈದ್ಯಕೀಯ ಪದವಿಗಳಿಗೆ ಇನ್ನೂ ತಾತ್ಕಾಲಿಕ ಮಾನ್ಯತೆಯನ್ನು ನೀಡಲಾಗುತ್ತಿದೆಯೆಂದರೆ ಅದು ಹೇಗೆ?

**ಶ್ರೀ ಕೆ. ನಾಗಪ್ಪ ಆಳ್ವ:** ಮೈಸೂರು ವೈದ್ಯಕೀಯ ಕಾಲೇಜು ಮಾತ್ರವೇ ಮೂವತ್ತು ವರ್ಷಗಳ ಹಿಂದೆ ಪ್ರಾರಂಭವಾಗಿರುವಂಥದ್ದು. ಆದರೆ ಇತರ ಕಾಲೇಜುಗಳು 3 ರಿಂದ 5 ವರ್ಷಗಳ ಹಿಂದೆ ಪ್ರಾರಂಭವಾಗಿವೆ.

## ಚಿತ್ತಾಪುರ-ಕೊಲ್ಲೂರಿನಲ್ಲಿ ಆರೋಗ್ಯ ಕೇಂದ್ರ
ವಿ.ಪ. (06-12-1962)

# ಚಿತ್ತಾಪುರ ತಾಲ್ಲೂಕಿನ ಕೊಲ್ಲೂರು ಗ್ರಾಮದಲ್ಲಿ ಆರೋಗ್ಯ ಘಟಕವನ್ನು ಪ್ರಾರಂಭಿಸುವುದು

**ಶ್ರೀ ವಿ.ಎಸ್. ಚಟ್ನಳ್ಳಿ (ಸ್ಥಳೀಯ ಪ್ರಾಧಿಕಾರಗಳ ಚುನಾವಣಾ ಕ್ಷೇತ್ರ):** ಸರ್ಕಾರವು ದಯವಿಟ್ಟು ಇದನ್ನು ತಿಳಿಸುವುದೆ:-

(ಎ) ಚಿತ್ತಾಪುರ ತಾಲ್ಲೂಕಿನ ಕೊಲ್ಲೂರು ಗ್ರಾಮದಲ್ಲಿ ಆರೋಗ್ಯ ಘಟಕವನ್ನು ಪ್ರಾರಂಭಿಸಲು ಅವರು ನಿರ್ಧರಿಸಿರುವರೆ;

(ಬಿ) ಕೊಲ್ಲೂರಿನ ಜನರು ಆರೋಗ್ಯ ಘಟಕವನ್ನು ಪ್ರಾರಂಭಿಸಲು ಸರ್ಕಾರಿ ಖಜಾನೆಯಲ್ಲಿ ತಮ್ಮ ಪಾಲಿನ ದೇಣಿಗೆಯನ್ನು ಜಮಾ ಮಾಡಿರುವರೆ?

**ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು).-**

(ಎ) ಇಲ್ಲ

(ಬಿ) ಹೌದು

**ಶ್ರೀ ವಿ.ಎಸ್. ಚಟ್ನಳ್ಳಿ :** ಕೊಲ್ಲೂರಿನಲ್ಲಿ ಆರೋಗ್ಯ ಘಟಕ ಮಾಡುವುದಿಲ್ಲವೆಂದು ಹೇಳಿದ್ದೀರಿ. ಬೇರೆ ಎಲ್ಲಿಯಾದರು ಮಾಡಬೇಕೆಂಬ ವಿಚಾರವಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ :** ಎಲ್ಲಿ ಮಾಡುವುದು ಎಂಬ ವಿಷಯದಲ್ಲಿ ಸರ್ಕಾರ ಇದುವರೆಗೂ ಯಾವ ತೀರ್ಮಾನಕ್ಕೂ ಬಂದಿಲ್ಲ.

**ಶ್ರೀ ವಿ.ಎಸ್. ಚಟ್ನಳ್ಳಿ :** ಕೊಲ್ಲೂರು ಗ್ರಾಮದವರಿಗೆ ಪಬ್ಲಿಕ್ ದೇಣಿಗೆ ಜಮೆ ಮಾಡಲು ಕೇಳಿಕೊಂಡಿದ್ದೀರಾ?

**ಶ್ರೀ ಕೆ. ನಾಗಪ್ಪ ಆಳ್ವ :** ಹೌದು.

**ಶ್ರೀ ವಿ.ಎಸ್. ಚಟ್ನಳ್ಳಿ:** ಕೊಲ್ಲೂರು ಗ್ರಾಮದಲ್ಲಿ ಆರೋಗ್ಯ ಘಟಕ ಪ್ರಾರಂಭ ಮಾಡುವುದಿಲ್ಲವೆಂದಮೇಲೆ ದೇಣಿಗೆ ಜಮಾ ಮಾಡುವುದಕ್ಕೆ ಏಕೆ ಕೇಳಿಕೊಂಡಿರಿ?

**ಶ್ರೀ ಕೆ. ನಾಗಪ್ಪ ಆಳ್ವ:** ಕೊಲ್ಲೂರು ಗ್ರಾಮದವರು ಹಣ ಕಟ್ಟಿದ್ದರು. ಆ ಪ್ರಕಾರ ಅಲ್ಲಿ ಆರೋಗ್ಯ ಘಟಕ ಮಾಡಬೇಕೆಂದು ತಾಲ್ಲೂಕ್ ಬೋರ್ಡಿನವರು

ಠರಾವು ಮಾಡಿದ್ದರು. ಕೆಲವು ತಿಂಗಳ ಮೇಲೆ ಅವೇ ತಾಲ್ಲೂಕ್ ಬೋರ್ಡಿನವರು ಕೊಲ್ಲೂರು ಗ್ರಾಮದಲ್ಲಿ ಬೇಡ, ನಲವಾರು ಗ್ರಾಮದಲ್ಲಿ ಆಗುವುದು ಸರಿ ಎಂದು ತೀರ್ಮಾನ ಮಾಡಿ ಕಳಿಸಿದ್ದಾರೆ.

**ಶ್ರೀ ನಾರಾಯಣಪ್ಪ ಕೊಂಡ:** ನಲವಾರು ಗ್ರಾಮದಲ್ಲಿ ಆಗಬೇಕೆಂದು ತೀರ್ಮಾನವಾಗಿದೆಯಲ್ಲವೇ?

**ಶ್ರೀ ಕೆ. ನಾಗಪ್ಪ ಆಳ್ವ :** ಇನ್ನೂ ತೀರ್ಮಾನವಾಗಿಲ್ಲ.

**ಶ್ರೀ ನಾರಾಯಣಪ್ಪ ಕೊಂಡ :** ನಲವಾರು ಗ್ರಾಮದ ಜನಸಂಖ್ಯೆ ಜಾಸ್ತಿಯಾಗಿದೆ ಎನ್ನುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ :** ಜನಸಂಖ್ಯೆ ಹೆಚ್ಚಾಗಿದೆ ಎಂದು ಒಂದು ಕಡೆ ಹೇಳುತ್ತಿದ್ದಾರೆ. ಮತ್ತೊಂದು ಕಡೆ, ನಮಗೆ ಕೊಡುವುದಾಗಿ ಆಶ್ವಾಸನೆ ಕೊಟ್ಟು ಈಗ ವಿರೋಧ ತೀರ್ಮಾನ ಮಾಡಿದ್ದಾರೆ ಎಂಬ ಪ್ರತಿಪಾದವೂ ಇದೆ.

**ಶ್ರೀ ನಾರಾಯಣಪ್ಪ ಕೊಂಡ :** ನಲವಾರು ಗ್ರಾಮದ ಜನರು 12 ಸಾವಿರ ರೂಪಾಯಿ ಕೊಟ್ಟಿದ್ದಾರೆನ್ನುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ :** ಕೊಲ್ಲೂರು ಗ್ರಾಮದವರು 12 ಸಾವಿರ ರೂಪಾಯಿ ಕೊಟ್ಟಿದ್ದಾರೆ, ನಲವಾರು ಗ್ರಾಮದವರೂ ಕೊಟ್ಟಿದ್ದಾರೆ.

**ಶ್ರೀ ನಾರಾಯಣಪ್ಪ ಕೊಂಡ :** ನಲವಾರು ಗ್ರಾಮದಲ್ಲಿ ಮಾಡಬೇಕೆಂಬ ಅಪೇಕ್ಷೆ ಜನರಿಗಿದೆ. ಅಲ್ಲಿ ಯಾವಾಗ ಪ್ರಾರಂಭ ಮಾಡಬೇಕು ಎನ್ನುವುದು ತಮ್ಮ ಅಭಿಪ್ರಾಯ?

**ಶ್ರೀ ಕೆ. ನಾಗಪ್ಪ ಆಳ್ವ :** ಕೊಲ್ಲೂರು ಗ್ರಾಮದಲ್ಲಿ ಮಾಡಬೇಕೆಂದು ಒಂದು ಸಲ ಅಭಿಪ್ರಾಯಪಟ್ಟು ಎರಡನೆಯ ಸಲ ನಲವಾರು ಗ್ರಾಮದಲ್ಲಿ ಮಾಡಬೇಕೆಂದು ಶಿಫಾರಸ್ಸು ಮಾಡಿದ್ದಾರೆ. ಈ ವಿಷಯದಲ್ಲಿ ಸಂಪೂರ್ಣವಾಗಿ ಪರಿಶೀಲನೆ ನಡೆಸಿ ತೀರ್ಮಾನ ತೆಗೆದುಕೊಳ್ಳಬೇಕು.

**ಶ್ರೀ ನಾರಾಯಣಪ್ಪ ಕೊಂಡ :** ಗುಲ್ಬರ್ಗ ಜಿಲ್ಲಾ ಪರಿಷತ್ತಿನವರು ನಲವಾರು ಗ್ರಾಮದಲ್ಲಿ ಮಾಡುವುದು ಉತ್ತಮವೆಂದು ಅಭಿಪ್ರಾಯಪಟ್ಟು ಸರ್ಕಾರಕ್ಕೆ ತಿಳಿಸಿದ್ದಾರಲ್ಲವೇ?

**ಶ್ರೀ ಕೆ. ನಾಗಪ್ಪ ಆಳ್ವ :** ಈ ವಿಷಯ ನನಗೆ ಗೊತ್ತಿಲ್ಲ.

**ಶ್ರೀ ವಿ. ಎಸ್. ಚಟ್ನಳ್ಳಿ** : ಅಕ್ಟೋಬರ್ ತಿಂಗಳ 24ನೇ ತಾರೀಖಿನಲ್ಲಿ ಜಿಲ್ಲಾ ಅಭಿವೃದ್ಧಿ ಕೌನ್ಸಿಲ್‌ನವರು ಸಭೆ ಸೇರಿ ಕೊಲ್ಲೂರು ಗ್ರಾಮದಲ್ಲಿ ಆರೋಗ್ಯ ಘಟಕ ಆಗಬೇಕೆಂದು ತೀರ್ಮಾನ ಮಾಡಿರುವುದು ತಮ್ಮ ಕಡೆ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಅಳ್ವ** : ಆ ವಿಚಾರ ಇಲ್ಲಿಲ್ಲ.

**ಶ್ರೀ ಎಂ. ಪಿ. ಈಶ್ವರಪ್ಪ** : ಆರೋಗ್ಯ ಘಟಕ ಪ್ರಾರಂಭಿಸುವ ವಿಷಯದಲ್ಲಿ ಒಂದು ಸ್ಥಳದಲ್ಲಿ ಮಾಡಬೇಕೆಂದು ತಾಲ್ಲೂಕು ಬೋರ್ಡಿನವರು ತೀರ್ಮಾನ ಮಾಡಿದರು. ಜಿಲ್ಲಾ ಅಭಿವೃದ್ಧಿ ಪರಿಷತ್ತಿನವರು ಕೂಡ ತೀರ್ಮಾನ ಮಾಡಿದರು ಎಂದು ಮಾನ್ಯ ಮಂತ್ರಿಗಳು ಹೇಳಿದರು. ಬೇರೆ ಸ್ಥಳದಲ್ಲಿ ಮಾಡಬೇಕೆಂದು ಈಗ ತೀರ್ಮಾನ ತೆಗೆದುಕೊಂಡಿರುವುದಕ್ಕೆ ಅವರು ಏನಾದರು ಕಾರಣಗಳನ್ನು ಕೊಟ್ಟಿದ್ದಾರೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ತಾಲ್ಲೂಕು ಮಂಡಳಿಯವರು ಒಂದು ಸಲ ಕೊಲ್ಲೂರು ಗ್ರಾಮದಲ್ಲಿ ಆಗಬೇಕೆಂದು ಹೇಳಿದರು. ಕೆಲವು ತಿಂಗಳ ನಂತರ ನಲವಾರು ಗ್ರಾಮದಲ್ಲಿ ಆಗಬೇಕೆಂದು ಹೇಳಿದ್ದಾರೆ. ಅದಕ್ಕೆ ಕೆಲವು ಕಾರಣಗಳನ್ನು ಕೊಟ್ಟಿದ್ದಾರೆ.

**ಶ್ರೀ ಎಂ. ಪಿ. ಈಶ್ವರಪ್ಪ** : ಅವರು ತೀರ್ಮಾನವನ್ನು ಬದಲು ಮಾಡುವುದಕ್ಕೆ ಏನಾದರು ಕಾರಣ ಕೊಟ್ಟಿದ್ದಾರೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಕೆಲವು ಕಾರಣಗಳನ್ನು ಕೊಟ್ಟಿದ್ದಾರೆ. ಅವು ಅಷ್ಟೊಂದು ಸಮಂಜಸವಾಗಿಲ್ಲ.

**ಶ್ರೀ ಎಂ. ಪಿ. ಈಶ್ವರಪ್ಪ** : ತಾಲ್ಲೂಕ್ ಬೋರ್ಡಿನವರ ತೀರ್ಮಾನದ ಮೇಲೆ ಕೊಲ್ಲೂರಿಗೆ ಕೊಡಬೇಕೆಂದು ಆಗಿ, ಅಲ್ಲಿಯವರು ಸ್ಥಳೀಯ ದೇಣಿಗೆಯ ಹಣ ಜಮಾ ಮಾಡಬೇಕೆಂದು ಸರ್ಕಾರದವರು ತಿಳಿಸಿದ ಮೇಲೆ ಅವರು ಹಣವನ್ನು ಕಟ್ಟಿದ್ದಾರೆ, ಎಂದು ಉತ್ತರ ಕೊಟ್ಟರು. ಸರ್ಕಾರದವರು ಎಲ್ಲಿಗೆ ಹೆಲ್ತ್ ಯೂನಿಟ್ ಕೊಡಬೇಕೆಂದು ಸ್ಥಳವನ್ನು ನಿರ್ಧಾರ ಮಾಡುವಾಗ ಹಣ ಇಂಥವರು ಕಟ್ಟಬೇಕೆಂದು ಹೇಳಿದ ಮೇಲೆ, ಅದು ತೀರ್ಮಾನವಾದ ಹಾಗೆಯೇ ಅಲ್ಲವೇ?

**ಶ್ರೀ ಕೆ. ನಾಗಪ್ಪ ಆಳ್ವ** : ಹೌದು, ಅದೇ ರೀತಿ ಮಾಡುವುದು.

**ಶ್ರೀ ಎಂ. ಪಿ. ಈಶ್ವರಪ್ಪ** : ಒಂದು ಸಲ ಆದದ್ದನ್ನು ಬದಲಾವಣೆ ಮಾಡುವುದಕ್ಕೆ ಕಾರಣವೇನು?

**ಶ್ರೀ ಕೆ. ನಾಗಪ್ಪ ಆಳ್ವ** : ನಾವು ಆ ತೀರ್ಮಾನಕ್ಕೆ ಇನ್ನೂ ಬಂದಿಲ್ಲ.

ಶ್ರೀ ಎಂ. ಪಿ. ಈಶ್ವರಪ್ಪ : ಕೊಲ್ಲೂರಿನಲ್ಲಿ ಹೆಲ್ತ್ ಯೂನಿಟ್ ಮಾಡಬೇಕೆಂದು ತಾಲ್ಲೂಕ್ ಬೋರ್ಡ್ ತೀರ್ಮಾನ ಮಾಡಿ, ತಾವು ಕೊಲ್ಲೂರಿನವರಿಗೆ ಸ್ಥಳದ ಹಣವನ್ನು ಸ್ಥಳೀಯ ದೇಣಿಗೆ ಕೊಡಬೇಕೆಂದು ತಿಳಿಸಿದಿರಿ. ಅಂದಮೇಲೆ ಆ ಗ್ರಾಮಕ್ಕೆ ಹೆಲ್ತ್ ಯೂನಿಟ್ ಕೊಟ್ಟಿದ್ದೇವೆ. ಹಣವನ್ನು ಕಟ್ಟಿದರೆ, ಎಂದು ಆಯಿತು. ಒಂದು ಸಲ ಒಪ್ಪಿಕೊಂಡ ಮೇಲೆ ಅದನ್ನು ಬದಲಾವಣೆ ಮಾಡುವುದಕ್ಕೆ ಕಾರಣವೇನು? ಅದೇ ರೀತಿ ತಾಲ್ಲೂಕ್ ಬೋರ್ಡ್ ಅಥವಾ ಜಿಲ್ಲಾ ಅಭಿವೃದ್ಧಿ ಪರಿಷತ್ತಿನವರು ಪದೇ ಪದೇ ತೀರ್ಮಾನ ಮಾಡುತ್ತಿದ್ದರೆ ನಾಲ್ಕಾರು ಸ್ಥಳದಿಂದ ಹಣ ಕಟ್ಟಬೇಕೆಂದು ಹೇಳಿದರೆ ಎಲ್ಲರಿಗೂ ಆರೋಗ್ಯ ಘಟಕ ಕೊಡುವುದಕ್ಕಾಗುವುದಿಲ್ಲ. ತೀರ್ಮಾನ ತೆಗೆದುಕೊಳ್ಳುವುದಕ್ಕೆ ಇಷ್ಟು ನಿಧಾನವೇಕೆ? ಹಣ ಕಟ್ಟಿಸಿಕೊಂಡು ಆಮೇಲೆ ಬದಲಾವಣೆ ಮಾಡುವುದಕ್ಕೆ ಕಾರಣವೇನು? ಸರ್ಕಾರ ಇದನ್ನೆಲ್ಲಾ ಪರ್ಯಾಲೋಚನೆ ಮಾಡಲಿಲ್ಲವೇ?

ಶ್ರೀ ಕೆ. ನಾಗಪ್ಪ ಆಳ್ವ : ಆ ವಿಚಾರದಲ್ಲಿ ತೀರ್ಮಾನಕ್ಕೆ ಬರಬೇಕಾಗಿದೆ. ಸರ್ಕಾರದವರು ಇಂಥ ಸ್ಥಳದಲ್ಲಿ ಮಾಡುತ್ತೇವೆಂಬುದಾಗಿ ತಿಳಿಸಿಲ್ಲ. ತಾಲ್ಲೂಕ್ ಬೋರ್ಡಿನವರ ಉತ್ತೇಜನದಿಂದ, ಆ ಊರಿನವರ ಸಹಕಾರದಿಂದಲೂ ಹಣವನ್ನು ಕಟ್ಟಿದ್ದಾರೆ. ಆಮೇಲೆ ಅಲ್ಲಿ ಯಾವ ಯಾವ ಕಾರಣಗಳೋ ಬಂದು ಈ ತರಹ ಠರಾವನ್ನು ತಾಲ್ಲೂಕ್ ಬೋರ್ಡಿನವರು ಮಾಡಿದ್ದಾರೆ. ಅದರ ಬಗ್ಗೆ ತನಿಖೆ ನಡೆಸುತ್ತಿದ್ದೇವೆ.

ಶ್ರೀ ಎಂ. ಪಿ. ಈಶ್ವರಪ್ಪ : ಸರ್ಕಾರದವರು ಕೇಳಿದಮೇಲೆ ಹಣ ಕಟ್ಟಿದರು ಎಂದು ಮಾನ್ಯ ಮಂತ್ರಿಗಳು ಹೇಳಿದರು. ಹಾಗೆ ಉತ್ತರ ಕೊಡಲಾಗಿದೆ. ಅದು ಸರಿಯಾದ ಉತ್ತರವಲ್ಲದಿದ್ದರೆ, ಸಚಿವರು ಅದನ್ನು ಸರಿಪಡಿಸಬಹುದು.

ಶ್ರೀ ಕೆ. ನಾಗಪ್ಪ ಆಳ್ವ: ಸರ್ಕಾರ ತೆಗೆದುಕೊಳ್ಳುವ ಕ್ರಮಕ್ಕೂ ಮತ್ತು ಇಲಾಖೆ ತೆಗೆದುಕೊಳ್ಳುವ ಕ್ರಮಕ್ಕೂ ವ್ಯತ್ಯಾಸವಿದೆ.

ಶ್ರೀ ಎಂ.ಪಿ. ಈಶ್ವರಪ್ಪ: ಇಲಾಖೆಗಳು ಸರ್ಕಾರದ ಭಾಗಗಳಾಗಿವೆ.

ಶ್ರೀ ಕೆ. ನಾಗಪ್ಪ ಆಳ್ವ: ಸರ್ಕಾರ ತೆಗೆದುಕೊಳ್ಳುವ ನಿರ್ಧಾರ ಮತ್ತು ಈ ವಿಷಯಗಳ ಮೇಲೆ ಇಲಾಖೆಗಳು ತಮ್ಮ ಅಭಿಪ್ರಾಯವನ್ನು ನೀಡಲು ಪ್ರಯತ್ನಿಸುವುದರ ನಡುವೆ ಸ್ವಲ್ಪ ಮಟ್ಟಿನ ವ್ಯತ್ಯಾಸವಿದೆಯೆಂಬುದನ್ನು ನನ್ನ ಸ್ನೇಹಿತರು ಅರ್ಥಮಾಡಿಕೊಳ್ಳುವರು.

**ಶ್ರೀ ಎಂ.ಪಿ. ಈಶ್ವರಪ್ಪ:** ಸರ್ಕಾರವು ಮೊದಲು ಸ್ಥಳವನ್ನು ನಿರ್ಧರಿಸಿ ನಂತರ ಆಯ್ಕೆ ಮಾಡಬಹುದಾದ ಯಾವುದೇ ಸ್ಥಳದ ಜನರನ್ನು ಸ್ಥಳೀಯ ಕೊಡುಗೆ ನೀಡಬೇಕೆಂದು ಏಕೆ ಕೇಳಬಾರದು?

**ಶ್ರೀ ಕೆ. ನಾಗಪ್ಪ ಆಳ್ವ:** ಜನರ ಮನವಿಯ ಮತ್ತು ಬೇಡಿಕೆಗಳ ಮೇಲೆ ಮಾತ್ರವೇ ಈ ವಿಷಯಗಳನ್ನು ಪರಿಶೀಲಿಸಲಾಗುತ್ತಿದೆ ಮತ್ತು ಕೊನೆಯಲ್ಲಿ ಸರ್ಕಾರ ಒಂದು ನಿರ್ಧಾರವನ್ನು ತೆಗೆದುಕೊಳ್ಳುತ್ತದೆ.

**ಶ್ರೀ ಜೆ.ಬಿ. ಮಲ್ಲಾರಾಧ್ಯ:** ಒಂದು ಇಲಾಖೆಯು ತೆಗೆದುಕೊಳ್ಳುವ ಕ್ರಮವು ಸರ್ಕಾರವನ್ನು ಒಳಗೊಳ್ಳುವುದಿಲ್ಲವೆಂದು ಸಚಿವರು ತಿಳಿಸಿದ್ದಾರೆ. ಒಬ್ಬ ಸರ್ಕಾರಿ ಅಧಿಕಾರಿಯು ಇದನ್ನು ಮಾಡಿದರೆ ಮತ್ತು ಒಬ್ಬ ಅಧಿಕಾರಿಯು ತೆಗೆದುಕೊಂಡ ಜವಾಬ್ದಾರಿಯನ್ನು ಒಪ್ಪಿಕೊಳ್ಳಲು ಸರ್ಕಾರದ ಮಟ್ಟದಲ್ಲಿ ಸಚಿವರು ನಿರಾಕರಿಸಿದರೆ, ಅದು ಪ್ರಜಾಪ್ರಭುತ್ವದ ಪರಿಕಲ್ಪನೆಗೆ ವಿರುದ್ಧವಾದದ್ದೆಂದು ನಾನು ಭಾವಿಸುತ್ತೇನೆ.

**ಶ್ರೀ ಕೆ. ನಾಗಪ್ಪ ಆಳ್ವ:** ವಿವಿಧ ಮಟ್ಟಗಳಲ್ಲಿ ವಿವಿಧ ಸಂಸ್ಥೆಗಳಿರುತ್ತವೆ. ನಾವು ಸ್ಥಳವನ್ನು ನಿರ್ಧರಿಸುವುದಕ್ಕೆ ಮುಂಚೆ ಈ ಎಲ್ಲಾ ವಿಚಾರಗಳನ್ನು ಪರಿಗಣನೆಗೆ ತೆಗೆದುಕೊಳ್ಳಬೇಕು. ಇವು ವಿವಿಧ ಮಟ್ಟಗಳಲ್ಲಿ ನಡೆದಿವೆ. ಪಂಚಾಯತಿಗಳ ಜನರು ಆ ಹಣವನ್ನು ಕಳುಹಿಸಿದ್ದಾರೆ ಮತ್ತು ಆ ನಂತರ ಆರೋಗ್ಯ ಇಲಾಖೆ, ಆಮೇಲೆ ತಾಲ್ಲೂಕು ಮಂಡಲಿ ಮತ್ತೆ ಅಭಿವೃದ್ಧಿ ಪರಿಷತ್ತು, ಹೀಗೆ ವಿವಿಧ ಹಂತಗಳಲ್ಲಿ ವಿವಿಧ ಸಮೂಹಗಳು ಈ ವಿಷಯಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ಹೊಂದಲು ಪ್ರಯತ್ನಿಸುತ್ತಿವೆ. ಪರಿಸ್ಥಿತಿಯ ಯಥಾರ್ಥತೆಯನ್ನು ತಿಳಿಯುವುದು ಸರ್ಕಾರಕ್ಕೆ ಸೇರಿದ್ದು. ಅದರಿಂದಾಗಿಯೇ ಸಮಯ ವ್ಯರ್ಥವಾಗುತ್ತಿದೆ ಮತ್ತು ನಾವು ಆ ಅಂಶವನ್ನು ಗಣನೆಗೆ ತೆಗೆದುಕೊಳ್ಳುತ್ತಿದ್ದೇವೆ.

**ಶ್ರೀ ಜೆ.ಬಿ. ಮಲ್ಲಾರಾಧ್ಯ:** ಈ ಹಣವನ್ನು ಯಾರ ಸೂಚನೆಯ ಮೇರೆಗೆ ಖಜಾನೆಯಲ್ಲಿ ಠೇವಣಿ ಇಡಲಾಗಿದೆ? ಇದು ಸ್ಥಳೀಯ ಅಧಿಕಾರಿಗಳ ಸೂಚನೆಯ ಮೇರೆಗೋ ಅಥವಾ ಜಿಲ್ಲಾಧಿಕಾರಿಗಳ ಸೂಚನೆಯ ಮೇರೆಗೋ? ಹಣವನ್ನು ಜಮೆ ಮಾಡಲು ಯಾರಾದರೊಬ್ಬರು ಅನುಮತಿ ನೀಡಿರಲೇಬೇಕಲ್ಲವೇ?

**ಶ್ರೀ ಕೆ. ನಾಗಪ್ಪ ಆಳ್ವ:** ಈ ವಿಷಯದಲ್ಲಿ ಇದನ್ನು ಕೊಲ್ಲೂರಿನಲ್ಲಿ ನಡೆಸಲು ತಾಲ್ಲೂಕು ಮಂಡಲಿಯು ನಿರ್ಧರಿಸಿತು. ಅವರು ಜನರನ್ನು ತಾವಾಗಿ ಬಂದು ಹಣವನ್ನು ಠೇವಣಿ ಇಡಲು ಪ್ರೋತ್ಸಾಹಿಸಿದರು. ಠೇವಣಿಯಾದ ಹಣ 12,500 ರೂ. ಆ ನಂತರ ತಾಲ್ಲೂಕು ಮಂಡಳಿಯು ನಿರ್ಣಯವನ್ನು ಸಹ ಜಾರಿಗೊಳಿಸಿತು. ತರುವಾಯ ಅವರು ನಿರ್ಣಯವನ್ನು ಬದಲಾಯಿಸಿದರು.

**ಶ್ರೀ ವಿ. ಎಸ್. ಚಟ್ನಳ್ಳಿ :** ದುಡ್ಡು ಕೊಡುವುದಕ್ಕೆ ಸರ್ಕಾರದವರೇ ಅವರಿಗೆ ನೋಟೀಸು ಕೊಟ್ಟಿದ್ದುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ :** ಆ ಇನ್‌ಫರ್‌ಮೇಷನ್ ಇಲ್ಲಿಲ್ಲ.

**ಶ್ರೀ ಎಂ.ಪಿ. ಈಶ್ವರಪ್ಪ:** ಸರ್ಕಾರವು ಹಣವನ್ನು ಠೇವಣಿ ಇಡುವಂತೆ ಆ ನಿರ್ದಿಷ್ಟ ಸ್ಥಳದ ಜನರನ್ನು ಕೋರಿದಲ್ಲಿ, ಈ ಘಟಕವನ್ನು ಪ್ರಾರಂಭಿಸುವ ಸ್ಥಳವಾಗಿ ಕೊಲ್ಲೂರನ್ನು ಆರಿಸಿಕೊಳ್ಳಲು ಸರ್ಕಾರವು ನಿರ್ಧರಿಸಿದೆಯೆಂದು ನಾವು ತಿಳಿಯಬೇಕೆ?

**ಶ್ರೀ ಕೆ. ನಾಗಪ್ಪ ಆಳ್ವ:** ಪರಿಸ್ಥಿತಿಯನ್ನು ಪರಿಶೀಲಿಸಬೇಕಿದೆ.

**ಶ್ರೀ ಕೇಶವರಾವ್ ನಿಟ್ಟೂರ್‌ಕರ್:** ಈ ವಿಷಯದಲ್ಲಿ ಭಿನ್ನಾಭಿಪ್ರಾಯ ಇರುವುದನ್ನು ದೃಷ್ಟಿಯಲ್ಲಿಟ್ಟುಕೊಂಡು, ಒಂದು ನಿರ್ದಿಷ್ಟ ಸ್ಥಳಕ್ಕಾಗಿ ಆರೋಗ್ಯ ಘಟಕವನ್ನು ಪ್ರಾರಂಭಿಸಲು ನಿರ್ಧರಿಸುವುದಕ್ಕೆ ಏನೆಲ್ಲವನ್ನು ಪರಿಗಣಿಸಬೇಕಾಗುತ್ತದೆಂದು ಸರ್ಕಾರವು ತಿಳಿಸುವುದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಸ್ಥಳೀಯ ಜನರ ಅಭಿಪ್ರಾಯ, ತಾಲ್ಲೂಕು ಮಂಡಳಿಯ ಅಭಿಪ್ರಾಯ ಮತ್ತು ಅದಾದ ನಂತರ ಇಲಾಖೆಯ ತಾಂತ್ರಿಕ ಅಭಿಪ್ರಾಯವನ್ನು ಪರಿಗಣಿಸಬೇಕಾಗುತ್ತದೆ. ಆ ಬಳಿಕ ಪ್ರಾಥಮಿಕ ಆರೋಗ್ಯ ಕೇಂದ್ರವು 60ರಿಂದ 70,000 ಜನಸಂಖ್ಯೆಯನ್ನು ಒಳಗೊಳ್ಳಬೇಕು. ಆರೋಗ್ಯ ಘಟಕವು 15,000 ಜನಸಂಖ್ಯೆಯನ್ನು ಒಳಗೊಳ್ಳಬೇಕು. ಈ ಎಲ್ಲಾ ವಿಷಯಗಳನ್ನು ಅವಲೋಕಿಸಬೇಕಿದೆ. ಕೊನೆಯದಾಗಿ, ಸರ್ಕಾರವು ನಿರ್ಧಾರವನ್ನು ತೆಗೆದುಕೊಳ್ಳುತ್ತದೆ.

**ಶ್ರೀ ಕೇಶವ್‌ರಾವ್ ನಿಟ್ಟೂರ್‌ಕರ್:** ಕೊಲ್ಲೂರು ಮತ್ತು ನಲ್ಲವಾರಿನ ನಡುವೆ ಸೆಣಸಾಟವಾಗಿರುವ ಸಂಗತಿಯನ್ನು ನಾನು ಗಮನಿಸಿದ್ದೇನೆ. ಸರ್ಕಾರವು ದಯವಿಟ್ಟು ಎರಡು ಸ್ಥಳಗಳನ್ನು ಪರಿಶೀಲನೆ ಮಾಡಿ ವಿಷಯವನ್ನು ಇತ್ಯರ್ಥಗೊಳಿಸುವುದೆ?

**ಶ್ರೀ ಕೆ. ನಾಗಪ್ಪ ಆಳ್ವ:** ವಾಸ್ತವ ಪರಿಸ್ಥಿತಿ ಹೀಗಿದೆ ಸ್ವಾಮಿ.

## ವೈದ್ಯಕೀಯ ಕಾಲೇಜುಗಳಲ್ಲಿನ ಸ್ನಾತಕೋತ್ತರ ವಿಭಾಗಗಳು
## ವಿ.ಪ. (04-01-1963)

# ರಾಜ್ಯದ ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ವಿಭಾಗಗಳು

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ನಾಮನಿರ್ದೇಶಿತ):** ಸರ್ಕಾರವು ದಯವಿಟ್ಟು ಇದನ್ನು ತಿಳಿಸುವುದೆ:-

(ಎ) ರಾಜ್ಯದ ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ವಿಭಾಗಗಳ ಸಂಖ್ಯೆ ಮತ್ತು ಹೆಸರುಗಳು;

(ಬಿ) ಈ ಇಲಾಖೆಗಳಲ್ಲಿ ಕೆಲಸ ಮಾಡುತ್ತಿರುವ ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು ಮತ್ತು ರೀಡರ್‌ಗಳ ಸಂಖ್ಯೆ;

(ಸಿ) ಈ ನೇಮಕಾತಿಗಳನ್ನು ಯಾವ ಆಧಾರದ ಮೇಲೆ ಮಾಡಲಾಗಿದೆ;

(ಡಿ) ಲೋಕಸೇವಾ ಆಯೋಗದಿಂದ ಜಾಹಿರಾತಿನ ನಂತರ ಖಾಲಿ ಹುದ್ದೆಗಳನ್ನು ತುಂಬಲಾಗಿದೆಯೆ;

(ಇ) ಇಲ್ಲದಿದ್ದರೆ ಅದಕ್ಕೆ ಕಾರಣಗಳು?

**ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು)-**

(ಎ) ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ (ಬಿಎಂಸಿ) ಮೂರು ಮತ್ತು ಮೈಸೂರಿನ ವೈದ್ಯಕೀಯ ಕಾಲೇಜಿನಲ್ಲಿ ಐದು ಇಲಾಖೆಗಳ ಹೆಸರುಗಳ ವಿವರವನ್ನು ಈ ಕೆಳಗೆ ನೀಡಲಾಗಿದೆ:

**I. ಬೆಂಗಳೂರು ವೈದ್ಯಕೀಯ ಕಾಲೇಜು**

(1) ಸಾಮಾನ್ಯ ಶಸ್ತ್ರಚಿಕಿತ್ಸೆ

(2) ಸಾಮಾನ್ಯ ವೈದ್ಯಶಾಸ್ತ್ರ ಮತ್ತು

(3) ನೇತ್ರ ವಿಜ್ಞಾನ

**II. ಮೈಸೂರು ವೈದ್ಯಕೀಯ ಕಾಲೇಜು**

(1) ಸಾಮಾನ್ಯ ಶಸ್ತ್ರಚಿಕಿತ್ಸೆ

(2) ಸಾಮಾನ್ಯ ವೈದ್ಯಶಾಸ್ತ್ರ

(3) ನೇತ್ರ ವಿಜ್ಞಾನ

(4) ಶರೀರ ರಚನಾ ಶಾಸ್ತ್ರ

(5) ಔಷಧ ಶಾಸ್ತ್ರ

**(ಬಿ) ಬೆಂಗಳೂರು ವೈದ್ಯಕೀಯ ಕಾಲೇಜು**

**I. ಸಾಮಾನ್ಯ ಶಸ್ತ್ರಚಿಕಿತ್ಸೆಯ ವಿಭಾಗ.–**

(1) ಪ್ರಾಧ್ಯಾಪಕರು – ಒಂದು

(2) ರೀಡರ್ – ಒಂದು

(3) ಸಹಾಯಕ ಪ್ರಾಧ್ಯಾಪಕರ ಯಾವುದೇ ಹುದ್ದೆ ಇಲ್ಲ.

**II. ಸಾಮಾನ್ಯ ವೈದ್ಯಶಾಸ್ತ್ರದ ವಿಭಾಗ.–**

(1) ಪ್ರಾಧ್ಯಾಪಕರು – ಒಂದು

(2) ರೀಡರ್ – ಒಂದು

(3) ಸಹಾಯಕ ಪ್ರಾಧ್ಯಾಪಕರ ಯಾವುದೇ ಹುದ್ದೆ ಇಲ್ಲ.

**III. ನೇತ್ರ ವಿಜ್ಞಾನದ ವಿಭಾಗ.–**

(1) ಪ್ರಾಧ್ಯಾಪಕರು – ಒಂದು

(2) ಸಹಾಯಕ ಪ್ರಾಧ್ಯಾಪಕರು – ಒಂದು

(3) ರೀಡರ್‌ರ ಯಾವುದೇ ಹುದ್ದೆ ಇಲ್ಲ.

**ಮೈಸೂರು ವೈದ್ಯಕೀಯ ಕಾಲೇಜು**

I. **ಸಾಮಾನ್ಯ ಶಸ್ತ್ರಚಿಕಿತ್ಸೆಯ ಇಲಾಖೆ.–**

(1) ಪದವಿಪೂರ್ವ ಶಿಕ್ಷಣದ ಶಸ್ತ್ರಚಿಕಿತ್ಸಾ ವಿಭಾಗದ ಈಗಿನ ಮುಖ್ಯಸ್ಥರು ಸ್ನಾತಕೋತ್ತರ ಪದವಿ ವಿಭಾಗಕ್ಕೆ ಪ್ರಾಧ್ಯಾಪಕರೂ ಸಹ ಆಗಿದ್ದಾರೆ.

(2) ರೀಡರ್ – ಒಂದು

(3) ಸಹಾಯಕ ಪ್ರಾಧ್ಯಾಪಕರ ಯಾವುದೇ ಹುದ್ದೆ ಇಲ್ಲ.

## II. ಸಾಮಾನ್ಯ ವೈದ್ಯಶಾಸ್ತ್ರದ ಯಾವುದೇ ಹುದ್ದೆ ಇಲ್ಲ.

(1) ಪದವಿಪೂರ್ವ ಶಿಕ್ಷಣದ ವೈದ್ಯಶಾಸ್ತ್ರ ವಿಭಾಗದ ಈಗಿನ ಮುಖ್ಯಸ್ಥರು ಸ್ನಾತಕೋತ್ತರ ವಿಭಾಗಕ್ಕೆ ಪ್ರಾಧ್ಯಾಪಕರೂ ಸಹ ಆಗಿದ್ದಾರೆ.

(2) ರೀಡರ್ – ಒಂದು

(3) ಸಹಾಯಕ ಪ್ರಾಧ್ಯಾಪಕರ ಯಾವುದೇ ಹುದ್ದೆ ಇಲ್ಲ.

## III. ನೇತ್ರ ವಿಜ್ಞಾನದ ವಿಭಾಗ

ಪದವಿಪೂರ್ವ ಶಿಕ್ಷಣದ ನೇತ್ರ ವಿಜ್ಞಾನದ ಈಗಿನ ಸಹ ಪ್ರಾಧ್ಯಾಪಕರು ಮತ್ತು ಸಹಾಯಕ ಪ್ರಾಧ್ಯಾಪಕರು ಸ್ನಾತಕೋತ್ತರ ವಿಭಾಗದ ಪ್ರಭಾರದಲ್ಲಿದ್ದಾರೆ.

## IV. ಶರೀರ ರಚನಾ ಶಾಸ್ತ್ರದ ವಿಭಾಗ.–

(1) ಪದವಿಪೂರ್ವ ಶಿಕ್ಷಣದ ಔಷಧಶಾಸ್ತ್ರ ವಿಭಾಗದ ಈಗಿನ ಮುಖ್ಯಸ್ಥರು ಸ್ನಾತಕೋತ್ತರ ವಿಭಾಗದ ಪ್ರಾಧ್ಯಾಪಕರೂ ಆಗಿದ್ದಾರೆ.

(2) ರೀಡರ್ – ಒಂದು

(3) ಸಹಾಯಕ ಪ್ರಾಧ್ಯಾಪಕರ ಹುದ್ದೆ ಇಲ್ಲ.

## V. ಔಷಧಶಾಸ್ತ್ರ ವಿಭಾಗ.–

(1) ಪದವಿಪೂರ್ವ ಶಿಕ್ಷಣದ ಔಷಧಶಾಸ್ತ್ರ ವಿಭಾಗದ ಈಗಿನ ಮುಖ್ಯಸ್ಥರು ಸ್ನಾತಕೋತ್ತರ ವಿಭಾಗದ ಪ್ರಾಧ್ಯಾಪಕರೂ ಆಗಿದ್ದಾರೆ.

(2) ರೀಡರ್ – ಒಂದು – ಖಾಲಿ ಇದೆ

(3) ಸಹಾಯಕ ಪ್ರಾಧ್ಯಾಪಕರ ಹುದ್ದೆ ಇಲ್ಲ.

(ಸಿ) ವಿದ್ಯಾರ್ಹತೆ, ಬೋಧನಾ ಅನುಭವ ಮತ್ತು ಜ್ಯೇಷ್ಠತೆಗಳ ಆಧಾರದ ಮೇಲೆ

(ಡಿ) ಇಲ್ಲ

(ಇ) ವೈದ್ಯಕೀಯ ಕಾಲೇಜುಗಳಲ್ಲಿನ ಬೋಧನಾ ಸಿಬ್ಬಂದಿಗೆ ಸಂಬಂಧಿಸಿದಂತೆ, ಉದ್ಯೋಗಿ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಅಂತಿಮರೂಪ ಕೊಡುವವರೆಗ ಖಾಲಿ ಹುದ್ದೆಗಳನ್ನು ತಾತ್ಕಾಲಿಕವಾಗಿ ತುಂಬಲು ವ್ಯವಸ್ಥೆ ಮಾಡಲಾಗಿದೆ.

## ನೂತನ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸಿ

# ರಾಜ್ಯದಲ್ಲಿ ಒಂದು ಹೊಸ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸುವುದು

**ಶ್ರೀ ಎಸ್.ಜಿ.ಖೇಳಗಿ (ಸ್ಥಳೀಯ ಪ್ರಾಧಿಕಾರಗಳ ಚುನಾವಣಾ ಕ್ಷೇತ್ರ):** ಸರ್ಕಾರವು ದಯವಿಟ್ಟು ಇವನ್ನು ತಿಳಿಸುವುದೆ:

(ಎ) ಅವರು ರಾಜ್ಯದಲ್ಲಿ ಹೊಸ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಉದ್ದೇಶಿಸಿದ್ದಾರೆಯೆ? ಹಾಗಿದ್ದಲ್ಲಿ, ಎಲ್ಲಿ ಮತ್ತು ಏಕೆ?

(ಬಿ) ವೈದ್ಯಕೀಯ ಕಾಲೇಜನ್ನು ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಹೊಂದುವ ಕೋರಿಕೆಯನ್ನು ಅವರು ಪರಿಗಣಿಸಿದ್ದಾರೆಯೆ; ಮತ್ತು ಹಾಗಿದ್ದಲ್ಲಿ ಅದರ ಫಲಿತಾಂಶವೇನು?

**ಡಾ॥ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು).–**

(ಎ) ಇಲ್ಲ. ಸ್ಥಳ ಮತ್ತು ಕಾರಣಗಳ ಪ್ರಶ್ನೆ ಉದ್ಭವಿಸುವುದಿಲ್ಲ.

(ಬಿ) ಉಂಟಾಗುವುದಿಲ್ಲ.

**ಶ್ರೀ ಎಸ್. ಜಿ. ಖೇಳಗಿ :** ಈ ಹೊಸ ಮೈಸೂರು ರಾಜ್ಯದಲ್ಲಿ ಯಾವ ಡಿವಿಜನ್ನಿನಲ್ಲಿ ಮೆಡಿಕಲ್ ಕಾಲೇಜು ಇಲ್ಲ?

**ಶ್ರೀ ಕೆ. ನಾಗಪ್ಪ ಆಳ್ವ :** ಗುಲ್ಬರ್ಗ ಡಿವಿಜನ್ನಿನಲ್ಲಿಲ್ಲ.

**ಶ್ರೀ ಎಸ್. ಜಿ. ಖೇಳಗಿ :** ಆ ಬಗ್ಗೆ ಆ ಜಿಲ್ಲೆಯಿಂದ ಸರ್ಕಾರಕ್ಕೆ ಮನವಿಗಳು ಬಂದಿವೆಯೋ?

**ಶ್ರೀ ಕೆ. ನಾಗಪ್ಪ ಆಳ್ವ :** ಹೌದು. ಬಂದಿವೆ.

**ಶ್ರೀ ಎಸ್. ಜಿ. ಖೇಳಗಿ :** ಹಾಗಾದರೆ ಸರ್ಕಾರದವರು ಆ ಬಗ್ಗೆ ಏನು ಕ್ರಮವನ್ನು ತೆಗೆದುಕೊಂಡಿದ್ದಾರೆ?

**ಶ್ರೀ ಕೆ. ನಾಗಪ್ಪ ಆಳ್ವ :** ಅದನ್ನು ಆಲೋಚನೆ ಮಾಡುತ್ತಿದ್ದೇವೆ.

**ಶ್ರೀ ಎ. ಆರ್. ನಾಯ್ಡು :** ಸಾಮಾನ್ಯವಾಗಿ ಒಂದು ಡಿವಿಜನ್ನಿನಲ್ಲಿ ಕಾಲೇಜು ಮಾಡಬೇಕಾಗುತ್ತದೆ. ಬೇಕಾದರೆ ಯಾವ ತರಹ ಯೋಚನೆ ಮಾಡುತ್ತೀರಾ?

ಶ್ರೀ ಕೆ. ನಾಗಪ್ಪ ಆಳ್ವ : ಕಾಲೇಜು ಮಾಡಬೇಕಾದರೆ ಹಲವು ವಿಷಯಗಳನ್ನು ಆಲೋಚನೆ ಮಾಡಬೇಕಾಗುತ್ತದೆ. ಬಹು ಮುಖ್ಯವಾಗಿ ಹಣದ ವಿಷಯ.

ಶ್ರೀ ಜಿ. ವಿ. ಅಂಜನಪ್ಪ : ಉತ್ತರದಲ್ಲಿ "ಇಲ್ಲ" ಎಂದು ಹೇಳಿ ಈಗ ಆ ಬಗ್ಗೆ ಯೋಚನೆ ಮಾಡುತ್ತಿದ್ದೇವೆಂದು ಹೇಳುತ್ತೀರಿ. ಇದರ ಅರ್ಥವೇನು?

ಶ್ರೀ ಕೆ. ನಾಗಪ್ಪ ಆಳ್ವ : ಅದರ ಅರ್ಥವೇನಿಲ್ಲ. ಆ ವಿಷಯವನ್ನು ಆಲೋಚನೆ ಮಾಡುತ್ತಿದ್ದೇವೆ.

ಶ್ರೀ ಎಂ.ಪಿ. ಈಶ್ವರಪ್ಪ: ರಾಜ್ಯದಲ್ಲಿ ವೈದ್ಯಕೀಯ ಕಾಲೇಜನ್ನು ಸ್ಥಾಪಿಸಲು ಸರ್ಕಾರವು ಯಾರೇ ಖಾಸಗಿ ಸಂಸ್ಥೆಗೆ ಅನುಮತಿ ನೀಡಲು ಉದ್ದೇಶಿಸುತ್ತಿದೆಯೆ?

ಶ್ರೀ ಕೆ. ನಾಗಪ್ಪ ಆಳ್ವ: ಖಾಸಗೀ ಸಂಸ್ಥೆಗಳಿಂದ ಮನವಿಗಳಿದ್ದವು. ಅವೂ ಸಹ ಚರ್ಚೆಯ ಹಂತದಲ್ಲಿಯೇ ಇವೆ.

ಶ್ರೀ ಎಂ.ಪಿ. ಈಶ್ವರಪ್ಪ: ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಖಾಸಗೀ ಶಿಕ್ಷಣ ಸಂಸ್ಥೆಗಳಿಗೆ ಅನುಮತಿ ನೀಡಲು ಸರ್ಕಾರವು ಯಾವುದೇ ಖಚಿತ ನಿರ್ಧಾರವನ್ನು ತೆಗೆದುಕೊಂಡಿದೆಯೆ?

ಶ್ರೀ ಕೆ. ನಾಗಪ್ಪ ಆಳ್ವ: ಇಲ್ಲಿಯವರೆಗೆ ಯಾವುದೇ ನಿರ್ಧಾರ ತೆಗೆದುಕೊಂಡಿಲ್ಲ.

ಶ್ರೀ ಎಂ.ಪಿ. ಈಶ್ವರಪ್ಪ: ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಖಾಸಗೀ ಸಂಸ್ಥೆಗೆ ಅನುಮತಿ ನೀಡುವಲ್ಲಿ ಮಾನದಂಡಗಳೇನು?

ಶ್ರೀ ಕೆ. ನಾಗಪ್ಪ ಆಳ್ವ: ಇದು ಬಹಳ ಸಾಮಾನ್ಯವಾದ ಪ್ರಶ್ನೆ.

ಶ್ರೀ ಜೆ.ಬಿ. ಮಲ್ಲಾರಾಧ್ಯ: ಕರ್ನಾಟಕ ಶಿಕ್ಷಣ ಸಂಘವು ಗುಲ್ಬರ್ಗದಲ್ಲಿ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಯಾವುದೇ ನಿರ್ದಿಷ್ಟ ಪ್ರಸ್ತಾವವನ್ನು ಸಲ್ಲಿಸಿದೆಯೆ?

ಶ್ರೀ ಕೆ. ನಾಗಪ್ಪ ಆಳ್ವ: ಹೌದು.

ಶ್ರೀ ಜೆ.ಬಿ. ಮಲ್ಲಾರಾಧ್ಯ: ಅವರ ಪ್ರಸ್ತಾವವೇನು?

ಶ್ರೀ ಕೆ. ನಾಗಪ್ಪ ಆಳ್ವ: ಸರ್ಕಾರವು ಅವರಿಗೆ ಚಿಕಿತ್ಸಾ ಸಂಬಂಧವಾದ ಸೌಲಭ್ಯಗಳು ಮತ್ತು ಹಣದ ವಿಷಯದಲ್ಲಿ ಸಹಾಯ ಮಾಡಲು ತಯಾರಾಗಿದ್ದಲ್ಲಿ ಅವರು ಕಾಲೇಜನ್ನು ಪ್ರಾರಂಭಿಸಲು ಸಿದ್ಧರಿದ್ದಾರೆ.

ಶ್ರೀ ಜೆ.ಬಿ. ಮಲ್ಲಾರಾಧ್ಯ: ಅವರು ಪ್ರಾರಂಭಿಸಲು ಸಿದ್ಧರಾಗಿರುವಂತಹ ಕಟ್ಟುಪಾಡುಗಳ ಸ್ವರೂಪವೇನು?

**ಶ್ರೀ ಕೆ. ನಾಗಪ್ಪ ಆಳ್ವ:** ಯಾವುದೇ ನಿರ್ದಿಷ್ಟ ಕಟ್ಟುಪಾಡುಗಳಿಲ್ಲ.

**ಶ್ರೀ ಎಂ.ಪಿ. ಈಶ್ವರಪ್ಪ:** ನನ್ನ ಪ್ರಶ್ನೆಗೆ ಮಾನ್ಯ ಸಚಿವರು ಅದು ಸಾಮಾನ್ಯ ಪ್ರಶ್ನೆಯೆಂದು ಹೇಳಿದ್ದಾರೆ; ಆದರೆ ಅದು ಹಾಗಲ್ಲ. ನನ್ನ ಪ್ರಶ್ನೆ ಏನಪ್ಪಾ ಅಂದ್ರೆ ಒಂದು ಜಿಲ್ಲೆಯಲ್ಲಿ ಯಾವುದೇ ಖಾಸಗಿ ಸಂಸ್ಥೆಯು ಗ್ರಾಮೀಣ ಸ್ಥಳದಲ್ಲಿ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಮುಂದೆ ಬಂದರೆ ಆ ಸ್ಥಳ ನಿಶ್ಚಯ ಮಾಡಲು ಇರುವಂಥ ಮಾನದಂಡಗಳೇನು? ಎಂಬುದು.

**ಶ್ರೀ ಕೆ. ನಾಗಪ್ಪ ಆಳ್ವ:** ನಾನು ಈಗಾಗಲೇ ಪರಿಸ್ಥಿತಿಯನ್ನು ವಿವರಿಸಿದ್ದೇನೆ. ಸರ್ಕಾರವು ಆಸ್ಪತ್ರೆಗಳ ಮುಖಾಂತರ ಚಿಕಿತ್ಸಾ ಸಂಬಂಧವಾದ ಅನುಕೂಲಗಳನ್ನು ಒದಗಿಸದೆ ಇದ್ದರೆ, ಯಾವುದೇ ಖಾಸಗಿ ಸಂಸ್ಥೆಗೆ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಸಾಧ್ಯವಾಗುವುದಿಲ್ಲ.

**ಶ್ರೀ ಎಂ.ಪಿ. ಈಶ್ವರಪ್ಪ:** ಪ್ರಸ್ತುತ, ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಅನುಕೂಲ ಕಲ್ಪಿಸುವ ಸುಸಜ್ಜಿತವಾಗಿರುವಂಥ ಜಿಲ್ಲೆಗಳಲ್ಲಿರತಕ್ಕ ಆಸ್ಪತ್ರೆ ಯಾವುದು?

**ಶ್ರೀ ಕೆ. ನಾಗಪ್ಪ ಆಳ್ವ:** ಒಂದು ನಿರ್ದಿಷ್ಟ ಜಿಲ್ಲೆ ಅಥವಾ ನಿರ್ದಿಷ್ಟ ಸಂಘಗಳಿಂದ ಮನವಿಗಳು ಬಂದಾಗ ಮಾತ್ರ ಈ ವಿಷಯಗಳನ್ನು ಪರಿಗಣಿಸಲಾಗುವುದು.

**ಶ್ರೀ ಜಿ.ಬಿ. ಮಲ್ಲಾರಾಧ್ಯ:** ಮಾನ್ಯ ಸಚಿವರು, ಕೇವಲ ಎರಡು ಅಥವಾ ಮೂರು ದಿನಗಳ ಹಿಂದೆಯಷ್ಟೇ ವೈದ್ಯಕೀಯ ಕಾಲೇಜಿನ ವಸತಿ ನಿಲಯಕ್ಕೆ ಸಂಬಂಧಿಸಿದ ಒಂದು ಸಮಾರಂಭದಲ್ಲಿ ಸರ್ಕಾರವು ರಾಜ್ಯದಲ್ಲಿ ಮತ್ತೊಂದು ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ನಿರ್ಧಾರ ತೆಗೆದುಕೊಂಡಿದೆಯೆಂದು ಹೇಳಿದರು. ಹಾಗಿದ್ದಲ್ಲಿ, ಸರ್ಕಾರವು ನಿಖರವಾಗಿ ಯಾವ ಜಾಗದಲ್ಲಿ ಅದನ್ನು ಪ್ರಾರಂಭಿಸಲು ಆಲೋಚಿಸಿದೆ.

**ಶ್ರೀ ಬಿ.ಡಿ. ಜತ್ತಿ (ಹಣಕಾಸು ಸಚಿವರು):** ಸರ್ಕಾರವು ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ನಿರ್ಧಾರ ತೆಗೆದುಕೊಂಡಿದೆ ಎಂದು ನಾನು ಹೇಳಿಲ್ಲ. ಸರ್ಕಾರದ ಮುಂದೆ ಪರಿಶೀಲನೆಗಾಗಿ ಒಂದು ಪ್ರಸ್ತಾವವಿದೆ ಎಂದಷ್ಟೇ ನಾನು ಹೇಳಿದ್ದೇನೆ.

**ಶ್ರೀ ಎಂ.ಪಿ. ಈಶ್ವರಪ್ಪ:** ವೈದ್ಯರುಗಳ ಹಿತದೃಷ್ಟಿಯಿಂದ ಸರ್ಕಾರವು ಈ ವಿಷಯದಲ್ಲಿ ಬೇಗನೆ ನಿರ್ಧಾರ ತೆಗೆದುಕೊಳ್ಳುವುದೆ?

(ಉತ್ತರವಿಲ್ಲ)

**ಶ್ರೀ ಹೆಚ್.ಎಫ್. ಕಟ್ಟೀಮನಿ:** ಬೆಂಗಳೂರಿನಲ್ಲಿ ಮೆಡಿಕಲ್ ಕಾಲೇಜು ಸ್ಥಾಪಿಸಲು ಯಾವುದಾದರೂ ಸಂಘ ಮುಂದೆ ಬಂದಿವೆಯೆ?

**ಶ್ರೀ ನಾಗಪ್ಪ ಆಳ್ವ:** ಇದುವರೆಗೂ ಇಲ್ಲ.

**ಶ್ರೀ ಜೆ.ಬಿ. ಮಲ್ಲಾರಾಧ್ಯ:** ಅವುಗಳನ್ನು ಪ್ರಾರಂಭಿಸಲು ಯಾರೇ ಖಾಸಗೀ ವ್ಯಕ್ತಿಗಳು ಮುಂದೆ ಬರದೆ ಇದ್ದರೆ ರಾಜ್ಯದ ಆ ಭಾಗದಲ್ಲಿ ವೈದ್ಯಕೀಯ ಕಾಲೇಜಿನ ಅಗತ್ಯವಿರುವ ಹಿನ್ನೆಲೆಯಲ್ಲಿ ಸರ್ಕಾರವು ಸ್ವಪ್ರೇರಣೆಯಿಂದ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳುವುದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಈ ಪ್ರಶ್ನೆಯನ್ನು ಸರ್ಕಾರವು ಪರ್ಯಾಲೋಚಿಸುತ್ತಿದೆ.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ:** ಯಾವುದೇ ಪ್ರದೇಶದಲ್ಲಿ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಖಾಸಗೀ ಸಂಸ್ಥೆಗಳು ಮುಂದೆ ಬರುತ್ತಿರುವುದಕ್ಕೆ ಸಂಬಂಧಪಟ್ಟಂತೆ ಸರ್ಕಾರದ ಅಭಿಪ್ರಾಯವೇನು? ಅವರು ಅದರ ಪರವಾಗಿದ್ದಾರೆಯೆ ಅಥವಾ ಅದರ ವಿರೋಧವಾಗಿದ್ದಾರೆಯೆ?

**ಶ್ರೀ ಕೆ. ನಾಗಪ್ಪ ಆಳ್ವ:** ಈ ವಿಷಯಗಳನ್ನು ಪರ್ಯಾಲೋಚಿಸಲಾಗುತ್ತಿದೆ.

**ಶ್ರೀ ಕೆ.ಆರ್. ಆಚಾರ್:** ಮಂಗಳೂರು ವೈದ್ಯಕೀಯ ಕಾಲೇಜನ್ನು ತೆರೆಯಲು ಅತ್ಯಂತ ಕಡಿಮೆ ವರ್ಜನ ಸ್ಥಳವಾಗಿದ್ದು, ಇದಕ್ಕೆ ಮಾನ್ಯ ಸಚಿವರು ಒಪ್ಪಿಕೊಳ್ಳುವ ಮನಸ್ಸು ಮಾಡಿದ್ದಾರೆ. ಏಕೆಂದರೆ, ಅಲ್ಲಿ ಅತ್ಯುತ್ತಮವಾದ ಚಿಕಿತ್ಸಾ ಸೌಲಭ್ಯಗಳು ಇವೆ. ಇದು ವಾಸ್ತವ ಸಂಗತಿಯಲ್ಲವೆ?

**ಶ್ರೀ ಕೆ. ನಾಗಪ್ಪ ಆಳ್ವ:** ಅದು ಅವರವರ ಅಭಿಪ್ರಾಯಕ್ಕೆ ಸಂಬಂಧಿಸಿದ ವಿಷಯ.

**ಶ್ರೀ ಕೆ.ಆರ್. ಆಚಾರ್:** ಬೆಂಗಳೂರು ಅಥವಾ ಮೈಸೂರನ್ನು ಹೊರತುಪಡಿಸಿದರೆ, ಬೇರೆ ಯಾವುದೇ ಸ್ಥಳಕ್ಕಿಂತ ಉತ್ತಮವಾದ ಎಲ್ಲಾ ಅಗತ್ಯ ಚಿಕಿತ್ಸಾ ಸೌಲಭ್ಯಗಳೊಂದಿಗೆ ಸುಸಜ್ಜಿತವಾದ ಆಸ್ಪತ್ರೆಯನ್ನು ಮಂಗಳೂರು ಹೊಂದಿದೆ ಎಂಬುದು ವಾಸ್ತವ ಸಂಗತಿಯಲ್ಲವೆ?

**ಶ್ರೀ ಕೆ. ನಾಗಪ್ಪ ಆಳ್ವ:** ಹೌದು.

**ಶ್ರೀ ಕೆ.ಆರ್. ಆಚಾರ್:** ಒಂದು ಕಾಲೇಜನ್ನು ಪ್ರಾರಂಭಿಸಬೇಕಾದರೆ, ಅದನ್ನು ಮಂಗಳೂರಿನಲ್ಲಿ ಪ್ರಾರಂಭಿಸಲು ಸರ್ಕಾರ ಏಕೆ ಇಚ್ಛಿಸುವುದಿಲ್ಲ?

**ಶ್ರೀ ಕೆ. ನಾಗಪ್ಪ ಆಳ್ವ:** ಇತರ ಸ್ಥಳಗಳೊಂದಿಗೆ ಆ ಸ್ಥಳವನ್ನು ಸಹ ಪರಿಗಣಿಸಲಾಗುವುದು.

**ಶ್ರೀ ಕೆ.ಆರ್. ಆಚಾರ್:** ಬಹಳ ದುಬಾರಿ ಡೊನೇಷನ್ ಹಾಗೂ ಫೀಜನ್ನು ವಿಧಿಸುವಂಥ ಒಂದು ಖಾಸಗೀ ಕಾಲೇಜಿದೆಯೆಂಬುದು ವಾಸ್ತವ ಸಂಗತಿಯೆ ಮತ್ತು ಸರ್ಕಾರವು ಮಂಗಳೂರಿನಲ್ಲಿ ಮತ್ತೊಂದು ಕಾಲೇಜನ್ನು ಹೊಂದಲು ಆಲೋಚಿಸುತ್ತಿಲ್ಲವೆಂಬುದು ವಾಸ್ತವ ಸಂಗತಿಯಲ್ಲವೆ ಎಂಬುದನ್ನು ನಾನು ತಿಳಿಯಲು ಇಚ್ಛಿಸುತ್ತೇನೆ.

**ಶ್ರೀ ಕೆ. ನಾಗಪ್ಪ ಆಳ್ವ:** ಅಲ್ಲಿ ಒಂದು ಕಾಲೇಜನ್ನು ಪ್ರಾರಂಭಿಸಲು ಸರ್ಕಾರ ಆಲೋಚಿಸುತ್ತಿಲ್ಲವೆಂದು ನಾನು ಹೇಳಲಿಲ್ಲ. ಇತರ ಸ್ಥಳಗಳೊಂದಿಗೆ ಅದೂ ಸಹ ಸರ್ಕಾರದ ಪರಿಶೀಲನೆಯಲ್ಲಿದೆ.

**ಶ್ರೀ ಎ. ಆರ್. ನಾಯ್ಡು :** ಮೈಸೂರು ದೇಶದಲ್ಲಿ ಡಾಕ್ಟರುಗಳ ಅಭಾವ ಹೆಚ್ಚುತ್ತಿರುವುದರಿಂದ ಹೊರಗಿನವರು ಒಂದು ಇಲ್ಲಿ ಮೆಡಿಕಲ್ ಕಾಲೇಜನ್ನು ತೆರೆಯುವುದಾಗಿ ಹೇಳುವಾಗ ಏಕೆ ಅದಕ್ಕೆ ಅನುಮತಿ ನೀಡಬಾರದು?

**ಶ್ರೀ ಕೆ. ನಾಗಪ್ಪ ಆಳ್ವ :** ಅದನ್ನು ಆಲೋಚನೆ ಮಾಡುತ್ತಿದ್ದೇವೆ.

**ಶ್ರೀ ನಾರಾಯಣಪ್ಪ ಕೊಂಡ :** ಗುಲ್ಬರ್ಗದಲ್ಲಿ ಮೆಡಿಕಲ್ ಕಾಲೇಜು ತೆರೆಯಲು ಹಣ ಮತ್ತು ಜಮೀನು ಕೊಡುವುದಾಗಿ ಅಲ್ಲಿನ ಜನರು ಮುಂದೆ ಬಂದಿದ್ದಾರಲ್ಲವೇ?

**ಶ್ರೀ ಕೆ. ನಾಗಪ್ಪ ಆಳ್ವ :** ಹೌದು.

**ಶ್ರೀ ಕೆ. ನಾರಾಯಣಪ್ಪ ಕೊಂಡ :** ಅಲ್ಲಿನ ಕಾಲೇಜಿನ ಬಗ್ಗೆ ಎಷ್ಟು ದಿವಸದಲ್ಲಿ ತೀರ್ಮಾನ ಕೈಗೊಳ್ಳುತ್ತೀರಿ?

**ಶ್ರೀ ಕೆ. ನಾಗಪ್ಪ ಆಳ್ವ :** ಈಗ ಅದನ್ನು ಹೇಳಲು ಸಾಧ್ಯವಿಲ್ಲ.

**ಶ್ರೀ ಕೆ.ಆರ್. ಆಚಾರ್:** ಮೂರನೇ ಪಂಚವಾರ್ಷಿಕ ಯೋಜನೆಯು ಎರಡು ವೈದ್ಯಕೀಯ ಕಾಲೇಜುಗಳಿಗೆ ಅವಕಾಶ ಕಲ್ಪಿಸುತ್ತದೆ ಎಂಬುದು ವಾಸ್ತವ ಸಂಗತಿಯಲ್ಲವೆ? ಮತ್ತು ಹಾಗಿದ್ದಲ್ಲಿ, ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸುವುದಕ್ಕಾಗಿ ಪರಿಗಣಿಸಲಾದಂಥ ಸ್ಥಳಗಳಾವುವೆಂದು ನಾನು ತಿಳಿಯಬಹುದೆ?

**ಶ್ರೀ ನಾಗಪ್ಪ ಆಳ್ವ:** ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿಯೇ ಒಂದು ವೈದ್ಯಕೀಯ ಕಾಲೇಜಿಗೆ ಅವಕಾಶ ಕಲ್ಪಿಸಲಾಗಿದೆ ಮತ್ತು ಅದನ್ನು ಬಳ್ಳಾರಿಯಲ್ಲಿ ಈಗಾಗಲೇ ಪ್ರಾರಂಭಿಸಲಾಗಿದೆ.

**ಶ್ರೀ ಕೆ.ಆರ್. ಆಚಾರ್:** ಮೂಲ ಯೋಜನೆಯು ಒಂದು ವೈದ್ಯಕೀಯ ಕಾಲೇಜಿನ ಪ್ರಾರಂಭಕ್ಕೆ ಅವಕಾಶ ಕಲ್ಪಿಸಿತು ಮತ್ತು ನಂತರದಲ್ಲಿ ಅದು ಎರಡು

ವೈದ್ಯಕೀಯ ಕಾಲೇಜುಗಳಿಗೆ ಅವಕಾಶ ಕಲ್ಪಿಸಿದೆಯೆಂದು ಹೇಳಲು ನಾನು ವಿಷಾದಿಸುತ್ತೇನೆ. ಮತ್ತೊಂದು ಕಾಲೇಜನ್ನು ಪರಿಗಣಿಸಲಾಗುತ್ತದೆಯೆಂದು ಹಣಕಾಸು ಸಚಿವರು ಹೇಳಿದ್ದಾರೆ. ಈ ಸಂಗತಿಯನ್ನು ಗಮನದಲ್ಲಿಟ್ಟುಕೊಂಡು, ಮತ್ತೊಂದು ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸುವುದಕ್ಕಾಗಿ ನೀವು ಪರಿಶೀಲಿಸುತ್ತಿರುವ ಸ್ಥಳಗಳು ಯಾವುವೆಂದು ನಾನು ತಿಳಿಯಬಹುದೆ?

(ಉತ್ತರವಿಲ್ಲ)

**ಶ್ರೀ ಜೆ.ಬಿ. ಮಲ್ಲಾರಾಧ್ಯ:** ಹಿಂದಿನ ಸಚಿವ ಸಂಪುಟವು ಒಂದು ನಿರ್ಧಾರವನ್ನು ತೆಗೆದುಕೊಂಡಿತ್ತೆಂದು ಮತ್ತು ಅಂದಿನ ಮಾನ್ಯ ಆರೋಗ್ಯ ಸಚಿವರಾದ ಡಾ॥ ಹೆಗ್ಡೆಯವರು ಕಾಲೇಜನ್ನು ಮಂಗಳೂರಿನಲ್ಲಿ ಪ್ರಾರಂಭಿಸಲಾಗುತ್ತದೆಯೆಂಬ ಅಧಿಕೃತ ಘೋಷಣೆಯನ್ನು ಅಂದಿನ ಮುಖ್ಯಮಂತ್ರಿಗಳು ಮಾಡಿದ್ದರೆಂದು ಸಹ ಉಲ್ಲೇಖಿಸಿರುವುದು ಹಾಗೂ ಆ ಪ್ರಸ್ತಾವನೆಯನ್ನು ಹಿಂತೆಗೆದುಕೊಳ್ಳುವುದಕ್ಕೆ ವಿವಿಧ ಒತ್ತಡಗಳು ಕಾರಣವಾಗಿವೆಯೆಂಬುದನ್ನು ಸರ್ಕಾರದವರು ಅರಿತಿದ್ದಾರೆಯೆ?

**ಶ್ರೀ ಕೆ. ನಾಗಪ್ಪ ಆಳ್ವ:** ಅಲ್ಲಿ ಯಾವುದೇ ಅಧಿಕೃತ ಪ್ರಕಟಣೆ ಇತ್ತೆಂದು ನಾನು ಭಾವಿಸುವುದಿಲ್ಲ. ಆದರೆ ಅಲ್ಲಿ ಕಾಲೇಜನ್ನು ಪ್ರಾರಂಭಿಸಲು ಒಂದು ಕೋರಿಕೆ ಇತ್ತು.

**ಶ್ರೀ ಬಿ.ಡಿ. ಜತ್ತಿ:** ಒಂದು ಅಧಿಕೃತ ನಿರ್ಧಾರವಿಲ್ಲದೆಯೇ ಪ್ರಕಟಣೆ ಹೇಗಾಗುತ್ತದೆ?

**ಶ್ರೀ ಎಂ. ಗೋವರ್ಧನರಾವ್ :** ಬೆಳಗಾವಿಯಲ್ಲಿ ಮೆಡಿಕಲ್ ಕಾಲೇಜನ್ನು ಸ್ಥಾಪಿಸಲು ಎಲ್ಲಾ ಅನುಕೂಲತೆಗಳೂ ಇವೆ, ಅದಕ್ಕಾಗಿ ಹಣ ಕೂಡಿಸುತ್ತೇವೆ, ಸ್ಥಾಪಿಸಬೇಕು ಎಂದು ಸರ್ಕಾರದಲ್ಲಿ ಡೆಪ್ಯೂಟೇಷನ್ ಬಂದಿಲ್ಲವೆ?

**ಶ್ರೀ ಕೆ. ನಾಗಪ್ಪ ಆಳ್ವ :** ಬಂದಿತ್ತು.

**ಶ್ರೀ ನಾರಾಯಣಪ್ಪ ಕೊಂಡ :** ಬೆಳಗಾವಿ ಮತ್ತು ಗುಲ್ಬರ್ಗ ಈ ಎರಡು ಸ್ಥಳಗಳ ಪೈಕಿ ಯಾವ ಸ್ಥಳದವರಿಂದ ಮೊದಲು ಡೆಪ್ಯೂಟೇಷನ್ ಈ ಸಂಬಂಧದಲ್ಲಿ ಬಂದಿತ್ತು?

**ಶ್ರೀ ಕೆ. ನಾಗಪ್ಪ ಆಳ್ವ :** ಮೊದಲು ಗುಲ್ಬರ್ಗದಿಂದ ಬಂದಿತ್ತು.

**ಶ್ರೀ ನಾರಾಯಣಪ್ಪ ಕೊಂಡ :** ಹಾಗಾದರೆ ಗುಲ್ಬರ್ಗಕ್ಕೆ ಮೊದಲು ಪ್ರಾಶಸ್ತ್ಯ ಕೊಡುತ್ತೀರಾ?

ಶ್ರೀ ಕೆ. ನಾಗಪ್ಪ ಆಳ್ವ : ಈ ವಿಚಾರ ಆಲೋಚನೆಯಲ್ಲಿದೆ.

ಶ್ರೀ ನಾರಾಯಣಪ್ಪ ಕೊಂಡ : ಆಲೋಚಿಸಲು ಎಷ್ಟು ದಿವಸಗಳು ಬೇಕು?

ಶ್ರೀ ಕೆ. ನಾಗಪ್ಪ ಆಳ್ವ : ಆದಷ್ಟು ಬೇಗ ಇತ್ಯರ್ಥ ಮಾಡಲಾಗುವುದು.

## ಮೆಡಿಕಲ್ ಕಾಲೇಜುಗಳ ಪ್ರವೇಶಾರ್ಹತೆ
## ವಿ.ಪ. (09-03-1963)

# ರಾಜ್ಯದಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳಲ್ಲಿ ವೃತ್ತಿಪೂರ್ವ ಶಿಕ್ಷಣಕ್ಕಾಗಿ ವಿದ್ಯಾರ್ಥಿಗಳ ಪ್ರವೇಶಕ್ಕೆ ಸಂಬಂಧಿಸಿದಂತೆ ನ್ಯಾಯಾಲಯಗಳಲ್ಲಿ ರಿಟ್ ಅರ್ಜಿಗಳು

ಶ್ರೀ ವಿ. ಶ್ರೀನಿವಾಸಶೆಟ್ಟಿ (ಪದವೀಧರರ ಚುನಾವಣಾ ಕ್ಷೇತ್ರ): ಸರ್ಕಾರವು ಇದನ್ನು ದಯವಿಟ್ಟು ತಿಳಿಸುವುದೆ:-

(ಎ) ರಾಜ್ಯದಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳಲ್ಲಿ ಲಭ್ಯವಿರುವ ಸೀಟುಗಳ ಒಟ್ಟು ಸಂಖ್ಯೆ;

(ಬಿ) 1962-63ರ ಅವಧಿಯಲ್ಲಿ ಈ ಕಾಲೇಜುಗಳಲ್ಲಿ ವೃತ್ತಿಪೂರ್ವ ಶಿಕ್ಷಣಕ್ಕೆ ಪ್ರವೇಶ ಪಡೆದ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು? ಮತ್ತು ಎಷ್ಟು ಹಂತಗಳಲ್ಲಿ ಪ್ರವೇಶ ಪಡೆದರು;

(ಸಿ) ಈ ಪ್ರವೇಶಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯಗಳಲ್ಲಿ ಸಲ್ಲಿಸಲಾದ ರಿಟ್ ಅರ್ಜಿಗಳ ಸಂಖ್ಯೆ ಮತ್ತು ಅವರಲ್ಲಿ ಎಷ್ಟು ಜಾರಿ ಸ್ಥಾಪಿಸಲಾದವು;

(ಡಿ) ಇದುವರೆಗೆ ಪ್ರವೇಶ ಪಡೆದ ಯಶಸ್ವೀ ಸಾಮಾನ್ಯರ ಸಂಖ್ಯೆ ಮತ್ತು ಯಾವಾಗ ಪ್ರವೇಶ ಪಡೆದರು?

ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು).-

(ಎ) 525

(ಬಿ) [illegible] ಹಂತಗಳಲ್ಲಿ 555

(ಸಿ) (i) ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ 8 ಜನರು ಸೇರಿದಂತೆ 68

(ii) 52 ಜನರು ಯಶಸ್ವಿಯಾದರು

(ಡಿ) 54 ರಿಟ್ ಅರ್ಜಿದಾರರು ಪ್ರವೇಶ ಪಡೆದಿದ್ದಾರೆ (23–10–1962 ರಿಂದ 06–02–1963)

**ಶ್ರೀ ವಿ. ಶ್ರೀನಿವಾಸ ಶೆಟ್ಟಿ:** ಈ ಏಳು ಹಂತಗಳು ಯಾವಾಗ ನಡೆದವು; ವಿದ್ಯಾರ್ಥಿಗಳ ಪ್ರವೇಶಕ್ಕೆ ಕೊನೆಯ ದಿನಾಂಕವೇನು?

**ಶ್ರೀ ಕೆ. ನಾಗಪ್ಪ ಆಳ್ವ:**

| | |
|---|---|
| 1 ನೇ ಹಂತ | 02–08–1962 |
| 2ನೇ ಹಂತ | 12–08–1962 |
| 3ನೇ ಹಂತ | 05–09–1962 |
| 4ನೇ ಹಂತ | 23–10–1962 |
| 5ನೇ ಹಂತ | 12–01–1963 |
| 6ನೇ ಹಂತ | ಕೊನೆಯದು, ಆದರೆ |

ನಾವು ಒಂದೇ ಒಂದಕ್ಕೆ ಸ್ಪಷ್ಟೀಕರಣ ಕೇಳಬಯಸುತ್ತೇವೆ ಮತ್ತು ಅದು 31–12–1962.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ:** ಈ ಕಾಲೇಜುಗಳಿಗೆ ಯಾವುದೇ ಹೆಚ್ಚಿನ ಪ್ರವೇಶದ ಕಂತುಗಳಿವೆಯೆ?

**ಶ್ರೀ ಕೆ. ನಾಗಪ್ಪ ಆಳ್ವ:** ಕಂತುಗಳೇನೂ ಇರುವುದಿಲ್ಲ. ಸ್ಪಷ್ಟೀಕರಣ ಕೋರಿರುವಂತಹ ಒಂದೇ ಒಂದು ಪ್ರಕರಣವಿದೆ.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ:** ಅವನಿಗೆ ಪ್ರವೇಶ ಸಿಗುವುದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಅದಕ್ಕಾಗಿಯೇ ಸ್ಪಷ್ಟೀಕರಣ ಕೋರಲಾಗಿದೆ.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ:** ಹೊಸ ಶೈಕ್ಷಣಿಕ ವರ್ಷದ ಪ್ರಾರಂಭಕ್ಕೆ ಮುಂಚೆ ಸ್ಪಷ್ಟೀಕರಣ ದೊರೆಯುವುದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಅದು ನಾವು ಸ್ಪಷ್ಟೀಕರಣ ಸ್ವೀಕರಿಸುವುದರ ಮೇಲೆ ಅವಲಂಬಿತವಾಗಿದೆ.

**ಶ್ರೀ ಎ. ಶ್ರೀನಿವಾಸ ಶೆಟ್ಟಿ:** ಬಿಟ್ಟು ಹೋಗಿರುವ ಗರಿಷ್ಠ ಸಂಖ್ಯೆಯ ದಿನಗಳನ್ನು ಸೇರಿಸಿದರೂ ಸಹ, 06–03–1963ರಂದು ಪ್ರವೇಶ ಪಡೆದ ಕೊನೆಯ ಬ್ಯಾಚ್‌ನ ಹುಡುಗರ ಹಾಜರಾತಿ ದಿನಗಳ ಸಂಖ್ಯೆ ಏನಾಗಿರುತ್ತದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಪ್ರವೇಶ ಪಡೆದ ನಂತರದ ದಿನಗಳ ಸಂಖ್ಯೆ?

**ಶ್ರೀ ಎ. ಶ್ರೀನಿವಾಸ ಶೆಟ್ಟಿ:** ಅವರು ಕನಿಷ್ಠ ಸಂಖ್ಯೆಯ ದಿನಗಳು ಹಾಜರಾಗಲು ಸಾಧ್ಯವಾಗದಿದ್ದಲ್ಲಿ, ಆ ವಿದ್ಯಾರ್ಥಿಗಳ ಗತಿಯೇನು?

**ಶ್ರೀ ಕೆ. ನಾಗಪ್ಪ ಆಳ್ವ:** ರಿಟ್ ಅರ್ಜಿಗಳ ಕಾರಣದಿಂದ ಪ್ರವೇಶ ಪಡೆದ ವಿದ್ಯಾರ್ಥಿಗಳು ಪ್ರವೇಶ ಪಡೆದ ನಂತರ ಉಳಿದಿರುವ ದಿನಗಳಲ್ಲಿ ಶೇ.75ರಷ್ಟಕ್ಕೆ ಹಾಜರಾದರೆ, ಅವರು ಪರೀಕ್ಷೆಗೆ ಅರ್ಹರಾಗುವಂತೆ ಅವಕಾಶ ಕಲ್ಪಿಸಲಾಗಿದೆ.

**ಶ್ರೀ ಎ. ಶ್ರೀನಿವಾಸ ಶೆಟ್ಟಿ:** ವೈದ್ಯಕೀಯ ಕಾಲೇಜುಗಳಲ್ಲಿ ಈ ರೀತಿ ಹಂತಹಂತವಾಗಿ ವಿದ್ಯಾರ್ಥಿಗಳಿಗೆ ಪ್ರವೇಶ ನೀಡುವುದಕ್ಕೆ ಮುಖ್ಯ ಕಾರಣವೇನು?

**ಶ್ರೀ ಕೆ. ನಾಗಪ್ಪ ಆಳ್ವ:** ಅದು ಎಲ್ಲರಿಗೂ ಗೊತ್ತಿದೆ.

**ಶ್ರೀ ಎ. ಶ್ರೀನಿವಾಸ ಶೆಟ್ಟಿ:** ನನಗೆ ಗೊತ್ತಿಲ್ಲ. ಇದು ಸರ್ಕಾರಕ್ಕೆ ಗೊತ್ತಿದ್ದರೆ, ಜನರು ವೈದ್ಯಕೀಯ ಕಾಲೇಜುಗಳಿಗೆ ಪ್ರವೇಶ ಪಡೆಯುವುದಕ್ಕಾಗಿ ರಿಟ್ ಅರ್ಜಿಗಳೊಂದಿಗೆ ಉಚ್ಚ ನ್ಯಾಯಾಲಯಕ್ಕೆ ಏಕೆ ಹೋಗುತ್ತಾರೆಂಬುದನ್ನು ನಾನು ತಿಳಿದುಕೊಳ್ಳಬೇಕಿದೆ.

**ಶ್ರೀ ಕೆ. ನಾಗಪ್ಪ ಆಳ್ವ:** ಅವರು ತಮಗೆ ಸೀಟುಗಳನ್ನು ನಿರಾಕರಿಸಿದ್ದಾರೆಂದು ಮತ್ತು ತಾವು ಸೀಟುಗಳನ್ನು ಪಡೆಯಲೇಬೇಕೆಂದು ಭಾವಿಸಿಕೊಂಡು ರಿಟ್ ಅರ್ಜಿಗಳನ್ನು ಸಲ್ಲಿಸುತ್ತಾ ಬಂದಿದ್ದಾರೆ.

**ಶ್ರೀ ಎ. ಶ್ರೀನಿವಾಸ ಶೆಟ್ಟಿ:** ಈ ತಪ್ಪುಗಳನ್ನು ಸರ್ಕಾರವು ಮಾಡಿದೆಯೆಂದು ಈ ಎಲ್ಲಾ ವರ್ಷಗಳಲ್ಲಿ ನಿರಂತರವಾಗಿ ಸರ್ಕಾರಕ್ಕೆ ಎತ್ತಿ ತೋರಿಸಿರುವ ಸೂಚನೆಗೆ ಸರ್ಕಾರವು ಒಪ್ಪಿಕೊಳ್ಳುವುದೆ?

**ಶ್ರೀ ಕೆ. ನಾಗಪ್ಪ ಆಳ್ವ:** ನಿರಂತರವಾಗಿ ತಪ್ಪುಗಳನ್ನು ಮಾಡುವ ಬಗೆಗಿನ ಪ್ರಶ್ನೆ ಇದಲ್ಲ. ಸರ್ಕಾರವು ಈ ಆದೇಶಗಳನ್ನು ಹೊರಡಿಸುವುದು ಸಮಂಜಸವೆಂದು ಭಾವಿಸಿತು. ಆದರೆ, ತೊಂದರೆಗೊಳಗಾದ ಜನರು ಅರ್ಜಿಗಳನ್ನು ಸಲ್ಲಿಸಲು ನ್ಯಾಯಾಲಯಕ್ಕೆ ಹೋದರು.

ಶ್ರೀ ವಿ. ಶ್ರೀನಿವಾಸ ಶೆಟ್ಟಿ: ಈ ಆದೇಶಗಳು ಮೈಸೂರು ಸರ್ಕಾರವು ಸಂವಿಧಾನದ ಮೇಲೆ ಅನೇಕ ಸಲ ಎಸಗಿರುವ ಮೋಸದಂತೆ ನಿರೂಪಿತವಾಗಿವೆಯೆಂಬುದು ಅವರಿಗೆ ತಿಳಿದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ:** ಅದು ತೀರ್ಪಿನಲ್ಲಿ ಉಪಯೋಗಿಸಲಾದ ಕಾನೂನುಬದ್ಧವಾದ ಪದ.

**ಶ್ರೀ. ವಿ. ಶ್ರೀನಿವಾಸ ಶೆಟ್ಟಿ:** ಈಗಲೂ ಸಹ ಸರ್ಕಾರವು ಈ ತಪ್ಪುಗಳನ್ನು ಸರಿಪಡಿಸಿಕೊಂಡು ಈ ವಿದ್ಯಾರ್ಥಿಗಳು ಉಚ್ಚನ್ಯಾಯಾಲಯಕ್ಕೆ ಅಥವಾ ಸರ್ವೋಚ್ಚ ನ್ಯಾಯಾಲಯಕ್ಕೆ ಹೋಗದಂತೆ ನೋಡಿಕೊಳ್ಳಲು ಸಿದ್ಧವಿರುವುದೇ?

**ಶ್ರೀ ಕೆ. ನಾಗಪ್ಪ ಆಳ್ವ:** ನ್ಯಾಯಾಲಯಕ್ಕೆ ಹೋಗುವುದರಿಂದ ಯಾರನ್ನು ಯಾರೂ ತಡೆಯಲಾರರು. ಆದರೆ, ಈ ಪ್ರವೇಶಗಳಿಗೆ ಸಂಬಂಧಪಟ್ಟಂತೆ ಸರ್ಕಾರವು ನಿಯಮವನ್ನು ರೂಪಿಸುತ್ತದೆ.

**ಶ್ರೀ ಜೆ.ವಿ. ಮಲ್ಲಾರಾಧ್ಯ:** ವೈದ್ಯಕೀಯ ಕಾಲೇಜಿನ ಗರಿಷ್ಠ ಸಾಮರ್ಥ್ಯವನ್ನು 525ಕ್ಕೆ ಮಿತಿಗೊಳಿಸಿರುವಾಗ, ಅದು ಹೇಗೆ ಈ ಪಟ್ಟಿಗಳಿಗೆ ಕೆಲವು ಹೆಚ್ಚಿನ ವಿದ್ಯಾರ್ಥಿಗಳನ್ನು ಸೇರಿಸಲಾಗಿದೆ?

**ಶ್ರೀ ಕೆ. ನಾಗಪ್ಪ ಆಳ್ವ:** ಅನುಮತಿಸಲಾದ ಪ್ರವೇಶಗಳ ಸಂಖ್ಯೆ 525, ಆದರೆ ನಾವು ಈಗ 555 ವಿದ್ಯಾರ್ಥಿಗಳಿಗೆ ಪ್ರವೇಶ ನೀಡಿದ್ದೇವೆ ಮತ್ತು ನಾವು ಇದನ್ನು ವಿಶ್ವವಿದ್ಯಾನಿಲಯಕ್ಕೆ ಮತ್ತು ಭಾರತೀಯ ವೈದ್ಯ ಪರಿಷತ್ತಿಗೆ ತಿಳಿಸಿದ್ದೇವೆ.

**ಶ್ರೀ ಜೆ.ವಿ. ಮಲ್ಲಾರಾಧ್ಯ:** ಪ್ರವೇಶ ನೀಡಿಕೆಯಲ್ಲಿನ ಹೆಚ್ಚಳಕ್ಕೆ ಪ್ರಾಸಂಗಿಕವಾಗಿ ಸಿಬ್ಬಂದಿ, ಚಿಕಿತ್ಸಾ ಸೌಲಭ್ಯಗಳು, ವಸತಿ ಸೌಲಭ್ಯ ಮತ್ತು ವಿವಿಧ ಇತರ ವಿಷಯಗಳಲ್ಲಿ ಪ್ರಮಾಣಾನುಸಾರ ಹೆಚ್ಚಳವೆಷ್ಟು? ಈ ಬಗ್ಗೆ ಸರ್ಕಾರ ಏನಾದರೂ ಕ್ರಮ ತೆಗೆದುಕೊಂಡಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ:** ಸರ್ಕಾರವು ಅಗತ್ಯ ಕ್ರಮವನ್ನು ತೆಗೆದುಕೊಂಡಿದೆ.

**ಶ್ರೀ ಜೆ.ವಿ. ಮಲ್ಲಾರಾಧ್ಯ:** ಕಾಲೇಜು ತನ್ನ ವಿದ್ಯಾರ್ಥಿಗಳ ಪೂರ್ಣ ಸಂಖ್ಯೆಯ ಜೊತೆಗೆ ಇಂತಹ ಹೆಚ್ಚಿನ ಸೇರ್ಪಡೆಯನ್ನು ಒಪ್ಪುವುದಿಲ್ಲವೆಂಬುದು ಸರ್ಕಾರಕ್ಕೆ ತಿಳಿದಿದೆಯೇ? ಮತ್ತು ವೈದ್ಯಕೀಯ ಶಿಕ್ಷಣದ ಸೌಲಭ್ಯಗಳಲ್ಲಿ ಪ್ರಮಾಣಾನುಸಾರ ಹೆಚ್ಚಳ ಮಾಡದೆ ವಿದ್ಯಾರ್ಥಿಗಳ ಪೂರ್ಣ ಸಂಖ್ಯೆಯನ್ನು 30ಕ್ಕೆ ಹೆಚ್ಚಿಸಿರುವುದರಿಂದ ವಿದ್ಯಾರ್ಥಿಗಳು ಮತ್ತು ಪ್ರಾಧ್ಯಾಪಕರುಗಳು ಈ ಆದೇಶದಿಂದ ತೀರಾ ಅನಾನುಕೂಲತೆಯನ್ನು ಅನುಭವಿಸುತ್ತಿದ್ದಾರೆ.

ಮತ್ತು ಏನಾದರೂ ಪರಿಣಾಮ ಆಗಿದೆಯೋ ಎಂಬುದನ್ನು ನಾನು ತಿಳಿದುಕೊಳ್ಳಬೇಕಾಗಿದೆ.

**ಸಭಾಪತಿ:** ಅವರು ಈಗ ವಿವರಗಳನ್ನು ನೀಡಲಾರರು

**ಶ್ರೀ ಜೆ. ಬಿ. ಮಲ್ಲಾರಾಧ್ಯ :** ಸರ್ಕಾರದವರು ಅಡ್ವೋಕೇಟ್ ಜನರಲ್ ಅವರು ಕೊಟ್ಟ ಮನವಿಗೆ ಯಾವತ್ತು ಮಾನ್ಯತೆ ಕೊಟ್ಟರು? ಯಾವತ್ತು ಪರಿಶೀಲಿಸಿದರು?

**ಸಭಾಪತಿ:** ಇದಕ್ಕಾಗಿ ಅವರಿಗೆ ಕಾಲಾವಕಾಶ ಬೇಕಾಗಿದೆ.

**ಶ್ರೀ ಕೇಶವರಾವ್ ನಿಟ್ಟೂರ್:** ಉಚ್ಚನ್ಯಾಯಾಲಯದಲ್ಲಿ ಮತ್ತು ಸರ್ವೋಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ಅಧಿಕ ಸಂಖ್ಯೆಯಲ್ಲಿ ಸಲ್ಲಿಸಿರುವುದರಿಂದ, ಈ ಬಗ್ಗೆ ಸಂವಿಧಾನ ಆಧಾರದ ಹೊಸ ಮಾನದಂಡವನ್ನು ಕಂಡುಕೊಳ್ಳಲು ನಾಗನಗೌಡ ಸಮಿತಿಯಂಥ ಹೊಸ ಸಮಿತಿಯನ್ನು ರಚಿಸುವ ಉದ್ದೇಶ ಸರ್ಕಾರಕ್ಕಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ:** ಅದರ ಅಗತ್ಯವಿದೆಯೆಂದು ನಾನು ಭಾವಿಸಿಲ್ಲ.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ:** ಬಹುತೇಕ ಎಲ್ಲಾ ವೈದ್ಯಕೀಯ ಕಾಲೇಜುಗಳಲ್ಲಿ ಸಾಕಷ್ಟು ಸಿಬ್ಬಂದಿ ಕೊರತೆ ಇರುವುದು ಮತ್ತು ಅಲ್ಲಿ ಸಾಕಷ್ಟು ಸಂಖ್ಯೆಯ ಖಾಲಿ ಸ್ಥಾನಗಳನ್ನು ಭರ್ತಿ ಮಾಡದಿರುವುದು ಸರ್ಕಾರಕ್ಕೆ ತಿಳಿದುಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ:** ಕೆಲವೇ ಖಾಲಿ ಸ್ಥಾನಗಳನ್ನು ಮಾತ್ರ ಭರ್ತಿ ಮಾಡಬೇಕಾಗಿದೆ.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ:** ಇನ್ನೂ ಎಷ್ಟು ಖಾಲಿ ಸ್ಥಾನಗಳನ್ನು ಭರ್ತಿ ಮಾಡಿಕೊಳ್ಳಬೇಕಾಗಿದೆ ಎಂಬುದರ ಬಗ್ಗೆ ನಾವು ತಿಳಿದುಕೊಳ್ಳಬಹುದೇ?

**ಶ್ರೀ ಕೆ. ನಾಗಪ್ಪ ಆಳ್ವ:** ನನಗೆ ಸೂಚನೆ ಕೊಟ್ಟಿಲ್ಲ.

**ಶ್ರೀ ವಿ. ಆರ್. ನಾಯ್ಡು :** ಸೀಟುಗಳ ಸಂಖ್ಯೆ 525 ಎಂದು ಉತ್ತರದಲ್ಲಿ ಹೇಳಿದ್ದೀರಿ, ಇದರಲ್ಲಿ ವಿದ್ಯಾರ್ಥಿಗಳು ಎಷ್ಟು ಮತ್ತು ವಿದ್ಯಾರ್ಥಿನಿಯರು ಎಷ್ಟು?

**ಶ್ರೀ ಕೆ. ನಾಗಪ್ಪ ಆಳ್ವ :** ಆ ಮಾಹಿತಿ ಈಗ ನನ್ನಲ್ಲಿಲ್ಲ.

**ಶ್ರೀ ವಿ.ಆರ್. ನಾಯ್ಡು :** ಹಿಂದೆ ಬೆಂಗಳೂರಿನ ಸರ್ಕಾರಿ ವೈದ್ಯಕೀಯ ಕಾಲೇಜಿನಲ್ಲಿ 5 ಸಾವಿರ ರೂಪಾಯಿಗಳ ಡೊನೇಷನ್ ತೆಗೆದುಕೊಂಡು ಸೀಟುಗಳನ್ನು ರಿಸರ್ವ್ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಹೌದು.

**ಶ್ರೀ ವಿ.ಆರ್. ನಾಯ್ಡು** : ಡೊನೇಷನ್ ಕೊಟ್ಟಿರುವವರ ಹುಡುಗರಿಗೆ ಸೀಟು ಸಿಕ್ಕಿಲ್ಲವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಡೊನೇಷನ್ ಕೊಟ್ಟಿರುವವರ ಹುಡುಗರಿಗೆಲ್ಲರಿಗೂ ಸೀಟುಗಳನ್ನು ಕೊಡುವುದಕ್ಕೆ ಆಗುವುದಿಲ್ಲ. ಅದು ಸಾಧ್ಯವೂ ಇಲ್ಲ. ಹಂತ ಹಂತವಾಗಿ ಈ ಸೀಟುಗಳನ್ನು ಕೊಡುತ್ತಿರುವಾಗ ಈ ವರ್ಷದಲ್ಲಿ ಎರಡು ಸೀಟುಗಳನ್ನು ಕೊಟ್ಟೆವು. ಆದರೆ ಆ ತರಹ ಎಲ್ಲರಿಗೆ ಸೀಟುಗಳನ್ನು ಕೊಡಲಾಗುವುದಿಲ್ಲ.

**ಶ್ರೀ ವಿ.ಆರ್. ನಾಯ್ಡು** : ಐದು ಸಾವಿರ ರೂಪಾಯಿಗಳ ಡೊನೇಷನ್ ತೆಗೆದುಕೊಂಡು ಸೀಟುಗಳನ್ನು ಕೊಡುತ್ತೇವೆಂದು ಸರ್ಕಾರದವರು ಕರಾರು ಬರೆದುಕೊಟ್ಟರೂ ಅಂಥಹ ಸೀಟುಗಳನ್ನು ಕೊಡದಿದ್ದರೆ ಅವರು ಬೇರೆ ಹೈಕೋರ್ಟಿಗೆ ಅರ್ಜಿ ಹಾಕಬೇಕಾದೀತು. ಏಕೆಂದರೆ, ಈಗ ಇರತಕ್ಕ ರಿಟ್ ಪಿಟಿಷನ್‌ಗಳೇ ಜಾಸ್ತಿಯಾಗಿವೆ. ಆದಕಾರಣ ಅಂಥಹವರು ಕೋರ್ಟಿಗೆ ಹೋಗದೆ ಹಾಗೆ ವ್ಯವಸ್ಥೆ ಮಾಡುವುದಕ್ಕೆ ಪ್ರಯತ್ನವನ್ನು ಮಾಡುತ್ತೀರಾ?

**ಶ್ರೀ ಕೆ. ನಾಗಪ್ಪ ಆಳ್ವ** : ಅದಕ್ಕೂ ನಮಗೂ ಏನೂ ಸಂಬಂಧವಿಲ್ಲ.

**ಶ್ರೀ ಎಂ.ಪಿ. ಈಶ್ವರಪ್ಪ**: ಮುಂದಿನ ವರ್ಷಗಿಂದ ವೈದ್ಯಕೀಯ ಕಾಲೇಜುಗಳಲ್ಲಿ ಸ್ಥಾನಗಳ ಸಂಖ್ಯೆಯನ್ನು ಹೆಚ್ಚಿಸುವ ಉದ್ದೇಶ ಸರ್ಕಾರಕ್ಕಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ**: ಪ್ರಸ್ತಾವನೆ ಇದೆ, ಸ್ವಾಮಿ.

**ಶ್ರೀ ಎಂ.ಪಿ. ಈಶ್ವರಪ್ಪ**: ಸರ್ಕಾರವು, ಸಂಖ್ಯೆಯನ್ನು ಎಷ್ಟಕ್ಕೆ ಹೆಚ್ಚಿಸಲು ಉದ್ದೇಶಿಸಿದೆ.

**ಶ್ರೀ ಕೆ. ನಾಗಪ್ಪ ಆಳ್ವ**: ಇದು ಪರಿಶೀಲನೆಯಲ್ಲಿದೆ.

**ಶ್ರೀ ಎಂ.ಪಿ. ಈಶ್ವರಪ್ಪ**: ಪ್ರಸ್ತುತ ವಿದ್ಯಾರ್ಥಿಗಳಿಗೂ, ಸಿಬ್ಬಂದಿ ಸಾಕಷ್ಟಿಲ್ಲದಿರುವ ಸಂಗತಿ ಸರ್ಕಾರಕ್ಕೆ ತಿಳಿದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ**: ಹಾಗಂತ ಅಭಿಪ್ರಾಯ. ನಮಗೆ ಅಗತ್ಯವಿರುವಷ್ಟು ಸಂಖ್ಯೆಯ ಸಿಬ್ಬಂದಿ ಹೀಗಿದ್ದಾರೆ. ಕೆಲವೇ ಕೆಲವು ಸ್ಥಾನಗಳು ಮಾತ್ರ ಖಾಲಿ ಇವೆ.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ**: ಸರ್ಕಾರವು ವೈದ್ಯಕೀಯ ಶಾಲೆಗಳನ್ನು ರದ್ದುಗೊಳಿಸುವ ಆದೇಶಗಳನ್ನು ಹೊರಡಿಸುವಾಗ ಮತ್ತು 200ಕ್ಕೂ ಹೆಚ್ಚು

ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲು ಉದ್ದೇಶಿಸಿದಾಗ, ಸರ್ಕಾರವು ಈ ಎರಡೂ ಶಾಲೆಗಳನ್ನು ರದ್ದುಗೊಳಿಸುವ ಮುಂಚೆ ವೈದ್ಯಕೀಯ ಪರಿಷತ್ತಿನ ಅನುಮತಿಯನ್ನು ಪಡೆದುಕೊಂಡಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ:** ಆ ರೀತಿ ಅನುಮತಿ ಪಡೆಯುವ ಅಗತ್ಯವಿಲ್ಲ.

**ಶ್ರೀ ಎಂ.ಪಿ. ಈಶ್ವರಪ್ಪ:** ಕೊನೆಯ ವಿದ್ಯಾರ್ಥಿಯು ಶೈಕ್ಷಣಿಕವಾಗಿ ಪಡೆದ ಅಂಕಗಳನ್ನು ನಾನು ತಿಳಿದುಕೊಳ್ಳಬಹುದೇ ಅಂದರೆ, ವಿದ್ಯಾರ್ಥಿಯು ಪಡೆದ ಅತ್ಯಂತ ಕನಿಷ್ಠ ಶೇಕಡ ಅಂಕಗಳು ಆ ಅಂಕಗಳ ಶೇಕಡಾ ಪ್ರಮಾಣ ಎಷ್ಟು?

**ಶ್ರೀ ಕೆ. ನಾಗಪ್ಪ ಆಳ್ವ:** ಶೇಕಡಾ 45.

**ಶ್ರೀ ಎಂ.ಪಿ. ಈಶ್ವರಪ್ಪ:** ಶೇಕಡಾ 45ಕ್ಕಿಂತ ಹೆಚ್ಚು ಅಂಕಗಳನ್ನು ಅಂದರೆ, ಈಗ ನೀವು ಹೇಳಿದ ತೇರ್ಗಡೆಗೆ ಅಗತ್ಯವಾದದ್ದಕ್ಕಿಂತಲೂ ಅಂಕಗಳು ಪಡೆದಿರುವ ಇಂಥ ಎಷ್ಟು ವಿದ್ಯಾರ್ಥಿಗಳಿಗೆ ಪ್ರವೇಶ ನೀಡಿಲ್ಲ ಎನ್ನುವ ಬಗ್ಗೆ ನಾನು ತಿಳಿದುಕೊಳ್ಳಬಹುದೇ?

**ಶ್ರೀ ಕೆ. ನಾಗಪ್ಪ ಆಳ್ವ:** ಜಾಸ್ತಿನೇ ಇರಬಹುದು.

**ಶ್ರೀ ಎಂ.ಪಿ. ಈಶ್ವರಪ್ಪ:** ಮಾನ್ಯ ಸಚಿವರು ಹೇಳಿರುವಂತೆ ಶೇಕಡಾ 45 ಅಥವಾ ಶೇಕಡಾ 47ರಷ್ಟು ಅಥವಾ ಅದೇ ರೀತಿಯ ಅಂಕಗಳನ್ನು ಪಡೆದಿರುವ ವಿದ್ಯಾರ್ಥಿಗಳು ಪ್ರವೇಶ ಪಡೆದಿದ್ದಾರೆ. ಆದರೆ, ಹೆಚ್ಚು ಶೇಕಡಾ ಪ್ರಮಾಣದ ಅಂಕಗಳನ್ನು ಪಡೆದಿರುವ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ನಿರಾಕರಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ:** ಹೌದು, ಹಾಗಾಗಿದೆ.

**ಶ್ರೀ ಎಂ.ಪಿ. ಈಶ್ವರಪ್ಪ:** ಅದಕ್ಕೆ ಕಾರಣವೇನು?

**ಶ್ರೀ ಕೆ. ನಾಗಪ್ಪ ಆಳ್ವ:** ಕಾರಣ ಏನೆಂದರೆ, ಅಲ್ಲಿ ಆಯ್ಕೆ ಸಮಿತಿ ಇದ್ದು, ಅದು – ಕೆಲವು ನಿಯಮಗಳನ್ನು ಅನುಸರಿಸುತ್ತದೆ. ವಿದ್ಯಾರ್ಥಿಗಳಿಗೆ ಪ್ರವೇಶ ನೀಡುತ್ತದೆ.

**ಶ್ರೀ ಎಂ.ಪಿ. ಈಶ್ವರಪ್ಪ:** ಆಯ್ಕೆ ಸಮಿತಿಯು ತಾರತಮ್ಯ ಮಾಡುತ್ತಿರುವುದು ಮತ್ತು ಸ್ವೇಚ್ಛಾನುಸಾರವಾಗಿ ವರ್ತಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ:** ಇಲ್ಲ ಸಾರ್.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ:** ಸಂದರ್ಶನಕ್ಕೆ ನಿಗದಿಪಡಿಸಲಾದ ಒಟ್ಟು ಅಂಕಗಳೆಷ್ಟು?

**ಶ್ರೀ ಕೆ. ನಾಗಪ್ಪ ಆಳ್ವ:** 45.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ:** ಸಂದರ್ಶನಗಳನ್ನು ಹೇಗೆ ನಡೆಸಬೇಕು ಮತ್ತು ವಿದ್ಯಾರ್ಥಿಗಳಿಗೆ ಹೇಗೆ ಅಂಕಗಳನ್ನು ನೀಡಬೇಕು ಎಂಬುದರ ಬಗ್ಗೆ ಸರ್ಕಾರ ಯಾವುದಾದರೂ ನಿಯಮಗಳನ್ನು ರೂಪಿಸಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ:** ಒಟ್ಟು ಅಂಕಗಳು 45. ಸಂದರ್ಶನದ ಅಂಕಗಳನ್ನು ಮುಖ್ಯವಾಗಿ ವಿದ್ಯಾರ್ಥಿಗಳ ಪಠ್ಯೇತರ ಚಟುವಟಿಕೆಗಳ ಆಧಾರದ ಮೇಲೆ ಕೊಡಲಾಗುತ್ತದೆ.

**ಶ್ರೀ ಎಂ.ಪಿ. ಈಶ್ವರಪ್ಪ:** ಸಂದರ್ಶನಕ್ಕೆ ಹಾಜರಾಗಿದ್ದ ಕೆಲವು ವಿದ್ಯಾರ್ಥಿಗಳಿಗೆ, ಸಂದರ್ಶನದಲ್ಲಿ ಹೊಲಸು ಅಶ್ಲೀಲ ಪ್ರಶ್ನೆಗಳನ್ನು ಕೇಳಿರುವುದು ಅನಾದರಣೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ:** ಇಲ್ಲ ಸಾರ್, ಇದು ಸರ್ಕಾರದ ಗಮನಕ್ಕೆ ಬಂದಿಲ್ಲ.

**ಶ್ರೀ ಆರ್. ಎಸ್. ಮಹಂತಶೆಟ್ಟಿ :** ಈಗಿರತಕ್ಕ ಎಮರ್ಜೆನ್ಸಿ ಸಲುವಾಗಿ ಎಲ್ಲಾ ಸರ್ಕಾರೀ ಕಾಲೇಜುಗಳಲ್ಲಿ ಒಟ್ಟು ಮೂರು ಸಾವಿರ ಹುಡುಗರಿಗೆ ಹೊಸದಾಗಿ ಪ್ರವೇಶಾವಕಾಶವನ್ನು ಕಲ್ಪಿಸಿ ಕೊಡಬೇಕೆಂದು ಎಲ್ಲಾ ಸರ್ಕಾರಗಳಿಗೂ ಕೇಂದ್ರ ಸರ್ಕಾರದಿಂದ ವರದಿ ಬಂದಿರುವಾಗ, ಆ ಪ್ರಕಾರ ಮೈಸೂರು ಸರ್ಕಾರದವರಿಗೆ ಎಷ್ಟು ಜನರಿಗೆ ಹೊಸದಾಗಿ ಸೀಟುಗಳನ್ನು ಕೊಡಬೇಕೆಂದು [illegible] ಸೂಚನೆಯೇನಾದರು ಬಂದಿದೆಯೇ?

ಶ್ರೀ ಕೆ. ನಾಗಪ್ಪ ಆಳ್ವ : ಇಷ್ಟೇ ಜನರಿಗೆಂದು ನಿರ್ದಿಷ್ಟವಾದ [illegible] ಬಂದಿಲ್ಲ. ಆದರೆ ನಮಗೆ ಇರುವ ನಾಲ್ಕು ಕಾಲೇಜುಗಳಲ್ಲಿ ಸಾಧ್ಯವಾದಷ್ಟು [illegible] ಸೀಟುಗಳನ್ನು ಕೊಡಬೇಕೆಂದಿದ್ದೇವೆ.

**ಶ್ರೀ ಆರ್.ಎಸ್. ಮಹಂತ ಶೆಟ್ಟಿ :** ಒಂದು ವೇಳೆ 225 ಜನರಿಗೆ ಸೀಟು ಸಿಕ್ಕಿದರೆ ಮೆಡಿಕಲ್ ಕಾಲೇಜಿನಲ್ಲಿ ಸಾಕಷ್ಟು ವಸತಿ ಇಲ್ಲವೆಂದು ಹೇಳುವಾಗ ಅವರ ಬಗ್ಗೆ ಏನಾದರು ಬೇರೆ ವ್ಯವಸ್ಥೆ ಮಾಡಿದ್ದೀರಾ?

**ಶ್ರೀ ಕೆ. ನಾಗಪ್ಪ ಆಳ್ವ :** ಅದಕ್ಕೆ ಬೇರೆ ವ್ಯವಸ್ಥೆ ಮಾಡುವುದು ಬೇರೆ ಪ್ರಶ್ನೆ. ನಮಗಿರತಕ್ಕ ಕಾಲೇಜುಗಳಲ್ಲಿ ಎಷ್ಟು ಹೆಚ್ಚು ಮಾಡಬಹುದು ಎಂಬುದನ್ನು ಯೋಚಿಸುತ್ತಿದ್ದೇವೆ. ಆ ಸೌಕರ್ಯವನ್ನು ಹೆಚ್ಚಿಗೆ ಕೊಡುತ್ತೇವೆ.

**ಶ್ರೀ ಆರ್. ಎಸ್. ಮಹಂತ ಶೆಟ್ಟಿ** : 225 ಜನರಿಗೆ ಪ್ರವೇಶ ಕೊಡಲು ಸಾಕಷ್ಟು ಸ್ಥಳ, ಎಕ್ವಿಪ್‌ಮೆಂಟ್, ಸಿಬ್ಬಂದಿ ಇದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಆ ರೀತಿ ಮಾಡಬೇಕೆಂಬ ಧೈರ್ಯ ನಮಗಿದೆ.

**ಶ್ರೀ ಆರ್. ಎಸ್. ಮಹಂತ ಶೆಟ್ಟಿ** : ಬೇರೆ ಯಾರಾದರು ಮೆಡಿಕಲ್ ಕಾಲೇಜು ಮಾಡುತ್ತೇವೆಂದರೆ ಅವರಿಗೆ ಉತ್ತೇಜನ ಕೊಡಲು ಶಕ್ಯವಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ**: ಮಾನ್ಯರೇ, ಇದು ಪ್ರಶ್ನೆಯ ವ್ಯಾಪ್ತಿಗೆ ಒಳಪಡುವುದಿಲ್ಲ.

**ಶ್ರೀ ಕೇಶವರಾವ್ ನಿಟ್ಟೂರ್‌ಕರ್**: (ಸಿ)ಗೆ ಉತ್ತರವಾಗಿ 52 ಜನ ವಿದ್ಯಾರ್ಥಿಗಳು ಯಶಸ್ವಿಯಾಗಿದ್ದಾರೆಂದು ಹೇಳಲಾಗಿದೆ. ಆದರೆ, (ಡಿ) ಗೆ ಉತ್ತರವಾಗಿ 54ರಿಟ್ ಅರ್ಜಿದಾರರಿಗೆ ಪ್ರವೇಶ ನೀಡಲಾಗಿದೆ ಎಂದು ತಿಳಿಸಲಾಗಿದೆ. ಇಲ್ಲಿ ತಿಳಿಸಿರುವಂತೆ 52ಕ್ಕೆ ಬದಲಾಗಿ 54 ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲಾಗಿದೆ ಎಂಬ ಸಂಶಯ ಮೂಡುತ್ತದೆ.

**ಶ್ರೀ ಕೆ. ನಾಗಪ್ಪ ಆಳ್ವ**: ಅಲ್ಲಿ ಎರಡು ರಿಟ್ ಅರ್ಜಿಗಳಿವೆ. ಮೈಸೂರು ಉಚ್ಚ ನ್ಯಾಯಾಲಯಕ್ಕೂ ಮತ್ತು ಸರ್ವೋಚ್ಚ ನ್ಯಾಯಾಲಯಕ್ಕೂ ಎರಡಕ್ಕೂ ಒಂದೇ ಬಗೆಯ ಅರ್ಜಿ ಸಲ್ಲಿಸಲಾಗಿದೆ.

**ಶ್ರೀ ಕೆ. ಎಸ್. ಚೆನ್ನಪ್ಪ** : ಈ ಸೀಟುಗಳನ್ನು ಹಂಚುವ ವಿಚಾರದಲ್ಲಿ ಮಾನ್ಯ ಮಂತ್ರಿಗಳು, ಅವರ ಹಿಂಬಾಲಕರು, ಅಣ್ಣ, ತಮ್ಮ, ಅಳಿಯ ಮುಂತಾದ ಸಂಬಂಧವಿರುವ ವ್ಯಕ್ತಿಗಳಿಗೆ ಸೀಟು ಕೊಟ್ಟಿದ್ದಾರೆಂದು ಜನ ಆಡಿಕೊಳ್ಳುತ್ತಾರೆ. ಅದು ನಿಜವೇ, ಸ್ವಾಮಿ?

**ಶ್ರೀ ಕೆ. ನಾಗಪ್ಪ ಆಳ್ವ** : ತಮ್ಮ ಪ್ರಶ್ನೆ ಬಹಳ ವೇಗ್ ಆಗಿದೆ. ಅದರ ವಿಚಾರ ಹೇಳುವುದಕ್ಕೆ ಬರುವುದಿಲ್ಲ.

**ಶ್ರೀ ಎಂ. ಪಿ. ಈಶ್ವರಪ್ಪ** : ಸೀಟುಗಳ ಹಂಚಿಕೆ ಪಟ್ಟಿಯು ಪ್ರಕಟಿಸುವುದಕ್ಕೆ ಮುಂಚೆ ಸರ್ಕಾರದ ಮುಂದೆ ಬರುತ್ತದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಇಲ್ಲ.

**ಶ್ರೀ ಗೊರೂರು ಸ್ವಾಮಿ ಐಯ್ಯಂಗಾರ್** : ಇಂಡಿಯಾ ಸರ್ಕಾರದ ಅಭಿಪ್ರಾಯದಂತೆ ತುರ್ತುಪರಿಸ್ಥಿತಿಯಲ್ಲಿ ಈ ಸಂಬಂಧವಾದ ಶಿಕ್ಷಣವನ್ನು ಮೂರು ವರ್ಷಗಳಿಗೆ ಇಳಿಸುವ ಯೋಚನೆಯಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಇಲ್ಲ.

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ** : ಪ್ರವೇಶಕ್ಕೆ ಅರ್ಜಿ ಹಾಕಿದ್ದವರಲ್ಲಿ ಎಷ್ಟು ವಿದ್ಯಾರ್ಥಿಗಳಿಗೆ ಶೇಕಡ ಐವತ್ತಕ್ಕಿಂತ ಹೆಚ್ಚು ನಂಬರು ಬಂದಿತ್ತು?

**ಶ್ರೀ ಕೆ. ನಾಗಪ್ಪ ಆಳ್ವ** : ಆ ಸಮಾಚಾರ ಈಗ ಇಲ್ಲಿಲ್ಲ.

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ** : ಶೇಕಡ ಐವತ್ತಕ್ಕಿಂತ ಹೆಚ್ಚು ನಂಬರು ಪಡೆದಿರುವ ವಿದ್ಯಾರ್ಥಿಗಳ ಸಂಖ್ಯೆ ಮತ್ತು ಪ್ರವೇಶಕ್ಕೆ ಅರ್ಜಿ ಹಾಕಿರುವವರ ಸಂಖ್ಯೆ ಒಂದೇ ಆದರೆ ಸೆಲೆಕ್ಟ್ ಕಮಿಟಿ ಅಥವಾ ಕಾಲೇಜಿನ ಡೀನ್‌ರವರು ಅಥವಾ ಪ್ರಿನ್ಸಿಪಾಲರು ಅರ್ಹತೆ ನೋಡಿ ಸೀಟು ಕೊಡುವ ವ್ಯವಸ್ಥೆ ಮಾಡುವವರೇ?

**ಶ್ರೀ ಕೆ. ನಾಗಪ್ಪ ಆಳ್ವ** : ತಮ್ಮ ಸೂಚನೆ ಆಲೋಚಿಸತಕ್ಕ ವಿಷಯ. ಆದರೆ ಈಗ ನೋಡುವಾಗ ಬಹಳ ಕಷ್ಟವೆಂದು ತೋರುತ್ತದೆ.

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ** : ಅದಕ್ಕೆ ಕಾರಣವೇನು? ಈಗ ಮೆಡಿಕಲ್ ಕಾಲೇಜಿಗೆ ಸೇರಬೇಕಾದ ಶೇಕಡ 50ರಷ್ಟು ನಂಬರು ಬಂದಿರಬೇಕೆಂದು ತೀರ್ಮಾನ ಮಾಡಿದೆ. ಹಾಗೆ ಬಂದಿರುವವರ ಸಂಖ್ಯೆ ಮತ್ತು ಸ್ಥಾನಗಳ ಸಂಖ್ಯೆ ಒಂದೇ ಆದರೆ ನಾನು ಸೂಚಿಸಿದಂತೆ ಮಾಡಲು ತೊಂದರೆಯೇನು?

**ಶ್ರೀ ಕೆ. ನಾಗಪ್ಪ ಆಳ್ವ** : ಆ ಕಾರಣ ಇಲ್ಲಿ ಹೇಳಲು ಸಾಧ್ಯವೇ ಆಗಲಿಕ್ಕಿಲ್ಲ.

**ಶ್ರೀ ವಿ.ಆರ್. ನಾಯ್ಡು** : ಈಗ ಮೆಡಿಕಲ್ ಕಾಲೇಜಿನ ಸೀಟುಗಳ ಹಂಚಿಕೆಯಾಗುವಾಗ ಹೆಣ್ಣುಮಕ್ಕಳನ್ನು ಇಂಟರ್‌ವ್ಯೂಗೆ ಕರೆದಾಗ ಸಂಗೀತ ಮತ್ತು ಡ್ಯಾನ್ಸ್ ಬರುತ್ತದೆಯೇ ಎಂದು ಕೇಳುವುದು, ಸಂಗೀತ ಹೇಳಿ, ಡ್ಯಾನ್ಸ್ ಮಾಡಿ ಎಂದು ಹೇಳುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಇಲ್ಲ.

**ಶ್ರೀ ಜೆ.ಬಿ. ಮಲ್ಲಾರಾಧ್ಯ** : ಅರ್ಹತೆ ಕಂಡುಹಿಡಿಯಲು ಸಂಗೀತ ಹೇಳಿಸಿ, ಭರತನಾಟ್ಯದ ಅಭ್ಯಾಸವಾಗಿದೆಯೇ ಎಂದು ಡ್ಯಾನ್ಸ್ ಮಾಡಿಸಿ ನೋಡಿದರೆ ತಪ್ಪೇನು!!

(ನಗು)

**ಶ್ರೀ ವಿ.ಆರ್. ನಾಯ್ಡು** : ಹೆಣ್ಣು ಮಕ್ಕಳನ್ನು ಸಂಗೀತ ಹೇಳಿ, ಡ್ಯಾನ್ಸ್ ಮಾಡಿ ಎಂದು ಹೇಳುವ ಪ್ರೊಸೀಜರ್ ಇದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಅಂಥಾ ಪ್ರೊಸೀಜರ್ ಏನೂ ಇಲ್ಲ.

**ಶ್ರೀ ವಿ. ವೆಂಕಟಪ್ಪ** : ಹಾಗೇನಾದರೂ ಮಾಡಿದ್ದಾರೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಗೊತ್ತಿಲ್ಲ.

**ಶ್ರೀ ಕೆ. ಆರ್. ಆಚಾರ್** : ಹಾಗೆ ನಡೆದಿದೆಯೇ ಎಂದು ಸರ್ಕಾರ ಕೇಳುವುದೇ?

**ಶ್ರೀ ಕೆ. ನಾಗಪ್ಪ ಆಳ್ವ** : ಸ್ಪೆಸಿಫಿಕ್ ಇನ್‌ಸ್ಟನ್ಸಸ್ ಕೊಟ್ಟರೆ ವಿಚಾರ ಮಾಡಬಹುದು.

**ಶ್ರೀ ಎಸ್.ಎಸ್. ನಾರಾಯಣ ಮೂರ್ತಿ** : ಶೇಕಡ 50 ನಂಬರು ಬಂದರೆ ಪ್ರವೇಶವಕಾಶ ಕೊಡುವರೋ ಅಥವಾ ಬೇರೆ ಇನ್ನೇನಾದರು ಅರ್ಹತೆ ಬೇಕೋ?

**ಶ್ರೀ ಕೆ. ನಾಗಪ್ಪ ಆಳ್ವ**: ಸೆಲೆಕ್ಟ್ ಕಮಿಟಿ ಇಂಟರ್‌ವ್ಯೂ ಮಾರ್ಕ್ಸ್ ಬೇರೆ ಗಣನೆಗೆ ತೆಗೆದುಕೊಳ್ಳಲಾಗುವುದು.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ**: ಹಿಂದುಳಿದ ಪಂಗಡ ಎಂದು ಆ ಅರ್ಹತೆಯನ್ನು ಆಧಾರವಾಗಿಟ್ಟುಕೊಳ್ಳುವುದು ಸರಿಯಲ್ಲವೆಂದು ಹೈಕೋರ್ಟ್ ಮತ್ತು ಸುಪ್ರೀಮ್ ಕೋರ್ಟ್ ತೀರ್ಮಾನ ಮಾಡಿದ ಮೇಲೆ ಸರ್ಕಾರ ಜಾತಿ ಆಧಾರವಲ್ಲದೆ ಬೇರೆ ಆಧಾರದ ಮೇಲೆ ಸ್ಥಾನಗಳನ್ನು ಕೊಡುವ ವಿಚಾರ ಆಲೋಚಿಸಿ ಆರ್ಡರು ಮಾಡಬೇಕೆಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ** : ಸರ್ಕಾರ ಈ ವಿಷಯದಲ್ಲಿ ಆಲೋಚನೆ ಮಾಡುತ್ತಿದೆ.

**ಶ್ರೀ ವಿ. ಶ್ರೀನಿವಾಸ ಶೆಟ್ಟಿ** : ಸಾಧಾರಣವಾಗಿ ಯಾವಾಗ ಈ ಬಗ್ಗೆ ಆಜ್ಞೆ ಆಗಬಹುದು?

**ಶ್ರೀ ಕೆ. ನಾಗಪ್ಪ ಆಳ್ವ** : ಆದಷ್ಟು ಬೇಗ ಆಗಬಹುದು.

**ಶ್ರೀ ಎಂ.ಪಿ. ಈಶ್ವರಪ್ಪ** : ಕಡಿಮೆ ನಂಬರು ಬಂದಿರುವವರಿಗೆ ಸೀಟು ಕೊಟ್ಟು ಹೆಚ್ಚು ನಂಬರು ಬಂದಿರುವವರಿಗೆ ಕೊಡದಿರುವುದರಿಂದ ತಾನೇ ಹೈಕೋರ್ಟ್ ಮತ್ತು ಸುಪ್ರೀಮ್ ಕೋರ್ಟ್ ರಿಟ್ ಅರ್ಜಿಯನ್ನು ಸ್ವೀಕರಿಸಿರುವುದು? ಅಕೆಡಮಿಕ್ ಮಾರ್ಕ್ಸ್ ಕಡಿಮೆ ಪಡೆದಿರುವವರಿಗೆ ಅವಕಾಶ ಕೊಟ್ಟಿರುವುದರಿಂದ ತಾನೇ ಕೋರ್ಟಿನವರು ರಿಟ್ ಹಾಕಿದವರಿಗೆ ಅವಕಾಶ ನೀಡುವಂತೆ ಆರ್ಡರು ಮಾಡಿರುವುದು?

**ಶ್ರೀ ಕೆ. ನಾಗಪ್ಪ ಆಳ್ವ** : ಅದು ಮಾತ್ರವಲ್ಲ.

**ಶ್ರೀ ಎಂ. ಪಿ. ಈಶ್ವರಪ್ಪ :** ಹಾಗಾದರೆ ಮತ್ತೇನು ಕಾರಣವಿದೆ?

**ಶ್ರೀ ಕೆ. ನಾಗಪ್ಪ ಆಳ್ವ :** ಗವರ್ನ್‌ಮೆಂಟ್ ಆರ್ಡರ್ ಸರಿಯಾಗಿಲ್ಲ, ಹಿಂದುಳಿದ ಪಂಗಡದವರಿಗೆ ಪ್ರಾತಿನಿಧ್ಯ ಕೊಟ್ಟಿರುವುದು ಸರಿಯಾಗಿಲ್ಲ ಎಂದು ತಿಳಿಸಿದ್ದಾರೆ.

**ಶ್ರೀ ಎಂ.ಪಿ. ಈಶ್ವರಪ್ಪ :** ಹಾಗಾದರೆ ಹೈಕೋರ್ಟ್ ಜಡ್ಜಮೆಂಟಿನಲ್ಲಿ ಕಡಿಮೆ ನಂಬರು ಬಂದವರಿಗೆ ಸೀಟು ಕೊಟ್ಟಿರುವುದು ಸರಿಯಲ್ಲವೆಂದು ತಿಳಿಸಿಲ್ಲವೇ? ಅದೂ ಒಂದು ಕಾರಣವಲ್ಲವೇ?

**ಶ್ರೀ ಕೆ. ನಾಗಪ್ಪ ಆಳ್ವ :** ಅದು ಮುಖ್ಯ ಕಾರಣವಲ್ಲ.

**ಶ್ರೀ ಅಜೀಜ್ ಸೇಟ್ :** ಹಿಂದುಳಿದ ಪಂಗಡದವರಿಗೆ ಸ್ಥಾನಗಳನ್ನು ಮೀಸಲಿಡಲು ಸಂಬಂಧಪಟ್ಟ ಸಮಿತಿಯ ವರದಿಯಂತೆ ತೀರ್ಮಾನಿಸಿರುವುದು ಹೈಕೋರ್ಟ್ ಮತ್ತು ಸುಪ್ರೀಮ್ ಕೋರ್ಟುಗಳಲ್ಲಿ ಸರಿಯಿಲ್ಲವೆಂದು ತೀರ್ಮಾನವಾದ ಮೇಲೆ ಯಾವ ರೀತಿ ಮಾಡಬೇಕೆಂದು ಯೋಚಿಸಿದ್ದೀರಿ?

**ಶ್ರೀ ಕೆ. ನಾಗಪ್ಪ ಆಳ್ವ :** ಅದನ್ನು ಯೋಚನೆ ಮಾಡುತ್ತಿದ್ದೇವೆ.

**ಶ್ರೀ ಎಂ. ಪಿ. ಈಶ್ವರಪ್ಪ :** ರಿಟ್ ಹಾಕಿದವರ ಪೈಕಿ ಬಹು ಮಂದಿಗೆ ಸೀಟು ಕೊಡಲಾಗಿದೆಯಲ್ಲವೇ?

**ಶ್ರೀ ಕೆ. ನಾಗಪ್ಪ ಆಳ್ವ :** ಕೊಟ್ಟಿದೆ.

**ಶ್ರೀ ಜೆ. ಬಿ. ಮಲ್ಲಾರಾಧ್ಯ :** ಇನ್ನು ಮುಂದೆ ಜಾತಿವಾದ ಬಿಟ್ಟು ಆರ್ಥಿಕವಾಗಿ ಹಿಂದುಳಿದವರಿಗೆ ಮಾತ್ರ ಪ್ರವೇಶಕ್ಕೆ ಹೆಚ್ಚು ಅವಕಾಶ ಮಾಡಬೇಕೆಂದು ಕೇಂದ್ರ ಸರ್ಕಾರದವರು ನಮ್ಮ ಸರ್ಕಾರಕ್ಕೆ ಸೂಚನೆ ಕೊಟ್ಟಿರುವರೇ? ಅದನ್ನನುಸರಿಸಿ ಈ ವಿಚಾರದಲ್ಲಿ ಸರ್ಕಾರ ಏನು ವ್ಯವಸ್ಥೆ ಮಾಡಿದೆ?

**ಶ್ರೀ ಕೆ. ನಾಗಪ್ಪ ಆಳ್ವ :** ಆ ತರಹ ಸೂಚನೆ ಇಷ್ಟರವರೆಗೆ ಬಂದಿಲ್ಲ.

**ಶ್ರೀ ಜೆ. ಬಿ. ಮಲ್ಲಾರಾಧ್ಯ :** ದೇಶಾದ್ಯಂತ ಇರುವ ವೃತ್ತ ಪತ್ರಿಕೆಗಳಲ್ಲಿ ಮೈಸೂರು ಮತ್ತು ಇತರ ದೇಶಗಳ ಸರ್ಕಾರದವರು ಕೇಂದ್ರ ಸರ್ಕಾರದ ಆದೇಶವಂತೆ ನಡೆದುಕೊಳ್ಳಬೇಕೆಂದು ಸೂಚಿಸಿರುವುದಾಗಿ ಪ್ರಕಟವಾಗಿರುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ :** ಇದು ಅರ್ಥವಾಗುವ ಪ್ರಶ್ನೆಯಲ್ಲ. ನನ್ನ ತಿಳುವಳಿಕೆಗೆ ಅಂಥ ಡೈರೆಕ್ಟೀವ್ ಯಾವುದೂ ಬಂದಿಲ್ಲ.

ಶ್ರೀ ಎಂ.ಪಿ. ಈಶ್ವರಪ್ಪ: ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಎಲ್ಲ ರಿಟ್ ಅರ್ಜಿಗಳಲ್ಲಿ ನಾವು ನೋಡಿರುವಂತೆ ಭಾರೀ ಪ್ರಮಾಣದ ತಾರತಮ್ಯ ಮತ್ತು ಅನ್ಯಾಯ ಮಾಡಲಾಗಿದೆ ಎಂಬುದು ತೋರುತ್ತದೆ. ಉಚ್ಚನ್ಯಾಯಾಲಯಕ್ಕೆ ಹೋಗಲು ಶಕ್ತಿ ಇರುವಂಥವರಿಗೆ ಪರಿಹಾರ ಸಿಗುತ್ತದೆ. ನ್ಯಾಯಾಲಯಕ್ಕೆ ಪರಿಹಾರ ಕೋರಿ ಹೋಗಲು ಶಕ್ತಿ ಇಲ್ಲದಂಥವರ ಪಾಡೇನು? ಹೋಗುವ ಉದ್ದೇಶವಿಲ್ಲದಂಥವರು ಅವರ ಕುಂದುಕೊರತೆಗಳ ನಿವಾರಣೆಗೆ ಸರ್ಕಾರ ಯಾವ ಕ್ರಮ ತೆಗೆದುಕೊಂಡಿದೆಯೇ?

ಶ್ರೀ ಕೆ. ನಾಗಪ್ಪ ಆಳ್ವ: ಇಲ್ಲಿಯು ಕೂಡಾ 11 ರಿಟ್ ಅರ್ಜಿಗಳನ್ನು ನಿರಾಕರಿಸಲಾಗಿದೆ.

ಶ್ರೀ ಜೆ.ಬಿ. ಮಲ್ಲಾರಾಧ್ಯ : ಆರ್ಥಿಕ ದೃಷ್ಟಿಯಿಂದ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕೊಡಬೇಕೆಂದು ಸರ್ಕಾರಕ್ಕೆ ಆದೇಶ ಬಂದಿಲ್ಲವೆಂದು ಹೇಳಿದರು. ಹಾಗಾದರೆ ರಿಟ್ ಅರ್ಜಿಗಳ ಮೇಲೆ ಹೈಕೋರ್ಟ್ ತೀರ್ಮಾನಕ್ಕನುಸಾರವಾಗಿ ಯಾವುದಾದರೂ ಒಂದು ದೃಷ್ಟಿಯಿಂದ ಪ್ರವೇಶಾವಕಾಶ ಕೊಡುವುದನ್ನು ತೀರ್ಮಾನ ಮಾಡಬೇಕು. ಸರ್ಕಾರ ಯಾವ ಆಧಾರದ ಮೇಲೆ ಇನ್ನು ಮುಂದೆ ಅವಕಾಶ ಕೊಡಬೇಕೆಂದು ತೀರ್ಮಾನ ಮಾಡಿದೆ?

ಶ್ರೀ ಕೆ. ನಾಗಪ್ಪ ಆಳ್ವ: ಈ ವಿಚಾರವನ್ನು ಗಮನಿಸಿ ಸರ್ಕಾರ ಬೇಕಾದಷ್ಟು ಕಾರ್ಯಕ್ರಮ ತೆಗೆದುಕೊಳ್ಳುತ್ತಿದೆ.

ಶ್ರೀ ಜೆ.ಬಿ. ಮಲ್ಲಾರಾಧ್ಯ: ಜಾತಿಯ ಆಧಾರದ ಮೇಲೆ ಹಂಚುವುದು ರಾಜ್ಯಾಂಗಕ್ಕೆ ವಿರುದ್ಧವೆಂದು ಸುಪ್ರೀಂಕೋರ್ಟ್ ತೀರ್ಮಾನ ಕೊಟ್ಟ ಮೇಲೆ ಅದನ್ನು ಬಿಟ್ಟು ಪರಿಣಾಮಕಾರಿಯಾಗಿ ಯಾವ ಪರಿಹಾರ ಕಂಡುಹಿಡಿದು ಪ್ರವೇಶಾವಕಾಶ ಮಾಡಿಕೊಡಬೇಕೆಂದು ಸರ್ಕಾರ ಯೋಚನೆ ಮಾಡುತ್ತಿದೆ?

ಶ್ರೀ ಕೆ. ನಾಗಪ್ಪ ಆಳ್ವ : ಇನ್ನು ಸರಿಯಾದ ನಿರ್ಧಾರಕ್ಕೆ ಬಂದಿಲ್ಲ.

ಶ್ರೀ ಜೆ. ಬಿ. ಮಲ್ಲಾರಾಧ್ಯ : ಸರ್ವೋಚ್ಚನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯದ ತೀರ್ಮಾನದ ತರುವಾಯ ನೀವು ಯಾವ ರೀತಿಯ ತೀರ್ಮಾನವನ್ನು ತೆಗೆದುಕೊಂಡಿದ್ದೀರಾ? ವೃತ್ತಿ ಕಾಲೇಜುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕಾಗಿ ನೀವು ಯಾವ ರೀತಿಯ ಪರಿಹಾರಕ್ಕೆ ಆಲೋಚನೆ ಮಾಡಿದ್ದೀರಾ?

ಶ್ರೀ ಕೆ. ನಾಗಪ್ಪ ಆಳ್ವ: ನಾನು ಈ ಪ್ರಶ್ನೆಗೆ ಈಗಾಗಲೇ ಉತ್ತರ ಕೊಟ್ಟಿದ್ದೇನೆ.

**ಶ್ರೀ ಎಂ.ಪಿ. ಈಶ್ವರಪ್ಪ:** ಯಾರಿಗೆ ಪ್ರವೇಶವನ್ನು ನೀಡಲಾಗಿದೆಯೋ ಅಂಥ ವಿದ್ಯಾರ್ಥಿಗಳ ಮತ್ತು ಯಾರಿಗೆ ಪ್ರವೇಶವನ್ನು ನಿರಾಕರಿಸಲಾಗಿದೆಯೋ ಅಂಥ ವಿದ್ಯಾರ್ಥಿಗಳು ಪಡೆದಿರುವ ಅಂಕಗಳ ಶೇಕಡಾ ಪ್ರಮಾಣವನ್ನು ತೋರಿಸುವ ಹೇಳಿಕೆಯನ್ನು ಸರ್ಕಾರ ಸದನದ ಮುಂದೆ ಮಂಡಿಸುವುದೇ?

**ಮಾನ್ಯ ಸಭಾಪತಿ:** ಹಾಗೆ ಮಾಡಬಹುದೆಂದು ನನಗೆ ಅನ್ನಿಸುತ್ತಿಲ್ಲ.

**ಶ್ರೀ ಎಸ್.ಡಿ. ಗಾವುಂಕರ್:** ಈ ಎಲ್ಲ ತೊಂದರೆಗಳನ್ನು ತಪ್ಪಿಸುವ ಸಲುವಾಗಿ ಅರ್ಹತೆಯ ಆಧಾರದ ಮೇಲೆ ಮಾತ್ರವೇ ವಿದ್ಯಾರ್ಥಿಗಳಿಗೆ ಪ್ರವೇಶ ಕೊಡಲು ಸರ್ಕಾರ ಆಲೋಚನೆ ಮಾಡಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ:** ಇದೊಂದು ಸಲಹೆ.

### ದಾವಣಗೆರೆಯಲ್ಲಿನ ಹೆರಿಗೆ ಆಸ್ಪತ್ರೆ
### ವಿ.ಪ. (17–03–1966)

## ದಾವಣಗೆರೆ ಪುರಸಭಾ ಹೆರಿಗೆ ವಾರ್ಡ್

**ಶ್ರೀ ಐಯ್ಯನಹಳ್ಳಿ ದೊಡ್ಡವೀರಪ್ಪ: (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):** ಸರ್ಕಾರ ಈ ಮುಂದಿನ ವಿಷಯದ ಬಗ್ಗೆ ದಯವಿಟ್ಟು ತಿಳಿಸುವುದೇ:–

(ಎ) ದಾವಣಗೆರೆ ನಗರಸಭೆಯು 50,000 ರೂಪಾಯಿಗಳ ಮಂಜೂರಾತಿಗೆ ಒಪ್ಪಿರುವ ಮತ್ತು ಪುರಸಭೆಯ ಹೆರಿಗೆವಾರ್ಡಿನ ನಿರ್ವಹಣೆಯನ್ನು ಸರ್ಕಾರಕ್ಕೆ ವರ್ಗಾವಣೆ ಮಾಡುವ ನಿರ್ಣಯವನ್ನು ಅಂಗೀಕರಿಸಿರುವುದು ನಿಜವೇ?

(ಬಿ) ಹಾಗಿದ್ದರೆ, ಈ ಸಂಬಂಧವಾಗಿ ಸರ್ಕಾರ ತೆಗೆದುಕೊಂಡ ಕ್ರಮವೇನು?

**ಶ್ರೀ ಕೆ. ನಾಗಪ್ಪ ಆಳ್ವ (ಆರೋಗ್ಯ ಸಚಿವರು):**

ಎ) ಹೌದು.

ಬಿ) ಈ ವಿಷಯ ಪರಿಶೀಲನೆಯಲ್ಲಿದೆ.

**ಶ್ರೀ ವಿ.ಆರ್. ನಾಯ್ಡು** : ದಾವಣಗೆರೆ ಮುನಿಸಿಪಾಲಿಟಿಯವರು ಈ ನಿರ್ಣಯ ಮಾಡಿ ಸರ್ಕಾರಕ್ಕೆ ಯಾವಾಗ ಕಳಿಸಿಕೊಟ್ಟರು?

**ಶ್ರೀ ಕೆ. ನಾಗಪ್ಪ ಆಳ್ವ** : 03–12–1964ರಲ್ಲಿ ಕಳಿಸಿಕೊಟ್ಟರು.

**ಶ್ರೀ ವಿ. ಆರ್. ನಾಯ್ಡು** : ನಿರ್ಣಯದಲ್ಲಿರುವ ಪ್ರಕಾರ ಅದನ್ನು ಕಾರ್ಯಗತ ಮಾಡುತ್ತೀರಾ?

**ಶ್ರೀ ಕೆ. ನಾಗಪ್ಪ ಆಳ್ವ** : ದಾವಣಗೆರೆ ಮುನಿಸಿಪಾಲಿಟಿಯಿಂದ ಪ್ರತ್ಯೇಕವಾಗಿ ಒಂದು ಪತ್ರ ಬಂದಿದ್ದು ಅದರಲ್ಲಿ ಅವರು ತಿಳಿಸಿರುವುದೇನೆಂದರೆ, ಮೊದಲು ನಿರ್ಣಯ ಮಾಡಿದ ಪ್ರಕಾರ ಈಗ ಐವತ್ತು ಸಾವಿರ ಕೊಡಲು ಸಾಧ್ಯವಿಲ್ಲ. ಆದರೆ, ಈಗ ಮೂವತ್ತು ಸಾವಿರ ರೂಪಾಯಿ ಕೊಡಲು ಸಾಧ್ಯವಿದೆ ಎಂದು ಅವರಿಗೆ ಪುನಃ ನಾವು ಕಾಗದ ಬರೆದು ತಿಳಿಸಿದ್ದೇವೆ. ಮೊದಲು ನಿರ್ಣಯ ಮಾಡಿದ ಪ್ರಕಾರ ಐವತ್ತು ಸಾವಿರ ರೂಪಾಯಿ ಕೊಡಬೇಕೆಂದು ತಿಳಿಸಿದ್ದೇವೆ.

**ಶ್ರೀ ವಿ. ಆರ್. ನಾಯ್ಡು** : ನಗರಸಭೆಯ ಹೆರಿಗೆ ಆಸ್ಪತ್ರೆಯಲ್ಲಿ ಸರಿಯಾದ ಸೌಲಭ್ಯಗಳಿಲ್ಲವಾದ್ದರಿಂದ ಅದನ್ನು ಸರ್ಕಾರಕ್ಕೆ ವಹಿಸಿಕೊಟ್ಟರೆ ಚೆನ್ನಾಗಿ ಇರುತ್ತದೆಯೆಂದು ಐವತ್ತು ಸಾವಿರ ರೂಪಾಯಿ ಕೊಡಬೇಕೆಂದು ನಿರ್ಣಯ ಮಾಡಿದರು. ಈ ಆಸ್ಪತ್ರೆ ವಹಿಸಿಕೊಳ್ಳುವುದನ್ನು ಜಾಗ್ರತೆ ಕಾರ್ಯಗತ ಮಾಡುತ್ತೀರಾ?

**ಶ್ರೀ ಕೆ. ನಾಗಪ್ಪ ಆಳ್ವ** : ಈ ಹೆರಿಗೆ ಆಸ್ಪತ್ರೆ ಆಡಳಿತವನ್ನು ಸರ್ಕಾರಕ್ಕೆ ಒಪ್ಪಿಸಿ ಬಿಟ್ಟರೆ ಇನ್ನೂ ಒಳ್ಳೆಯದಾಗಿ ನಡೆಯುತ್ತದೆಯೆಂದು ನಿರ್ಣಯ ಮಾಡಿ ತಿಳಿಸಿದ್ದಾರೆ. ಈಗ ಸಧ್ಯಕ್ಕೆ ಮೂವತ್ತು ಸಾವಿರ ರೂಪಾಯಿ ಪ್ರಾರಂಭದಲ್ಲಿ ಕೊಟ್ಟರೂ ಕೂಡ ಹೆಚ್ಚು ಖರ್ಚು ಬರುವುದರಿಂದ ಹೆಚ್ಚಿನ ಹಣ ಕೊಡುವುದಕ್ಕೆ ತಯಾರು ಇರಬೇಕೆಂದು ತಿಳಿಸಿದ್ದೇವೆ. ನಮಗೆ ಅವರಿಂದ ಇದರ ಬಗ್ಗೆ ಪ್ರಾರ್ಥನೆ ಬರಬೇಕು. ಅದು ಬಂದ ಮೇಲೆ ಏರ್ಪಾಡು ಮಾಡುತ್ತೇವೆ.

**ಶ್ರೀಮತಿ ಎಂ.ಆರ್. ಲಕ್ಷಮ್ಮ** : ಈ ರೀತಿ ತಿಳಿಸಿ ಎಷ್ಟು ಕಾಲವಾಯಿತು?

**ಶ್ರೀ ಕೆ. ನಾಗಪ್ಪ ಆಳ್ವ** : ಈ ರೀತಿ ತಿಳಿಸಿ ಸಾಧಾರಣ ಎರಡು ವಾರ ಆಯಿತು.

**ಶ್ರೀಮತಿ ಎಂ.ಆರ್. ಲಕ್ಷಮ್ಮ** : ಐವತ್ತು ಸಾವಿರ ರೂಪಾಯಿ ಕೊಡಲು ಆಗದೇ ಇದ್ದರೆ ಈ ಮೆಟರ್ನಿಟಿ ವಾರ್ಡ್ ಕಟ್ಟಿಸಲು ಆಗುವುದಿಲ್ಲವೇ?

**ಶ್ರೀ ಕೆ. ನಾಗಪ್ಪ ಆಳ್ವ :** ಮೊದಲು ಐವತ್ತು ಸಾವಿರ ರೂಪಾಯಿ ಕೊಡುತ್ತೇವೆಂದು ನಿರ್ಣಯ ಮಾಡಿದ್ದರು. ಇದಕ್ಕೆ ಈಗಾಗಲೇ ಮೂವತ್ತು ಸಾವಿರ ರೂಪಾಯಿ ಖರ್ಚಾಗಿದೆ. ಇಷ್ಟನ್ನು ಕೊಡಲು ಅವರು ತಯಾರಾಗಿದ್ದಾರೆ. ಸಂಪೂರ್ಣವಾಗಿ ಐವತ್ತು ಸಾವಿರ ರೂಪಾಯಿ ಈಗಾಗಲೆ ಕೊಡದೇ ಇದ್ದರೂ ಸಹ ಈಗ ಮೂವತ್ತು ಸಾವಿರ ಕೊಡಿ, ಅದನ್ನು ತೆಗೆದುಕೊಳ್ಳುತ್ತೇವೆ ಮತ್ತು ಹೆಚ್ಚು ಹಣ ಖರ್ಚಾದರೆ ಅದನ್ನು ಕೊಡಲು ನೀವು ತಯಾರಾಗಿರಬೇಕು, ಮೊದಲು ನಿರ್ಣಯದಲ್ಲಿ ಒಪ್ಪಿಕೊಂಡಿದ್ದೀರಿ, ಆದುದರಿಂದ ಇದಕ್ಕೆ ಒಪ್ಪಿಕೊಂಡು ನಮಗೆ ಉತ್ತರ ಕೊಡಬೇಕು ಎಂದು ಕೇಳಿದ್ದೇವೆ.

**ಶ್ರೀ ಜೆ.ಬಿ. ಮಲ್ಲಾರಾಧ್ಯ :** ಈ ನಿರ್ಣಯವನ್ನು ಕಾರ್ಯಗತ ಮಾಡುವುದಕ್ಕೆ ಸರ್ಕಾರಕ್ಕೆ ಏನು ತೊಂದರೆ ಇದೆ?

**ಶ್ರೀ ಕೆ. ನಾಗಪ್ಪ ಆಳ್ವ :** ಮುನಿಸಿಪಾಲಿಟಿ ಆಡಳಿತದಲ್ಲಿ ಇದ್ದರೆ ಅದು ಪ್ರತ್ಯೇಕವಾಗಿ ಇರುತ್ತದೆ. ನಾವು ಆಡಳಿತ ವಹಿಸಿಕೊಂಡಮೇಲೆ ಡಾಕ್ಟರನ್ನು ನಾವು ಕೊಡಬೇಕಾಗುತ್ತದೆ. ಸರ್ಕಾರಿ ಜನರಲ್ ಹಾಸ್ಪಿಟಲ್‌ನಲ್ಲಿ ಬೇಕಾದಂಥಹ ಅನುಕೂಲತೆಯಾಗುತ್ತದೆ; ಎಲ್ಲ ಅನುಕೂಲತೆ ಸರಿಯಾಗಿ ಸಿಗಬೇಕೆಂದು ಈ ತರಹದ ನಿರ್ಣಯ ಅವರು ಮಾಡಿದ್ದಾರೆ.

**ಶ್ರೀ ವಿ.ಆರ್. ನಾಯ್ಡು :** ಈ ಸಂಬಂಧದಲ್ಲಿ ದಾವಣಗೆರೆ ಮುನಿಪಾಲಿಟಿ ಪ್ರೆಸಿಡೆಂಟರು ಕೌನ್ಸಿಲರುಗಳ ಒಂದು ನಿಯೋಗ ಬಂದಿದ್ದರು, ಅವರು ಯಾವಾಗ ಬಂದಿದ್ದರು?

**ಶ್ರೀ ಕೆ. ನಾಗಪ್ಪ ಆಳ್ವ :** ನಿಯೋಗ ಪ್ರತ್ಯೇಕವಾಗಿ ಬಂದಿಲ್ಲ. ಆದರೆ ಈ ಪ್ರಶ್ನೆ ಶ್ರೀ ಐಯನಹಳ್ಳಿ ದೊಡ್ಡವೀರಪ್ಪನವರು ವಿಶೇಷವಾಗಿ ತಿಳಿಸಿದ್ದಾರೆ.

**ಶ್ರೀ ಜೆ. ಬಿ. ಮಲ್ಲಾರಾಧ್ಯ :** ಇಷ್ಟು ಹಣ ವರ್ಷೇ ವರ್ಷೇ ಕೊಡಬೇಕೇ?

**ಶ್ರೀ ಕೆ. ನಾಗಪ್ಪ ಆಳ್ವ :** ಮೂವತ್ತು ಸಾವಿರ ಖರ್ಚಾಗಿದೆ; ಐವತ್ತು ಸಾವಿರ ಕೊಡಬೇಕಾಗುತ್ತದೆ.

**ಶ್ರೀ ಜೆ. ಬಿ. ಮಲ್ಲಾರಾಧ್ಯ :** ಐವತ್ತು ಸಾವಿರ ರೂಪಾಯಿ ಲೆಕ್ಕ ಮಾಡಿ ಹೇಳಲಾಗಿವೆಯೇ ಅಥವಾ ಮುಗಮ್ ಆಗಿ ಐವತ್ತು ಸಾವಿರ ಕೊಡಿ ಎಂದು ಕೇಳಿದೆಯೇ?

**ಶ್ರೀ ಕೆ. ನಾಗಪ್ಪ ಆಳ್ವ :** ಸ್ಪಷ್ಟವಾಗಿ ಲೆಕ್ಕ ಮಾಡಿ ಅವರಿಗೆ ಲೆಕ್ಕ ಕೊಟ್ಟಿದೆ. ಮೂವತ್ತು ಸಾವಿರದಲ್ಲಿ ಆಗುವುದಿಲ್ಲ. ಹೆಚ್ಚು ಖರ್ಚು ಆಗುತ್ತದೆ. ಯಾಕೆಂದರೆ ಅನುಕೂಲತೆಗಳನ್ನು ಹೆಚ್ಚೆಚ್ಚು ಮಾಡಬೇಕಾಗುತ್ತದೆ.

ಅಂತರಂಗ ಬಹಿರಂಗ
ಆತ್ಮ ಸಂಗ ಒಂದೇ ಅಯ್ಯ ।
ನಾದ–ಬಿಂದು–ಕಳಾತೀತ
ಆದಿಯಾಹಾರ ನೀನೇ ಅಯ್ಯ ।
ಆರೂಢದ ಕೂಟದ ಸುಖವ
ಕೂಡಲ ಸಂಗಯ್ಯ ತಾನೇ ಬಲ್ಲ ।

– ಬಸವಣ್ಣ

# ವಿಧಾನಸಭೆಯಲ್ಲಿ ಸಂತಾಪ ಸೂಚಕ ನಿರ್ಣಯ

**[11ನೇ ಫೆಬ್ರವರಿ, 1997ರಂದು ಕರ್ನಾಟಕ ವಿಧಾನ ಸಭೆಯಲ್ಲಿ ಸನ್ಮಾನ್ಯ ಸಭಾಧ್ಯಕ್ಷರಾದ ರಮೇಶ್ ಕುಮಾರ್**ರವರು ಮಂಡಿಸಿದ ಸಂತಾಪ ಸೂಚನೆಯು ಈ ಕೆಳಗೆ ನಮೂದಿಸಿದಂತೆ ದಾಖಲಾಗಿದೆ]

**ಸಭಾಧ್ಯಕ್ಷರು:-**

"ವಿಧಾನ ಸಭೆಯ ಮಾಜಿ ಸದಸ್ಯರು ಹಾಗೂ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಡಾ॥ ಕೆ.ನಾಗಪ್ಪ ಆಳ್ವ ಅವರು ದಿನಾಂಕ 3-10-1996 ರಂದು ನಿಧನರಾದರು. ವೃತ್ತಿಯಲ್ಲಿ ವೈದ್ಯರಾಗಿದ್ದ ಶ್ರೀಯುತರು 1957ರಲ್ಲಿ ಪಾಣೆ, ಮಂಗಳೂರು ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾಗಿ ಸದರಿ ಕ್ಷೇತ್ರವನ್ನು ಎರಡು ಬಾರಿ ಪ್ರತಿನಿಧಿಸಿದ್ದರು. 1962ರಲ್ಲಿ ಶ್ರೀ ನಿಜಲಿಂಗಪ್ಪ ಅವರ ಸಂಪುಟದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಯೋಜನಾ ಸಚಿವರಾಗಿಯೂ ಸೇವೆ ಸಲ್ಲಿಸಿದ್ದರು. ರಾಜ್ಯ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸಿದ್ದ ಶ್ರೀಯುತರು 1970ರಲ್ಲಿ ರಾಜ್ಯ ಸಭೆಗೂ ಆಯ್ಕೆಯಾಗಿದ್ದರು. ತುರ್ತುಪರಿಸ್ಥಿತಿಯಲ್ಲಿ 14 ತಿಂಗಳ ಕಾಲ ಜೈಲುವಾಸವನ್ನು ಅನುಭವಿಸಿದ್ದ ಶ್ರೀಯುತರು ಗಾಂಧಿ ತತ್ವಗಳನ್ನು ನಿಷ್ಠೆಯಿಂದ ಪಾಲಿಸಿದ್ದರು. ವಿನೋಭಾ ಭಾವೆಯವರ ಭೂದಾನ ಚಳುವಳಿಯಲ್ಲಿಯೂ ಸಹ ಸಕ್ರಿಯವಾಗಿ ಪಾಲ್ಗೊಂಡು ಸೇವೆ ಸಲ್ಲಿಸಿದ್ದರು"

**ಶ್ರೀ ಜೆ.ಹೆಚ್.ಪಟೇಲ್ (ಮುಖ್ಯ ಮಂತ್ರಿಗಳು)** : ಸನ್ಮಾನ್ಯ ಅಧ್ಯಕ್ಷರೇ, ಈಗಾಗಲೇ ತಾವು ಮಂಡಿಸಿರತಕ್ಕಂಥ ಸಂತಾಪಸೂಚಕ ನಿರ್ಣಯವನ್ನು ಸಮರ್ಥಿಸುತ್ತಾ, ಈ ಎಲ್ಲಾ ಹಿರಿಯರು ಹಾಗೂ ರಾಜ್ಯ ಮತ್ತು ರಾಷ್ಟ್ರದ ರಾಜಕಾರಣದಲ್ಲಿ ಭಾಗವಹಿಸಿದ್ದಂಥ ಹಿರಿಯರಾದ ಡಾಕ್ಟರ್ ನಾಗಪ್ಪ ಆಳ್ವ, ಜಗನ್ನಾಥರಾವ್ ಚಂದ್ರಿಕೆ, ಕೆ.ಎಫ್.ಪಾಟೀಲ್, ನಮ್ಮ ಜನರೇಶನ್‌ನವರಾದ ಬಹಳ ಹತ್ತಿರದ ಸ್ನೇಹಿತರಾದ ಶಿವಲಿಂಗಪ್ಪ, ಪೂರ್ಣಮುತ್ತಪ್ಪ, ಜಿ.ಎಸ್. ಬಾಗಲಕೋಟ್, ಡಿ.ಟಿ.ರಾಮು- ಇವರ ನಿಧನಕ್ಕೆ ಹೃತ್ಪೂರ್ವಕವಾದ ಸಂತಾಪವನ್ನು ಸೂಚನೆ ಮಾಡಿ ಅವರ ಕುಟುಂಬವರ್ಗದವರಿಗೆ ಈ ನಷ್ಟವನ್ನು ಭರಿಸಿಕೊಳ್ಳತಕ್ಕಂಥ ಶಕ್ತಿಯನ್ನು ದೇವರು ಕೊಡಲಿ ಎಂದು ಪ್ರಾರ್ಥಿಸಿ, ನಾನು ತಮ್ಮ ನಿರ್ಣಯವನ್ನು ಬೆಂಬಲಿಸುತ್ತೇನೆ.

* * *

ತದನಂತರ ವಿರೋಧ ಪಕ್ಷದ ನಾಯಕರಾಗಿದ್ದ ಶ್ರೀ ಮಲ್ಲಿಕಾರ್ಜುನ ಖರ್ಗೆಯವರು, ಶ್ರೀ ವಾಟಾಳ್ ನಾಗರಾಜ್‌ರವರು, ಶ್ರೀ ಜೆ.ಪಿ.ಶ್ರೀರಾಮರೆಡ್ಡಿಯವರು, ಶ್ರೀ ಕೆ.ಎಸ್.ಪುಟ್ಟಣ್ಣಯ್ಯರವರು, ಶ್ರೀ ಸಿದ್ದರಾಮಯ್ಯರವರು, ಶ್ರೀ ಟಿ.ಬಿ.ಜಯಚಂದ್ರರವರು, ಶ್ರೀ ತಿಪ್ಪೇಸ್ವಾಮಿಯವರು, ಶ್ರೀ ಪಿ.ಜಿ.ಆರ್.ಸಿಂಧ್ಯರವರು, ಶ್ರೀ ಚಂದ್ರಕಾಂತ್ ಬೆಲ್ಲದ್‌ರವರು, ಶ್ರೀ ಜಿ.ಬಿ.ಶಿವಕುಮಾರ್‌ರವರು, ಶ್ರೀಮತಿ ಬಿ.ಟಿ.ಲಲಿತಾ ನಾಯಕ್‌ರವರು, ಶ್ರೀ ಡಿ.ಟಿ.ಜಯಕುಮಾರ್‌ರವರು, ಶ್ರೀ ಎಂ.ಪಿ.ಪ್ರಕಾಶ್‌ರವರು ದಿವಂಗತರುಗಳಿಗೆ ತಮ್ಮ ನುಡಿನಮನಗಳನ್ನು ಸಲ್ಲಿಸಿದರು.

**[ಸನ್ಮಾನ್ಯ ಸಭಾಧ್ಯಕ್ಷರ ಕೋರಿಕೆಯಂತೆ ಸಭೆಯು ಎದ್ದು ನಿಂತು ಒಂದು ನಿಮಿಷ ಮೌನವನ್ನು ಆಚರಿಸಿತು. ಸನ್ಮಾನ್ಯ ಸಭಾಧ್ಯಕ್ಷರು ಸಭೆಯು ಅಂಗೀಕರಿಸಿದ ಸಂತಾಪಸೂಚನ ನಿರ್ಣಯವನ್ನು ದಿವಂಗತರ ಕುಟುಂಬದವರಿಗೆ ಕಳುಹಿಸುವುದಾಗಿ ಪ್ರಕಟಿಸಿದರು]**

****

## ವಿಧಾನ ಪರಿಷತ್ತಿನಲ್ಲಿ ಸಂತಾಪ ಸೂಚನೆ

**[11ನೇ ಫೆಬ್ರವರಿ, 1997ರಂದು ಕರ್ನಾಟಕ ವಿಧಾನ ಪರಿಷತ್ತಿನಲ್ಲಿ ಸನ್ಮಾನ್ಯ ಸಭಾಪತಿಯವರಾದ ಡಿ.ಬಿ. ಕಲ್ಮಣ್‌ಕರ್‌ರವರು ಮಂಡಿಸಿದ ಸಂತಾಪ ಸೂಚಕ ನಿರ್ಣಯವು ಈ ಕೆಳಗೆ ನಮೂದಿಸಿದಂತೆ ದಾಖಲಾಗಿದೆ.]**

**ಸಭಾಪತಿಯವರು:**

ಶ್ರೀ ನಾಗಪ್ಪ ಆಳ್ವ, ಮಾಜಿ ಸಚಿವರು, ಸ್ವಾತಂತ್ರ್ಯ ಹೋರಾಟಗಾರರು ಮತ್ತು ಗಾಂಧೀಜಿ ಅನುಯಾಯಿ ಆಗಿದ್ದು 3ನೇ ಅಕ್ಟೋಬರ್, 1996 ರಂದು ನಿಧನ ಹೊಂದಿದರು. ಇವರು 1957-62ನೇ ಸಾಲಿನಲ್ಲಿ ವಿಧಾನಸಭೆಯ ಸದಸ್ಯರಾಗಿದ್ದರು ಮತ್ತು ಪುನಃ ಇವರು 1962ರಲ್ಲಿ ಕ್ಷೇತ್ರದ ಪಾಣೆ, ಮಂಗಳೂರು ಚುನಾವಣೆ ಕ್ಷೇತ್ರದಿಂದ ವಿಧಾನಸಭೆಗೆ ಆಯ್ಕೆಯಾದವರು ಮತ್ತು ಆರೋಗ್ಯ ಸಚಿವರು ಆಗಿದ್ದರು. ಇವರು ಅನೇಕ ಸಂಘ-ಸಂಸ್ಥೆಗಳ ಅಧ್ಯಕ್ಷರಾಗಿದ್ದರು ಮತ್ತು ಶ್ರೇಷ್ಠ ವೈದ್ಯರಾಗಿದ್ದರು. ಇವರು "ಉಪ್ಪಿನ ಸತ್ಯಾಗ್ರಹ"ವು ಒಳಗೊಂಡಂತೆ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರು, ಮತ್ತು ಅನೇಕ ಸಂದರ್ಭಗಳಲ್ಲಿ ಸೆರೆವಾಸ ಶಿಕ್ಷೆ ಅನುಭವಿಸಿದ್ದರು. ಇವರ ಸಾವಿನಿಂದಾಗಿ ರಾಜ್ಯವು ಅರ್ಪಣಾಭಾವದ ಒಬ್ಬ ಸ್ವಾತಂತ್ರ್ಯ ಹೋರಾಟಗಾರ ಮತ್ತು ಒಬ್ಬ ಗಾಂಧಿವಾದಿಯನ್ನು ಕಳೆದುಕೊಂಡಂತಾಗಿದೆ.

## ಸಂತಾಪ ಸೂಚನಾ ನಿರ್ಣಯದ ನಂತರ

ವಿಧಾನ ಪರಿಷತ್ತಿನ ಸಭಾನಾಯಕರಾಗಿದ್ದಂಥ ಶ್ರೀ ಎಂ.ಸಿ.ನಾಣಯ್ಯ ಅವರು ಹಾಗೂ ಮಾನ್ಯ ವಿರೋಧ ಪಕ್ಷದ ನಾಯಕರಾಗಿದ್ದಂಥ ಶ್ರೀ ಹೆಚ್.ಕೆ.ಪಾಟೀಲ್, ಡಿ.ಹೆಚ್.ಶಂಕರಮೂರ್ತಿ, ಬಿ.ಎಸ್.ಹೊರಟ್ಟಿ, ಡಾ|| ಮಹದೇವ ಬಣಕಾರ್– ಅವರುಗಳು ಸಂತಾಪ ಸೂಚನ ನಿರ್ಣಯದ ಮೇಲೆ ಮಾತನಾಡಿ ಅಗಲಿದ ಗಣ್ಯರಿಗೆ ತಮ್ಮ ಶ್ರದ್ಧಾಂಜಲಿಯನ್ನು ಅರ್ಪಿಸಿದರು.

**ಶ್ರೀ ಡಿ.ಹೆಚ್.ಶಂಕರಮೂರ್ತಿ:–** ಮಾನ್ಯ ಸಭಾಪತಿಯವರೇ, ಈ ದಿವಸ ತಾವು ಮಂಡಿಸಿರತಕ್ಕಂಥ ಸಂತಾಪ ಸೂಚಕ ನಿರ್ಣಯಕ್ಕೆ ನನ್ನ ಪಕ್ಷದ ಪರವಾಗಿ ಮತ್ತು ನನ್ನ ಪರವಾಗಿ ಧ್ವನಿಗೂಡಿಸುತ್ತಾ ಪ್ರಮುಖವಾಗಿ ಡಾ|| ಕೆ.ನಾಗಪ್ಪ ಆಳ್ವ ಅವರ ಬಗ್ಗೆ ಒಂದೆರಡು ಮಾತುಗಳನ್ನು ಆಡಬೇಕೆಂದು ನನಗನಿಸುತ್ತದೆ. ನಾಗಪ್ಪ ಆಳ್ವ ಅವರ ಜೀವನ ಒಂದು ರೀತಿಯ ಹೋರಾಟದ ಜೀವನವಾಗಿತ್ತು. ಅವರು ಸಾತ್ವಿಕ ಮತ್ತು ಮೃದು ಸ್ವಭಾವದವರೆಂದು ಎಲ್ಲರೂ ತಿಳಿದುಕೊಂಡಿದ್ದರು. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದಂಥ ಹಿರಿಯ ವ್ಯಕ್ತಿಗಳಲ್ಲಿ ಅವರೂ ಒಬ್ಬರಾಗಿದ್ದರು. ಸ್ವಾತಂತ್ರ್ಯಕ್ಕಾಗಿ ಹೋರಾಟ ಒಂದು ಮಾತ್ರವಲ್ಲ; ಎರಡನೆಯ ಸ್ವಾತಂತ್ರ್ಯ ಸಂಗ್ರಾಮದಲ್ಲೂ ಪಾಲ್ಗೊಂಡಿದ್ದರು. ಈ ದೇಶದಲ್ಲಿ ತುರ್ತು ಪರಿಸ್ಥಿತಿಯನ್ನು ಹೇರಿದಾಗ ಅದರ ವಿರುದ್ಧವಾಗಿ ಸೆರೆಮನೆಯ ವಾಸವನ್ನು ಸ್ವತಂತ್ರ ಭಾರತದಲ್ಲೂ 13 ತಿಂಗಳ ಕಾಲ ಅನುಭವಿಸಿದಂಥ ಹಿರಿಯ ಜೀವ ಅವರದ್ದು. ಜೈಲಿನೊಳಗೆ ಅವರ ಜೊತೆಯಲ್ಲಿ ಸ್ವಲ್ಪ ದಿವಸ ಕಾಲ ಕಳೆಯುವ ಅವಕಾಶ ನನಗೆ ಸಿಕ್ಕಿತ್ತು. ಆಗ ಅವರು ಆಡುತ್ತಿದ್ದಂಥ ಮಾತುಗಳು–ನಡೆದುಕೊಳ್ಳುತ್ತಿದ್ದಂಥ ರೀತಿ ನೀತಿಗಳಿಂದ ಅಲ್ಲಿರತಕ್ಕಂಥ ಯುವಕರುಗಳ ಹೃದಯವನ್ನು ತಮ್ಮ ಕಡೆಗೆ ಎಳೆದುಕೊಳ್ಳುತ್ತಿದ್ದರು. ಜೈಲಿನಲ್ಲಿದ್ದಾಗಲೂ ಸಹ ನಾಗಪ್ಪ ಆಳ್ವ ಅವರು ನಗುನಗುತ್ತಾ ಮಾತನಾಡುತ್ತಿದ್ದುದನ್ನು ನೋಡಿದಾಗ ಅವರು ಜೈಲಿನಲ್ಲಿದ್ದಾರೋ ಅಥವಾ ಎಲ್ಲಾದರೂ ಸ್ವತಂತ್ರವಾಗಿದ್ದಾರೋ ಎನ್ನುವ ಭಾವನೆ ಬರುವ ಹಾಗಿತ್ತು. ಆ ಹಿರಿಯ ಜೀವ ನಡೆದುಕೊಳ್ಳುತ್ತಿದ್ದುದನ್ನು ನಾನು ಆಗಾಗ್ಗೆ ನೆನಪು ಮಾಡಿಕೊಳ್ಳುತ್ತಿರುತ್ತೇನೆ. ಜೈಲಿನಲ್ಲಿ ಇರುವಾಗಲೇ ಅವರಿಗೆ 60 ವರ್ಷಗಳು ತುಂಬಿದ ದಿನ ಬಂತು. 60 ವರ್ಷಗಳು ತುಂಬಿದ ಸಮಾರಂಭವನ್ನು ನಾವು ಜೈಲಿನಲ್ಲೇ ಆಚರಣೆ ಮಾಡಿದೆವು. ಬಹುಶ ಇಂಥಹ ಅವಕಾಶ ಬೇರೆ ಹಿರಿಯರಿಗೆ ಸಿಕ್ಕಿತ್ತೋ ಇಲ್ಲವೋ ನನಗೆ ಗೊತ್ತಿಲ್ಲ. ಈ ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಜೆಗಳು ಹೋರಾಡಬೇಕೆಂದು ಅವರು ಹೇಳುತ್ತಿದ್ದರು. ಈ ದೇಶಕ್ಕೆ ಎರಡನೆಯ ಸಾರಿ ಸ್ವಾತಂತ್ರ್ಯ ಸಿಕ್ಕ ನಂತರ, ಈ ದೇಶದ ಬಹಳ ದೊಡ್ಡ ಸ್ವಾತಂತ್ರ್ಯ ಸಂಗ್ರಾಮದ ನಾಯಕರಾಗಿದ್ದಂಥ ಮಾನ್ಯ ಜಯಪ್ರಕಾಶ ನಾರಾಯಣ್ ಅವರ ಕಿಡ್ನಿಗೆ

ಧಕ್ಕೆಯಾಗಿದ್ದು ಅವರಿಗೆ ಸಿಗಬೇಕಾದ ಸೌಲಭ್ಯಗಳು ಸರಿಯಾಗಿ ಸಿಗುತ್ತಿವೆಯೋ ಇಲ್ಲವೋ ಎಂದು ನೋಡಿಕೊಳ್ಳುವುದಕ್ಕೆ ನೇಮಕ ಮಾಡಲಾಗಿದ್ದ ಸಮಿತಿಯ ಅಧ್ಯಕ್ಷರಾಗಿಯೂ ಮಾನ್ಯ ನಾಗಪ್ಪ ಆಳ್ವ ಅವರು ಕೆಲಸ ಮಾಡಿದ್ದರು. ಡಾ|| ನಾಗಪ್ಪ ಆಳ್ವರವರು ರಾಜ್ಯಸಭೆಯ ಸದಸ್ಯರಾಗಿದ್ದರು. ಕರ್ನಾಟಕದಲ್ಲಿ ಮಂತ್ರಿಗಳಾಗಿದ್ದವರು, ಇಷ್ಟೆಲ್ಲ ಚಟುವಟಿಕೆಗಳ ಮಧ್ಯ ಅವರು ತಾವು ಒಬ್ಬ ವೈದ್ಯರು ಎಂದು ನೆನಪು ಮಾಡಿಕೊಳ್ಳುತ್ತಿದ್ದು ಮಾತ್ರವಲ್ಲದೆ, ಕೊನೆತನಕ ಅವರು ನಗುನಗುತ್ತಾ ಮಾತನಾಡುತ್ತಿದ್ದರು. ಅವರು ಯಾವಾಗಲೂ ನಗುತ್ತಿರುತ್ತಾರೆ. ಮತ್ತು ಬಹಳ ಮೃದು ಎಂದು ಅವರನ್ನು ಯಾರಾದರೂ ಬಗ್ಗಿಸಬಹುದೆಂದು ತಿಳಿದುಕೊಂಡಿದ್ದರೆ ಅದು ಸಾಧ್ಯ ಆಗುತ್ತಿರಲಿಲ್ಲ. ಅವರು ಹಠವಾದಿಯಾಗಿದ್ದರು, ಛಲವಾದಿಯಾಗಿದ್ದರು. ಮೊದಲನೆ ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ನಾನು ಬಹಳ ಚಿಕ್ಕವನಾಗಿದ್ದುದರಿಂದ ಅವರನ್ನು ಆಗ ನೋಡಲಿಕ್ಕಾಗಿರಲಿಲ್ಲ. ತುರ್ತು ಪರಿಸ್ಥಿತಿ ವಿರುದ್ಧ ಹೋರಾಟದಲ್ಲಿ ಅವರು ಮಂಚೂಣಿಯಲ್ಲಿ ನಿಂತುಕೊಂಡರು. ಅವರು ಯಾವುದೇ ರೀತಿಯಲ್ಲಿ ಬಗ್ಗುತ್ತಿರಲಿಲ್ಲ. ಈ ದೇಶಕ್ಕೆ ಸ್ವಾತಂತ್ರ್ಯ ಇರಬೇಕು, ಪತ್ರಿಕಾ ಸ್ವಾತಂತ್ರ್ಯ ಇರಬೇಕು, ಪ್ರತಿಯೊಬ್ಬ ನಾಗರೀಕರಿಗೂ ಸ್ವಾತಂತ್ರ್ಯ ಇರಬೇಕೆಂದು ನಿರ್ಭೀತವಾಗಿ ಎದ್ದು ನಿಂತಂಥ ಕೆಲವೇ ವ್ಯಕಿಗಳಲ್ಲಿ ಅವರು ಒಬ್ಬರಾಗಿದ್ದರು. ಅಂದರೆ, ಮೊದಲ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ಎರಡನೇ ಸ್ವಾತಂತ್ರ್ಯ ಸಂಗ್ರಾಮದಲ್ಲೂ ಭಾಗವಹಿಸಿದಂಥ ಕೆಲವೇ ವ್ಯಕ್ತಿಗಳಲ್ಲಿ ಡಾ|| ನಾಗಪ್ಪ ಆಳ್ವ ಅವರೂ ಒಬ್ಬರು. ಅವರೂ ಸಹ ಇವತ್ತು ನಮ್ಮನ್ನು ಅಗಲಿ ಹೋಗಿದ್ದಾರೆ. ದಿವಂಗತರ ಆತ್ಮಕ್ಕೆ ದೇವರು ಮೋಕ್ಷವನ್ನು ಕೊಡಲಿ ಎಂದು ಪ್ರಾರ್ಥಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

****

**ಶ್ರೀ ಎಂ.ಪಿ.ಈಶ್ವರಪ್ಪ (ವಿಧಾನ ಪರಿಷತ್‌ನ ಅಂದಿನ ವಿರೋಧಪಕ್ಷದ ನಾಯಕರು):**

ಡಾ॥ ಕೆ.ನಾಗಪ್ಪ ಆಳ್ವರವರು ನಾವು ಕಂಡ ರಾಜಕಾರಣಿಗಳಲ್ಲಿ ಸೌಮ್ಯರು, ಸಭ್ಯರು, ಸ್ನೇಹಪರರು ಆದ ವ್ಯಕ್ತಿಗಳು. ದೇಶದ ಭವಿಷ್ಯದ ಬಗ್ಗೆ ಚಿಂತನೆ ಹರಿಸಿ ನಿಸ್ಪೃಹರಾಗಿ ಅವರು ಅನೇಕ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸಿದ್ದಾರೆ.

ತಮ್ಮ ನಿಷ್ಪಕ್ಷಪಾತದ ತತ್ವಗಳನ್ನು ಯಾವ ಕಾಲಕ್ಕೂ ಬಿಟ್ಟುಕೊಡದೆ, ಅವುಗಳ ಬಗ್ಗೆ ಯಾವುದೇ ರೀತಿಯ ರಾಜಿ ಮಾಡಿಕೊಳ್ಳದೆ, ನಿಸ್ವಾರ್ಥ ಸೇವೆ ಮಾಡಿದ ವ್ಯಕ್ತಿಗಳು. ಅನೇಕ ಸಾರಿ ನಾನು ವಿರೋಧಪಕ್ಷದ ನಾಯಕನಾಗಿದ್ದಾಗ ಅವರನ್ನು ಅನೇಕ ಕಾರಣಗಳಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ತರಾಟೆಗೆ ತೆಗೆದುಕೊಂಡರೂ ಕೂಡ ತಮ್ಮ ಶಾಂತ ಸ್ವಭಾವವನ್ನು ಎಂದಿಗೂ ಕಳೆದುಕೊಳ್ಳದೆ ಸೌಮ್ಯ ರೀತಿಯಲ್ಲಿ ಎದುರಿಸುತ್ತ ಇದ್ದುದು ಮಹತ್ವವಲ್ಲದೆ, ಈ ಚರ್ಚೆಯಿಂದ ನಮ್ಮ ಸ್ನೇಹಪರತೆಗೆ ಎಂದೂ ಅಪವಾದವಾಗಲಿಲ್ಲ.

ಡಾ॥ ಆಳ್ವರವರು ನಮ್ಮ ರಾಜ್ಯದ ಹಿರಿಯ ರಾಜಕಾರಣಿಗಳಾಗಿದ್ದ ಶ್ರೀ ನಿಜಲಿಂಗಪ್ಪ ಅವರ ಆಪ್ತ ಹಿಂಬಾಲಕರು ಮತ್ತು ಅನುಯಾಯಿಗಳಾಗಿದ್ದವರು. ಒಮ್ಮೆ ಶ್ರೀ ನಿಜಲಿಂಗಪ್ಪ ಅವರು ಸ್ನಾನಗೃಹದಲ್ಲಿ ಬಿದ್ದು ಮೂಳೆ ಮುರಿದುಕೊಂಡಾಗ ಶ್ರೀ ನಾಗಪ್ಪ ಆಳ್ವರವರು ಅವರ ಚಿಕಿತ್ಸೆ ಬಗ್ಗೆ ಶ್ರಮವಹಿಸಿಕೊಂಡು ನಿಗಾ ವಹಿಸುತ್ತಿದ್ದುದನ್ನು, ನಾನು ಗಮನಿಸಿ, ಸ್ವಲ್ಪ ಲಘುವಾಗಿ ಮಾತನಾಡಿ ನಿಜಲಿಂಗಪ್ಪರವರಿಗೆ ಬೇರೆ ಸ್ಪೆಶಲಿಸ್ಟ್ ವೈದ್ಯರಿಂದಲೇ ಚಿಕಿತ್ಸೆ ಮಾಡಿಸುವುದು ನಿಮ್ಮ ಹಿತದೃಷ್ಟಿಯಿಂದಲೇ ಒಳ್ಳೆಯದು ಎಂದು ಹೇಳಿದಾಗ ಅವರು ಯಾವ ಪ್ರತಿಕ್ರಿಯೆಯನ್ನೂ ಮಾಡದೆ, ಅದೇ ರೀತಿಯಲ್ಲಿ ಸ್ಪೆಶಲಿಸ್ಟ್ ಒಬ್ಬರಿಗೆ ಚಿಕಿತ್ಸೆ ಮಾಡಲು ಅನುವು ಮಾಡಿಕೊಟ್ಟರು. ತುರ್ತು ಪರಿಸ್ಥಿತಿಯ ಕಾಲದಲ್ಲಿ ಜೈಲು ವಾಸವನ್ನು ಅನುಭವಿಸಿದ್ದರು. ಅವರು ಎಂದೂ ಲಂಚದ ಆಮಿಷಕ್ಕೆ ಕೈ ಒಡ್ಡಿದವರಲ್ಲ. ರಾಜಕಾರಣಕ್ಕೆ ಬಂದ ಮೇಲೆ ತಮ್ಮ ವೃತ್ತಿ ಜೀವನವನ್ನು ಬಿಟ್ಟಿದ್ದರಿಂದ ಅವರು ಸಾಲಗಾರರಾಗಿದ್ದರೆಂಬುದನ್ನು ನಾನು ಕೇಳಿದ್ದೇನೆ. ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದ ರಾಜಕಾರಣಿಗಳಲ್ಲಿ ನಿಷ್ಕಳಂಕ ವ್ಯಕ್ತಿ ಎಂದು ಡಾ॥ ಆಳ್ವರವರು ಹೆಸರು ಗಳಿಸಿಕೊಂಡಿದ್ದಾರೆ.

**ಶ್ರೀ ಸಂಜೀವನಾಥ ಐಕಳ (ಮಾಜಿ ಶಾಸಕ, ಸ್ವಾತಂತ್ರ್ಯ ಹೋರಾಟಗಾರ) :**

ನಾನು ಕಂಡ ರಾಜಕಾರಣಿಗಳಲ್ಲಿ ಡಾ॥ ನಾಗಪ್ಪ ಆಳ್ವರವರು ಸರಳ, ಸಜ್ಜನ, ಪ್ರಾಮಾಣಿಕ ರಾಜಕಾರಣಿಯಾಗಿದ್ದರು. ಸ್ವಾತಂತ್ರ್ಯ ಹೋರಾಟದಲ್ಲಿ ನಾವೆಲ್ಲರೂ ಸೇರಿ ನಿರ್ವಹಿಸಿದ ಪಾತ್ರವು ಇಂದಿಗೂ ನಮ್ಮ ನೆನಪಿನಲ್ಲಿದೆ. ಸಚಿವರಾಗಿದ್ದಾಗ ಅವರು ಸಾರ್ವಜನಿಕವಾದ ಹಲವಾರು ಕೆಲಸ ಕಾರ್ಯಗಳನ್ನು ಮಾಡಿದ್ದರು. ವಾಸ್ತವತೆಗಳ ಕಡೆಗೆ ಹೆಚ್ಚು ಗಮನ ಕೊಡುತ್ತಿದ್ದ ಅವರು ಎಲ್ಲರೂ ಮೆಚ್ಚುವಂಥ ರೀತಿಯಲ್ಲಿ ಕಾರ್ಯ ನಿರ್ವಹಿಸಿದ್ದರು. ಆಳ್ವರವರು ಜನಸಾಮಾನ್ಯರುಗಳ ಪ್ರೀತಿವಿಶ್ವಾಸವನ್ನು ಗಳಿಸಿಕೊಂಡವರಾಗಿದ್ದರು.

**ಶ್ರೀ ಕೆ.ಅಮರನಾಥ ಶೆಟ್ಟಿ (ಮಾಜಿ ಸಚಿವರು) :**

ನನ್ನ ಕುಟುಂಬೀಯರೂ ಆಗಿದ್ದ ಡಾ॥ ಕೆ.ನಾಗಪ್ಪ ಆಳ್ವರು ಪ್ರಾಮಾಣಿಕ ಹಾಗೂ ಸಜ್ಜನ ರಾಜಕಾರಣಿ ಎಂದು ಹೆಸರು ಗಳಿಸಿಕೊಂಡಿದ್ದರು. ರಾಷ್ಟ್ರಪ್ರೇಮ ಮತ್ತು ಪಕ್ಷ ನಿಷ್ಠೆಯು ಅವರಲ್ಲಿ ಅಪಾರವಾಗಿತ್ತು. ಪಕ್ಷ ಬೇಧವಿಲ್ಲದೆ ಎಲ್ಲರೊಂದಿಗೆ ಬೆರೆತು ಇತರರಿಗೆ ಪ್ರೀತಿವಾತ್ಸಲ್ಯವನ್ನು ತೋರಿಸಿ ಜನಮನ್ನಣೆ ಗಳಿಸಿಕೊಂಡಿದ್ದರು. ಯುವ ಪೀಳಿಗೆಯ ಬಗ್ಗೆ ಹೆಚ್ಚು ಆತ್ಮವಿಶ್ವಾಸವನ್ನು ಹೊಂದಿದ್ದ ಅವರು ಗಮನೀಯ ರೀತಿಯಲ್ಲಿ ಅವರನ್ನು ಪ್ರೋತ್ಸಾಹಿಸುತ್ತಿದ್ದರು. ತನ್ನ ವೈಶಿಷ್ಟ್ಯತೆಗಳಿಂದ ಜನಮೆಚ್ಚುಗೆಯನ್ನು ಪಡೆದುಕೊಂಡ ವೈದ್ಯ ರಾಜಕಾರಣಿ ಮತ್ತು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ನಮ್ಮೆಲ್ಲರ ಅಭಿಮಾನದ ಸಂಕೇತವಾಗಿದ್ದರು.

**ಬ್ಲೇಸಿಯಸ್ ಡಿ'ಸೋಜಾ (ಮಾಜಿ ಸಚಿವರು), ವಿಧಾನ ಪರಿಷತ್ ಸದಸ್ಯರು:**

ಡಾ॥ ಕೆ.ನಾಗಪ್ಪ ಆಳ್ವರವರು ರಾಷ್ಟ್ರದ ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಮತ್ತು ಪ್ರಾಮಾಣಿಕ ರಾಜಕಾರಣಿ. ಜನಸಾಮಾನ್ಯರ ಬಗ್ಗೆ ಅವರ ಕಾಳಜಿ ಅಪಾರವಾಗಿತ್ತು. ತನ್ನ ವೈದ್ಯವೃತ್ತಿಯಲ್ಲಿ ಅವರು ಬಡಬಗ್ಗರ ಸೇವೆಯನ್ನು ಮಾಡಿದ್ದರು. ತನ್ನ ತತ್ವಾದರ್ಶಗಳಿಗೆ ಅನುಗುಣವಾಗಿ ನಡೆದುಕೊಂಡ ಹಿರಿಯ ದೇಶಪ್ರೇಮಿ ನಾಗಪ್ಪ ಆಳ್ವರವರು ನಮ್ಮಂತಹವರಿಗೆ ಅಂದು ಸೂಕ್ತ ರಾಜಕೀಯ ಮಾರ್ಗದರ್ಶನವನ್ನು ನೀಡಿದ್ದರು. ಎಲ್ಲರನ್ನೂ ಪ್ರೀತಿ ವಿಶ್ವಾಸಗಳಿಂದ ಗೌರವಿಸುತ್ತಿದ್ದ ಅವರನ್ನು ಜನರೆಲ್ಲರೂ ಮೆಚ್ಚಿಕೊಂಡಿದ್ದರು. ಜೇಷ್ಠ ಕಾಂಗ್ರೆಸಿಗ ಡಾ॥ ಆಳ್ವರವರನ್ನು ನಾವು ಹೆಮ್ಮೆಯಿಂದ ನೆನಪಿಸಿಕೊಳ್ಳುತ್ತೇವೆ.

**ಶ್ರೀ ಏರ್ಯ ಲಕ್ಷ್ಮೀನಾರಾಯಣ ಆಳ್ವ [ ಹಿರಿಯ ಸಾಹಿತಿ ] :**

ಇಂದು ರಾಜಕಾರಣದಲ್ಲಿ ಕಾಣಲು ಕಷ್ಟವಾಗಬಹುದಾದ ಅನನ್ಯ ಸರಳ ಮತ್ತು ಸಾತ್ವಿಕ ವ್ಯಕ್ತಿತ್ವ ನಾಗಪ್ಪ ಆಳ್ವರದ್ದು. ಯಾರನ್ನೇ ಕಂಡೊಡನೆ ಅವರ ಮೊಗದಲ್ಲಿ ಅರುಳುತ್ತಿದ್ದ ನಗು, ನಯವಿನಯದ ಮಾತು, ಒಮ್ಮೆಗೆ ಒಂದು ಪ್ರೇಮಲ ವಾತಾವರಣವನ್ನು ನಿರ್ಮಿಸುತ್ತಿತ್ತು. ಯಾರಿಗೂ ಎಂದೂ ಕೇಡು ಬಗೆಯದ, ಕೇಡು ನುಡಿಯದ, ಕೆಡುಕು ಬಗೆಯದ ಬದುಕು ಅವರದ್ದು. ನಿರ್ಮಲ ನಡೆನುಡಿಯ, ಪರಿಶುದ್ಧ ಚಾರಿತ್ರ್ಯದ ಡಾ॥ ನಾಗಪ್ಪ ಆಳ್ವರನ್ನು ಒಮ್ಮೆ ಕಂಡಿದ್ದವರು ಮತ್ತೆಂದೂ ಮರೆಯಲಾರರು.

**ಶ್ರೀ ಕೆ.ಜಯಪ್ರಕಾಶ ಹೆಗ್ಡೆ (ಶಾಸಕರು) ಮಾಜಿ ಸಚಿವರು:**

ಡಾ॥ ಕೆ.ನಾಗಪ್ಪ ಆಳ್ವರವರು ತಾವು ನಂಬಿ ನಡೆದ ತತ್ವಾದರ್ಶಗಳ ಮತ್ತು ಸಿದ್ಧಾಂತಗಳ ಮೌಲ್ಯ ಹಾಗೂ ಅವುಗಳ ಪ್ರತಿಪಾದನೆಯಿಂದ ಇಂದಿಗೂ ಎಲ್ಲರ ಮನಸ್ಸಿನಲ್ಲಿ ಉಳಿದುಕೊಂಡಿದ್ದಾರೆ. ಸರಳ ಮತ್ತು ಪ್ರಾಮಾಣಿಕರಾಗಿದ್ದ ಅವರು ನಮಗೆಲ್ಲರಿಗೂ ಆದರ್ಶ ಗಾಂಧಿಯುಗ ಮೌಲ್ಯದ ಸಂಕೇತವಾಗಿದ್ದಾರೆ.

**ಶ್ರೀ ಕುಂಬ್ಳೆ ಸುಂದರರಾವ್ (ಮಾಜಿ ಶಾಸಕರು) – ಹಿರಿಯ ಯಕ್ಷಗಾನ ಕಲಾವಿದರು:**

ಡಾ॥ ಕೆ. ನಾಗಪ್ಪ ಆಳ್ವರವರು ದಕ್ಷಿಣ ಕನ್ನಡ ಜಿಲ್ಲೆಯ ಜನರ ಮನಸ್ಸಿನಲ್ಲಿ ಎಂದೂ ಮಸೂದೆ ಉಳಿಯುವವರು. ರಾಜಕಾರಣದಲ್ಲಿ ಹೆಸರು ಪಡೆದಂತೆ ವೈದ್ಯರಾಗಿಯೂ, ಜನಾನುರಾಗಿಯಾಗಿದ್ದವರು. ಮಂಗಳೂರಿನ ಹಂಪನಕಟ್ಟೆಯಲ್ಲಿರುವ ಹಳೆಯ ಕಟ್ಟಡವನ್ನು ಕಂಡಾಗ ಅವರ ವೈದ್ಯವೃತ್ತಿ ನಡೆಸುತ್ತಿದ್ದ ಕಾಲ ನೆನಪಾಗುತ್ತಿದೆ. ನಾನು ಯಕ್ಷಗಾನದ ಕ್ಷೇತ್ರದಲ್ಲಿ ಆರಂಭದ ಹೆಜ್ಜೆಯಿಟ್ಟ ಕಾಲದಲ್ಲಿ ಮೇಳದ ಯಜಮಾನರಾದ ಕೊರಗಶೆಟ್ಟರು ಡಾ॥ ನಾಗಪ್ಪ ಆಳ್ವರಲ್ಲಿಗೆ ಚಿಕಿತ್ಸೆಗೆ ಕರೆದುಕೊಂಡು ಹೋದರು. ಅವರ ನಗುಮುಖ, ಸ್ನೇಹದ ಮಾತು, ಧೈರ್ಯ ಕೊಡುವ ಮಾತಿನ ಆತ್ಮೀಯತೆ ಯಾವುದೂ ಮರೆಯುವಂತಹದ್ದಲ್ಲ. ವೈದ್ಯ ವೃತ್ತಿಯಲ್ಲಿ ಜನಾನುರಾಗಿಯಾಗಿದ್ದಂತೆ ರಾಜಕಾರಣದಲ್ಲೂ ಅವರ ಹೆಸರು ಆತ್ಮೀಯವಾಗಿತ್ತು. ವಿಧಾನಸಭೆ, ರಾಜ್ಯಸಭೆಗಳ ಸದಸ್ಯತ್ವ, ಮಂತ್ರಿ ಪದವಿ ಈ ಎಲ್ಲವೂ ಅವರ ಒಳ್ಳೆಯತನಕ್ಕೆ ಸಂದ ಗೌರವವಾಗಿದೆ.

**ಶ್ರೀ ಐ.ಎಂ. ಜಯರಾಮಶೆಟ್ಟಿ, ಮಾಜಿ ಸಂಸದರು, ಶಾಸಕರು ಹಾಗೂ ಅಧ್ಯಕ್ಷರು, ಬಂಟರ ಸಂಘ, ಬೆಂಗಳೂರು:**

ರಾಷ್ಟ್ರಪ್ರೇಮಿ, ಸಜ್ಜನ ರಾಜಕಾರಣಿ ಎಂದು ರಾಜ್ಯದ ರಾಜಕೀಯ ಇತಿಹಾಸದಲ್ಲಿ ದಾಖಲಾದ ಡಾ॥ ಕೆ.ನಾಗಪ್ಪ ಆಳ್ವರವರು ದಕ್ಷಿಣ ಕನ್ನಡ ಜಿಲ್ಲೆಯ ಕೊಡುಗೆ. ಸಾತ್ವಿಕರೂ, ವಾತ್ಸಲ್ಯಮಾಯಿಯೂ ಆಗಿದ್ದ ಅವರು ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಗಣನೀಯ ಪಾತ್ರ ವಹಿಸಿದ್ದರು. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿಯೂ ಇವರ ಕ್ರಿಯಾಶೀಲತ್ವ ಉಲ್ಲೇಖನೀಯವಾಗಿತ್ತು, ಗಾಂಧಿಯುಗ ಮೌಲ್ಯದ ಆದರ್ಶ ದೇಶಭಕ್ತ, ಸಾಮಾಜಿಕ ಸ್ವಾಸ್ಥ ಚಿಂತಕ, ಕಾರ್ಮಿಕ ಮುಖಂಡ, ಜನಾನುರಾಗಿ ವೈದ್ಯರಾಗಿ ಇವರು ಸಲ್ಲಿಸಿದ ಸೇವೆಯನ್ನು, ನಾವೆಲ್ಲರೂ ಅಭಿಮಾನದಿಂದ ಸ್ಮರಿಸಿಕೊಳ್ಳುತ್ತೇವೆ. ದಕ್ಷಿಣ ಕನ್ನಡ ಜಿಲ್ಲೆಯ ಬಂಟ ಸಮಾಜದ ಹಿತಚಿಂತಕರೂ ಆಗಿದ್ದ ಜನಾಂಗದ ಹೆಮ್ಮೆಯ ಪುತ್ರ ಡಾ॥ ನಾಗಪ್ಪ ಆಳ್ವರವರನ್ನು ಜನಾಂಗದವರು ಸದಾಕಾಲವೂ ಗೌರವಿಸುತ್ತೇವೆ.

## ಡಿ. ವೀರೇಂದ್ರ ಹೆಗ್ಗಡೆಯವರು, ಶ್ರೀ ಧರ್ಮಸ್ಥಳ

ಭಾರತಕ್ಕೆ ಸ್ವಾತಂತ್ರ್ಯ ದೊರಕಿದ ಸಂದರ್ಭದಲ್ಲಿ ಜನಿಸಿದವರಾದ ನನ್ನಂತಹವರಿಗೆ ಪ್ರೌಢಶಾಲಾ ಮಟ್ಟಕ್ಕೆ ಬರುವಾಗ ಅಂದಿನ ರಾಜಕೀಯ ನೇತಾರರ ಬಗ್ಗೆ ವಿಶೇಷ ಗೌರವಾದರಗಳಿದ್ದವು.

ಅಂದಿನ ರಾಜಕೀಯ ಧುರೀಣರು ದೇಶದ ಸ್ವಾತಂತ್ರ್ಯಕ್ಕಾಗಿ ದುಡಿದವರು, ಹೋರಾಟ ನಡೆಸಿದವರು ಹಾಗೂ ತ್ಯಾಗ ಮಾಡಿದವರಾದುದರಿಂದ, ಪ್ರತಿಯೊಬ್ಬರಲ್ಲಿಯೂ ವಿಶೇಷ ವ್ಯಕ್ತಿತ್ವ ಇತ್ತು.

ಬೇರೆ ಬೇರೆ ವೃತ್ತಿಯಲ್ಲಿದ್ದರೂ, ಅವರು ತಮ್ಮ ಬದುಕು ಮತ್ತು ಸಂಪಾದನೆ ಕಡೆಗೆ ಗಮನ ಕೊಡದೆ ದೇಶದ ಹಿತವನ್ನೆ ಬಯಸಿದ ನಾಯಕರಾಗಿದ್ದರು.

ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಅನೇಕ ಮಂದಿ ರಾಜಕೀಯ ಧುರೀಣದಲ್ಲಿ ಡಾ॥ ಕೆ. ನಾಗಪ್ಪ ಆಳ್ವ ಅವರದ್ದು ಒಂದು ವಿಶಿಷ್ಟ ವ್ಯಕ್ತಿತ್ವವಾಗಿತ್ತು. ಅವರು ವೈದ್ಯಕೀಯ ವೃತ್ತಿಯಲ್ಲಿದ್ದರೂ. ಸದಾ ಖಾದಿ ಬಟ್ಟೆ ಧರಿಸಿ, ಅತ್ಯಂತ ಸರಳ ಜೀವನ ನಡೆಸಿದ ಮಹನೀಯರಾಗಿದ್ದರು. ಜಿಲ್ಲೆಯಲ್ಲಿ ರಾಜಕೀಯ ಚಟುವಟಿಕೆಗಳಿಂದ ರಾಜ್ಯಮಟ್ಟಕ್ಕೆ ಏರಿದವರು.

ನನ್ನ ತೀರ್ಥರೂಪರಾದ ಕೀರ್ತಿಶೇಷ ಡಿ.ರತ್ನವರ್ಮ ಹೆಗ್ಗಡೆಯವರು 1957ರಿಂದ ಒಂದು ಅವಧಿಗೆ ಅಂದಿನ ಮೈಸೂರು ರಾಜ್ಯದ ವಿಧಾನಸಭಾ ಸದಸ್ಯರಾಗಿದ್ದುದರಿಂದ, ಡಾ॥ ನಾಗಪ್ಪ ಆಳ್ವರು ಅವರಿಗೆ ಅತ್ಯಂತ ಸಮೀಪವರ್ತಿಯಾಗಿದ್ದರು. ಅನೇಕ ಬಾರಿ ಅವರು ಬೆಂಗಳೂರಿನಲ್ಲಿರುವ ನಮ್ಮ ನಿವಾಸಕ್ಕೆ ಬರುತ್ತಿದ್ದರು. ಸಹಜವಾಗಿಯೇ ನನ್ನನ್ನೂ, ನನ್ನ ಸಹೋದರರನ್ನೂ ಡಾ॥ ಆಳ್ವರು ಪ್ರೀತಿಯಿಂದ ಮಾತನಾಡಿಸುತ್ತಿದ್ದರು ಮತ್ತು ಪರಿಚಯ ಬೆಳೆಯಿತು.

ಮುಂದೆ ನಾನು ಕಾಲೇಜಿಗೆ ಸೇರುವ ಸಂದರ್ಭದಲ್ಲಿ ಡಾ॥ ನಾಗಪ್ಪ ಆಳ್ವರ ಪುತ್ರ ಜೀವರಾಜ ಆಳ್ವರ ಸ್ನೇಹ ಬೆಳೆಯಿತು.

ದಕ್ಷಿಣ ಕನ್ನಡ ಜಿಲ್ಲಾ ಸಾಂಸ್ಕೃತಿ ಸಂಘ ಎಂಬ ಸಂಘಟನೆಯಲ್ಲಿ ನಾವಿಬ್ಬರೂ ಬೆರೆಯುತ್ತಿದ್ದೆವು ಹಾಗೂ ಅನೇಕ ಕಾರ್ಯಕ್ರಮಗಳನ್ನು ಸಂಘಟಿಸುತ್ತಿದ್ದೆವು. ಇಂತಹ ಸಂದರ್ಭಗಳಲ್ಲಿ ಅನೇಕ ಬಾರಿ ಡಾ॥ ಕೆ. ನಾಗಪ್ಪ ಆಳ್ವ ನಿವಾಸಕ್ಕೆ ನಾನು ಹೋಗುತ್ತಿದ್ದೆ.

ಶ್ರೀಮತಿ ಕಲ್ಯಾಣಿ ನಾಗಪ್ಪ ಆಳ್ವರಿಗೂ ನನ್ನ ಮೇಲೆ ವಿಶೇಷವಾದ ಪ್ರೀತಿ ಇತ್ತು. ಅಲ್ಲಿಗೆ ಹೋದಾಗಲೆಲ್ಲ, ತಂದೆ-ತಾಯಿ ವಿಚಾರ, ಆಹಾರದ ವಿಚಾರವಾಗಿ ಬಹಳ ಪ್ರೀತಿ ಮತ್ತು ಆತ್ಮೀಯತೆಯಿಂದ ಅವರು ವಿಚಾರಿಸಿಕೊಳ್ಳುತ್ತಿದ್ದರು. ಅವರ ಮನೆಗೆ ಯಾರು ಹೋದರೂ ವಿಶೇಷ ಅತಿಥ್ಯಕ್ಕೆ ಆ ಮನೆ ಪ್ರಸಿದ್ಧವಾಗಿತ್ತು.

ಡಾ॥ ಕೆ. ನಾಗಪ್ಪ ಆಳ್ವರು ಬಹಳ ಸೌಮ್ಯ ಸ್ವಭಾವದ ವ್ಯಕ್ತಿತ್ವವನ್ನು ಹೊಂದಿದ್ದರು. ಯಾವಾಗಲೂ ಶಾಂತ ರೀತಿಯಲ್ಲಿ ಅವರು ವ್ಯವಹರಿಸುತ್ತಿದ್ದರು. ರಾಜ್ಯದ ಪ್ರಗತಿಪರ ಕಾರ್ಯಗಳಲ್ಲಿ ಸೂಕ್ತ ನಿರ್ಧಾರ ತೆಗೆದುಕೊಳ್ಳುತ್ತಿದ್ದರು. ಅವರ ನಿಸ್ವಾರ್ಥ ಸೇವೆ ಮತ್ತು ನೇರ ಮಾತುಗಳಿಂದಾಗಿ ರಾಜ್ಯದ ಜನತೆಗೆ ಅವರ ಮೇಲೆ ವಿಶೇಷ ಗೌರವ ಭಾವನೆ ಇತ್ತು.

ಅಂದಿನ ಆರ್ಥಿಕ ಇತಿ-ಮಿತಿಯಲ್ಲಿ ಕೂಡಾ, ರಾಜ್ಯದ ಆಸ್ಪತ್ರೆಗಳಿಗೆ ಹಾಗೂ ವೈದ್ಯಕೀಯ ವಿಜ್ಞಾನ ಸಂಸ್ಥೆಗಳಿಗೆ ಅವರು ಸಾಕಷ್ಟು ಪ್ರೋತ್ಸಾಹ ಕೊಡುತ್ತಿದ್ದರು.

ಜಾತಿ-ಮತ, ಪಂಥದ ಸಂಕುಚಿತ ಎಲ್ಲೆಯನ್ನು ಮೀರಿ ಅಂದಿನ ರಾಜಕೀಯ ಮುಖಂಡರು ಕರ್ತವ್ಯ ನಿರ್ವಹಿಸುತ್ತಿದ್ದರು. ಇದೇ ಸ್ಫೂರ್ತಿಯ, ಶಿಸ್ತಿನ ಸಿಪಾಯಿಯಾಗಿದ್ದ ಡಾ॥ ನಾಗಪ್ಪ ಆಳ್ವರು ರಾಜ್ಯದ ಜನತೆಯ ಮನದಲ್ಲಿ ಹಾಗೂ ಸರಕಾರದಲ್ಲಿ ವಿಶೇಷ ಗೌರವಕ್ಕೆ ಪಾತ್ರರಾಗಿದ್ದರು.

## ಮತ್ತೂರು ಕೃಷ್ಣಮೂರ್ತಿ

ಡಾ॥ ಕೆ. ನಾಗಪ್ಪ ಆಳ್ವರು ಶ್ರೀಮಾನ್ ಸಿದ್ದವನಹಳ್ಳಿ ನಿಜಲಿಂಗಪ್ಪನವರ ಸಮಕಾಲೀನರು. ಅವರು ಹಿಂದಿನ ಮದ್ರಾಸ್ ರಾಜ್ಯದ ಮಂಗಳೂರು ಜಿಲ್ಲೆಯಲ್ಲಿ ಹುಟ್ಟಿ ಬಾಲ್ಯದ ವಿದ್ಯಾಭ್ಯಾಸವನ್ನು ಮಂಗಳೂರಿನಲ್ಲಿ ಮಾಡಿ ನಂತರ ಮದ್ರಾಸಿನ ಮೆಡಿಕಲ್ ಕಾಲೇಜಿನಲ್ಲಿ ವೈದ್ಯಕೀಯ ಪದವಿ ಪಡೆದರು. ಓದುವಾಗಲೇ ಮಹಾತ್ಮಗಾಂಧಿಯವರ ಪ್ರಭಾವಕ್ಕೆ ಒಳಗಾಗಿ ಕಾಂಗ್ರೆಸ್ ಸೇರಿ ಸ್ವತಂತ್ರ ಹೋರಾಟದಲ್ಲಿ ಪಾಲ್ಗೊಂಡರು. ದೇಶದ ಸ್ವಾತಂತ್ರಕ್ಕಾಗಿ ತುರಂಗವಾಸವನ್ನೂ ಅನುಭವಿಸಿದರು.

ಡಾಕ್ಟರ್ ನಾಗಪ್ಪ ಆಳ್ವರು ಸರಳ ಜೀವನ ಮತ್ತು ಉನ್ನತ ಧ್ಯೇಯಗಳನ್ನು ಹೊಂದಿದ್ದ ಜನಾನುರಾಗಿ ವೈದ್ಯರಾಗಿದ್ದರು. ಅವರ ಮೃದು ಸ್ವಭಾವ, ಸೌಜನ್ಯ ಪ್ರವೃತ್ತಿ, ತಾಳ್ಮೆ ಮತ್ತು ಶಾಂತತೆ ಅವರನ್ನು ಜನಾನುರಾಗಿ ವೈದ್ಯರನ್ನಾಗಿ ಮಾಡಿದ್ದಿತು. ಅವರು ವೈದ್ಯಕೀಯ ವೃತ್ತಿ ನಡೆಸುತ್ತಿದ್ದಾಗ ಹಣ ಸಂಪಾದನೆಗಿಂತ ಬಡಬಗ್ಗರಿಗೆ ಸಹಾಯ ಮಾಡುವುದನ್ನೇ ಧ್ಯೇಯವನ್ನಾಗಿಸಿಕೊಂಡಿದ್ದರು.

1956ರ ಭಾಷಾವಾರು ರಾಜ್ಯ ಪುನರ‍್ರಚನೆಯ ನಂತರ ದಕ್ಷಿಣ ಕನ್ನಡ ಜಿಲ್ಲೆಯು ವಿಶಾಲ ಮೈಸೂರು ರಾಜ್ಯಕ್ಕೆ ಸೇರಲಾಗಿ ಡಾಕ್ಟರ್ ನಾಗಪ್ಪ ಆಳ್ವರ ಕಾರ್ಯಕ್ಷೇತ್ರ ಬೆಂಗಳೂರಿಗೆ ಸ್ಥಳಾಂತರಿಸಲ್ಪಟ್ಟಿತು. ಡಾಕ್ಟರ್ ನಾಗಪ್ಪ ಆಳ್ವರು 1962 ರಿಂದ 1967ರ ವರೆಗೆ ಅಧಿಕಾರದಲ್ಲಿದ್ದ ಶ್ರೀ ಎಸ್. ನಿಜಲಿಂಗಪ್ಪನವರ ಸರ್ಕಾರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರಾಗಿ ಕಾಲದಲ್ಲಿ ವಿಶಾಲ ಮೈಸೂರಿನ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಬಹಳ ಪ್ರಗತಿಯನ್ನು ಹೊಂದಿದ್ದಲ್ಲದೇ ವೈದ್ಯಕೀಯ ಶಿಕ್ಷಣಕ್ಕೆ ಅವರು ಹೆಚ್ಚಿನ ಮಹತ್ವವನ್ನು ಕೊಟ್ಟು ಬಹಳ ಅನುಕೂಲತೆಗಳನ್ನು ಕಲ್ಪಿಸಿದರು.

ನಾನು ಕಂಡ ಸ್ವತಂತ್ರ ಹೋರಾಟಗಾರರಲ್ಲಿ ಡಾಕ್ಟರ್ ನಾಗಪ್ಪ ಆಳ್ವರು ಉನ್ನತಮಟ್ಟದ ರಾಜಕೀಯ ಧುರೀಣರಾಗಿದ್ದು ದೇಶ ಸೇವೆಯನ್ನೇ ತಮ್ಮ ಗುರಿ ಹೊಂದಿದವರಾಗಿದ್ದರು.

“ಂತರಂಗವ ಗವಾಕ್ಷಗಳ ತೆರೆದಿಡಲಲ್ಲಿ ।
ಚಿಂತೆ ಕುಮುಲದು, ಹೊಗೆಗಳೊತ್ತವಾತ್ಮವನು ॥
ಶಾಂತಿ ಬೆಳ್ದೊಡೆ ಮನೆಗೆ ಗೋಡೆವೊಲ್ ಕಿಡಿಯಂ ।
ಸಂತತಪೇಕ್ಷಿತವೊ–ಮಂಕುತಿಮ್ಮ

– ಡಿ.ವಿ.ಜಿ.



ರಾಜ್ಯ ಆರೋಗ್ಯ ಸಚಿವರಾಗಿ ಘನತೆವೆತ್ತ ಮಾನ್ಯ ರಾಜ್ಯಪಾಲ
ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರಿಂದ ಪ್ರಮಾಣ ವಚನ ಸ್ವೀಕರಿಸುತ್ತಿರುವ
ಡಾ|| ಕೆ. ನಾಗಪ್ಪ ಆಳ್ವರವರು. ಮುಖ್ಯಮಂತ್ರಿ ಶ್ರೀ ಎಸ್.ಆರ್. ಕಂಠಿ ರವರು ಹಾಗೂ
ಕಾರ್ಯದರ್ಶಿಯವರಾದ ಶ್ರೀ ರೆಬೆಲೋರವರು



ಸುಪುತ್ರರಾದ ಡಾ|| ಜೀವರಾಜ್ ಆಳ್ವ, ಡಾ|| ಮೋಹನ್‌ದೇವ್ ಆಳ್ವ ಮತ್ತು
ಸುಪುತ್ರಿ ಕೆ. ಸರೋಜಿನಿ ಆಳ್ವ



ಮದ್ರಾಸ್ ಮೆಡಿಕಲ್ ಕಾಲೇಜಿನ ಅಧ್ಯಾಪಕರೊಂದಿಗೆ ವಿದ್ಯಾರ್ಥಿ ಸಂಘದ ಕಾರ್ಯದರ್ಶಿ (ಖಾದಿ ವಸ್ತ್ರಧಾರಿ) ಡಾ|| ಕೆ. ನಾಗಪ್ಪ ಆಳ್ವರವರು



ಹಿರಿಯ ರಾಜಕೀಯ ಮುತ್ಸದ್ಧಿಗಳು: ಶ್ರೀನಿವಾಸ್ ಮಲ್ಯ ಬಿ.ಡಿ. ಜತ್ತಿ, ಎಸ್. ನಿಜಲಿಂಗಪ್ಪ, ಮೇಯರ್ ಜೇನಾಬಾಯಿ, ದೇವಿದಾಸ್, ಡಾ|| ಕೆ. ನಾಗಪ್ಪ ಆಳ್ವ, ಕಡಿದಾಳ್ ಮಂಜಪ್ಪ



ರಾಷ್ಟ್ರಪತಿ ಡಾ॥ ಸರ್ವೇ ಪಲ್ಲಿ ರಾಧಾಕೃಷ್ಣನ್ ಮತ್ತು ಕೇಂದ್ರ ಆರೋಗ್ಯ ಸಚಿವೆ
ಸುಶೀಲಾ ನಾಯರ್ ಅವರೊಂದಿಗೆ ಸಮಾಲೋಚನೆಯಲ್ಲಿ ಡಾ॥ ಕೆ. ನಾಗಪ್ಪ ಆಳ್ವ



ಡಾ॥ ಕೆ. ನಾಗಪ್ಪ ಆಳ್ವ – ಶ್ರೀಮತಿ ಕಲ್ಯಾಣಿ ಆಳ್ವ ದಂಪತಿಗಳು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20–00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15–00 |
| 3. | ಶಾಂತವೇರಿ ಗೋಪಾಲಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15–00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20–00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20–00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15–00 |
| 7. | ಜಿ.ವಿ. ಹಳ್ಳಿಕೇರಿ | ಡಾ. ಆರ್.ಎಂ.ಎಲ್. ಪಾಟೀಲ್ | 15–00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15–00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15–00 |
| 10. | ಕೆ.ಟಿ. ಭಾಷ್ಯಂ | ಡಾ. ವಿಘ್ನೇಶ್ ಎನ್. ಭಟ್ | 15–00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15–00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20–00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15–00 |

| | | | |
|---|---|---|---|
| 14. | ಕೆ.ಸಿ. ರೆಡ್ಡಿ | ಡಾ. ಸಂಧ್ಯಾರೆಡ್ಡಿ | 20–00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20–00 |
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20–00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20–00 |
| 18. | ಎಂ. ನಾಗಪ್ಪ | ಡಾ. ಎಂ.ಎಸ್. ಪಾಟೀಲ್ | 15–00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ. ಹೆಚ್.ಎಂ.ಪಂಚಾಕ್ಷರಯ್ಯ | 15–00 |
| 20. | ಗಂಗಾಧರ್ ನಮೋಶಿ | ಡಾ. ಕವಂಟೆ ಹಾಗೂ ಇತರರು | 15–00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15–00 |
| 22. | ಆರ್. ಗುಂಡೂರಾವ್ | ಈಶ್ವರ ದೈತೋಟ | 20–00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15–00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15–00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15–00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30–00 |
| 27. | ಬಿ.ಎಲ್. ಸುಬ್ಬಮ್ಮ | ಡಾ. ಡಿ.ಎಸ್. ಜಯಪ್ಪಗೌಡ | 15–00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20–00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವೆರ್ಣೇಕರ್ | 20–00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಹಾರೋಗದ್ದೆ ಉಷಾ ರಮೇಶ್ ನಾಯಕ್ | 20–00 |
| 31. | ಎಸ್, ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30–00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15–00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20–00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25–00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30–00 |

| | | | |
|---|---|---|---|
| 36. | ಎಸ್.ಸಿ. ಮಲ್ಲಯ್ಯ | ಡಾ. ಟಿ.ಸಿ. ಪೂರ್ಣಿಮ | 20–00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30–00 |
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30–00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20–00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20–00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15–00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ॥ ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 25–00 |
| 51. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–3 | ಡಾ. ಎಂ.ಜಿ. ನಾಗರಾಜ್ | 25–00 |
| 52. | ಬಿ.ಎಂ. ಹೊರಕೇರಿ | ಡಾ. ಎಂ.ಎಸ್. ಪಾಟೀಲ | 20–00 |
| 53. | ಕೆ. ಕೆಂಚಪ್ಪ | ಚಂದ್ರಶೇಖರ ತಾಳ್ಯ | 20–00 |

| | | | |
|---|---|---|---|
| 54. | ಕೇಶವರಾವ ನಿಟ್ಟೂರಕರ್ | ಡಾ. ಜಿ.ಬಿ. ವಿಸಾಜಿ | 20–00 |
| 55. | ಸರದಾರ ಶರಣಗೌಡ ಇನಾಂದಾರ | ಡಾ. ಬಿ.ವ್ಹಿ. ಮಲ್ಲಾಪುರ | 20–00 |
| 56. | ಬಸವರಾಜೇಶ್ವರಿ | ಪ್ರಹ್ಲಾದ ಬೆಟಗೇರಿ | 20–00 |
| 57. | ಕೊಲೂರು ಮಲ್ಲಪ್ಪ | ಗಂಗಾಧರಯ್ಯ ಹಿರೇಮಠ, ಡಾ. ದೇ.ಮಾ. ಪಾಟೀಲ | 20–00 |
| 58. | ದೇವೇಂದ್ರಪ್ಪ ಘಾಳಪ್ಪ ಜಮಾದಾರ | ಡಾ. ನಾಗಬಾಯಿ ಬಿ.ಬುಳ್ಳಾ | 20–00 |
| 59. | ಮೊಹಮ್ಮದ್ ಅಲಿ | ಪ್ರೊ॥ ಶಿವರಾಜ ಪಾಟೀಲ | 20–00 |
| 60. | ಬಿ. ಶ್ಯಾಮಸುಂದರ್ | ಗಂಧರ್ವ ಸೇನಾ | 20–00 |
| 61. | ಶಂಕರಶೆಟ್ಟಿ ಪಾಟೀಲ | ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ | 20–00 |

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20-00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15-00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20-00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20-00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15-00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20-00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20-00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15-00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20-00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಲೂರು ಸುದರ್ಶನ್ | 20-00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶನಾಲಯ | 15-00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15-00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15-00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15-00 |

ಸರ್ಕಾರಿ ಮುದ್ರಣಾಲಯ, ಕೆಂಗೇರಿ, ಬೆಂಗಳೂರು-59.